Sept 57


# ಕಸ್ತೂರಿ

ಕನ್ನಡ ಡೈಜೆಸ್ಟ್

ಪ್ರತಿತಿಂಗಳ ೧ನೆ ದಿನಾಂಕ ಪ್ರಕಟವಾಗುವದು.

ಮುಖ್ಯ ಸಂಪಾದಕರು :

**ಮೊಹರೆ ಹನುಮಂತರಾಯರು**

ಪ್ರಕಾಶಕರು :

**ಲೋಕಶಿಕ್ಷಣ ಟ್ರಸ್ಟ್-ಹುಬ್ಬಳ್ಳಿ**

ಕಚೇರಿ :

**ಸಂಯುಕ್ತ ಕರ್ನಾಟಕ ಕಾರ್ಯಾಲಯ**

**ಹುಬ್ಬಳ್ಳಿ**

ಮುದ್ರಕರು :

ಸಂಯುಕ್ತ ಕರ್ನಾಟಕ ಮುದ್ರಣಾಲಯ

ಹುಬ್ಬಳ್ಳಿ

ಮುಖಪುಟ ಚಿತ್ರ :

ವೀಣಾಪಾಣಿ ಸರಸ್ವತಿ

( ಮದುರೆ )

ಕೆ. ಎಸ್. ಪೋತದಾರ

ಚಂದಾ ದರ :

| | | |
|---|---|---|
| ವಾರ್ಷಿಕ (ಅಂಚೆಸೇರಿ) | | ರೂ. ೮.೦೦ |
| ಅರ್ಧ ವರ್ಷ | — | ರೂ. ೪.೫೦ |
| ಬಿಡಿ ಸಂಚಿಕೆ | — | ರೂ. ೦.೭೫ |


## ಲೇಖಕರಿಗೆ ಸೂಚನೆ

ಕಸ್ತೂರಿಯಲ್ಲಿ ಪ್ರಕಟನೆಗಾಗಿ ಲೇಖ, ಪ್ರಬಂಧ, ಕಥೆ ಮೊದಲಾದವನ್ನು ಸ್ವೀಕರಿಸಲಾಗುವದು. ಕಾಗದದ ಒಂದೇ ಮಗ್ಗಲಿಗೆ ವಿರಳವಾಗಿ ಬರೆದು ಕಳಿಸಬೇಕು. ಲೇಖಕರು ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ತಿಳಿಸಬೇಕಲ್ಲದೆ, ಅನುವಾದ, ರೂಪಾಂತರ ಇಲ್ಲವೆ ಸಾಧಾರ ಲೇಖಗಳಾದರೆ ಅವುಗಳ ಮೂಲ ಲೇಖಕ ಹಾಗು ಪ್ರಕಾಶಕರ ಹೆಸರು ವಿಳಾಸಗಳನ್ನೂ ಒದಗಿಸಬೇಕು. ಮೂಲ ಲೇಖಕರ ಅನುಮತಿ ಪಡೆದೇ ಲೇಖಗಳನ್ನು ಕಳಿಸಿದರೆ ಅವುಗಳ ಮೇಲೆ ಬೇಗನೆ ನಿರ್ಣಯಕ್ಕೆ ಬರಲು ಸುಲಭವಾಗುವದು. ಅಸ್ವೀಕೃತ ಲೇಖಗಳು ತಿರುಗಿ ಬೇಕಾಗಿದ್ದರೆ **ಲೇಖಗಳ ಸಂಗಡವೇ** ತಿರುಗಿ ಕಳಿಸಲು ಅವಶ್ಯಬೀಳುವಷ್ಟು ಅಂಚೆ ತಿಕೀಟುಗಳನ್ನೂ ಕಳಿಸಿರಬೇಕು. ಲೇಖ ಸ್ವೀಕೃತವಾದರೆ ಯಥಾವಕಾಶ ಪ್ರಕಟಿಸಲಾಗುವದು; ಆದರೂ ಸಾಮಾನ್ಯವಾಗಿ ಸ್ವೀಕೃತ ಲೇಖಗಳ ಸ್ವೀಕಾರದ ಸುದ್ದಿಯನ್ನು ಲೇಖ ತಲುಪಿದ ನಾಲ್ಕು ವಾರದೊಳಗಾಗಿ ಲೇಖಕರಿಗೆ ತಿಳಿಸಲಾಗುವದು. ಲೇಖಕರು ತಮ್ಮ ಲೇಖಗಳ ಸ್ಥಳಪ್ರತಿಗಳನ್ನು ಕಾಯ್ದಿಟ್ಟುಕೊಳ್ಳುವದೊಳಿತು.

ಲೇಖ ಪ್ರಕಟವಾದರೆ "ಕಸ್ತೂರಿ" ಯು ಆಗಿಂದಾಗ್ಗೆ ಗೊತ್ತುಪಡಿಸಿಕೊಂಡ ಕ್ರಮದಲ್ಲಿ ಪ್ರತಿಫಲವನ್ನು ಆದಷ್ಟು ಬೇಗ ಕೊಡಲಾಗುವದು. ಲೇಖಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ.

## ಚಂದಾದಾರರಿಗೆ ಸೂಚನೆ

ಪ್ರತಿತಿಂಗಳ "ಕಸ್ತೂರಿ" ಆಯಾ ತಿಂಗಳ ೧ನೇ ದಿನಾಂಕದೊಳಗೇ ಪ್ರಕಟವಾಗುವುದು. ಅದು ಚಂದಾದಾರರಿಗೆ ಆಯಾ ತಿಂಗಳ ೫ ನೇ ದಿನಾಂಕದೊಳಗೆ ತಲಪುವದು. ಹಾಗೆ ಬಾರದಿದ್ದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ನಮಗೆ ತಿಳಿಸಬೇಕು. ಚಂದಾದಾರರು ಕಾರ್ಯಾಲಯದೊಡನೆ ಪತ್ರವ್ಯವಹಾರ ಮಾಡುವಾಗ್ಗೆ ತಮ್ಮ ಚಂದಾ ನಂಬರು ಕಾಣಿಸಲು ಮರೆಯಬಾರದು.

# ಈ ಸಂಚಿಕೆಯಲ್ಲಿ



ಕಸ್ತೂರಿ

ವರ್ಷ ೨ ಸಪ್ಟಂಬರ್ ೧೯೫೭ ಸಂಚಿಕೆ ೧

# ಕ್ಷಣಿಕ ಸೌಂದರ್ಯ

ಬ್ರಜಲಾಲ ಬಿಯಾಣಿ

ಅಂದು ಎಂಟು ಗಂಟೆಗೆ ಒಬ್ಬ ಶ್ರೀಮಂತ ಮಿತ್ರರಲ್ಲಿಗೆ ಹೋಗಬೇಕಾಯಿತು. ಅವರ ಕೋಣೆ ಸುಸಜ್ಜಿತವಾಗಿರುತ್ತದೆ. ಪತಿಪತ್ನಿಯರಿಬ್ಬರೂ ಸೌಂದರ್ಯ ಮತ್ತು ಕಲಾಪ್ರಿಯರು. ಒಂದು ಬದಿಗೆ ಅಮೃತಶಿಲೆಯ ಚಿಕ್ಕ ಮೇಜಿನ ಮೇಲೆ ಫೂಲದಾನಿಯಲ್ಲಿ ಅತ್ಯಂತ ಮನೋಹರವಾದ ಗುಲಾಬಿ ಗೊಂಚಲನ್ನು ಕಂಡೆ.

ಈ ಕೋಣೆಯಲ್ಲಿ ಹೂಗೊಂಚಲನು ಕಂಡದ್ದು ಇದೇ ಮೊದಲಲ್ಲ. ಆದರೆ ಇಂದಿನದು ಬಲು ವಿಲಕ್ಷಣ ಸುಂದರ ಗೊಂಚಲಾಗಿತ್ತು. ಕುರ್ಚಿಯಿಂದೆದ್ದು ಮೆಲ್ಲನೆ ಅದರ ಸಮೀಪಕ್ಕೆ ಹೋದೆ. ಹತ್ತಿರ ಹೋದರೂ ಪರಿಮಳವೇ ಇಲ್ಲ. ಆಶ್ಚರ್ಯದಿಂದ ಅವುಗಳ ಮೇಲೆ ಕೈಯಾಡಿಸಿದೆ. ಬಲು ಬಿರುಸಾದ ದಲಗಳು. ಬಣ್ಣದ ತಂತಿಯ ಮೇಲೆ ಎಲ್ಲ ಹೂಗಳನ್ನೂ ಹಚ್ಚಿದ್ದರು. ಅವುಗಳಲ್ಲಿ ಕೋಮಲತೆಯೂ ಇಲ್ಲ, ಸೌರಭವೂ ಇಲ್ಲ.

ನನ್ನ ಭಾವಭಂಗಿಯನ್ನು ನೋಡಿ ಮಿತ್ರರಿಗೆ ನಗೆ ಬಂತು. "ನಿನ್ನೆಯೇ ಮುಂಬಯಿಯಿಂದ ಬಂದಿದೆ. ಬಲು ಮುದ್ದಾಗಿದೆ. ನಮ್ಮಿಬ್ಬರಿಗೂ ಬಹಳ ಮನಸಿಗೆ ಬಂತು."

ಮಿತ್ರಪತ್ನಿ ಹೇಳಿದಳು, "ಎರಡು ಬಂದಿವೆ. ಒಂದನ್ನು ನಿಮ್ಮಲ್ಲಿಗೆ ಕಳಿಸುತ್ತೇವೆ ಬೇಕಾದರೆ."

"ಬೇಡ, ನನಗೆ ನಿರ್ಜೀವ ಸೌಂದರ್ಯ ಬೇಕಾಗಿಲ್ಲ" ಎಂದೆ ನಾನು.

"ಇದೆಲ್ಲಿಯ ಮಾತು? ನೀವು ಸೌಂದರ್ಯದ ಭಕ್ತರು, ಸೌಂದರ್ಯದಲ್ಲಿಯೇ ಜೀವನವಿದೆ. ಮೇಲಾಗಿ ಇದು ಸ್ಥಾಯಿಯಾದ ಸೌಂದರ್ಯ. ತೋಟದ ಹೂ ಬಾಡಿ ಹೋಗುತ್ತದೆ."

"ಸೌಂದರ್ಯದೊಡನೆ ಕೋಮಲತೆ ಮತ್ತು ಸೌರಭ ಇಲ್ಲದೆ ಹೋದರೆ ಅದು ಬರಿ ಜಡ ಸೌಂದರ್ಯ. ಸ್ಥಾಯಿಯಾದರೂ ಮಾರ್ದವ ಮತ್ತು ಸೌರಭರಹಿತವಾದ ಜೀವನ ತುಚ್ಛವಾಗಿದೆ. ಅಮರತ್ವದ ಭಾವನೆಯು ಜೀವನದ ನಿಜವಾದ

ಸೌಂದರ್ಯವನ್ನು ಹಾಳುಗೆಡಹಿದೆ. ಕ್ಷಣಿಕವಾದ ಆನಂದದ ಕಣವೇ ಮನುಷ್ಯನ ನಿಜವಾದ ಬಂಡವಾಳ" ಎಂದು ನಾನು ವಾದಿಸಿದೆ.

ಮಿತ್ರನೆಂದ: "ಇಲ್ಲ. ಸ್ಥಾಯಿತ್ವದಲ್ಲೇ ನಿಜವಾದ ಆನಂದವಿದೆ. ಅನಾದಿ-ಅನಂತವಾದ ಈಶ್ವರನ ಸೌಂದರ್ಯವು ಈ ಕ್ಷಣಪರಿವರ್ತಿ ಜಗತ್ತಿಗೆ ಎಂದಾದರೂ ಬಂದೀತೆ?"

"ನೀವು ಸ್ಥಾಯಿತ್ವದಲ್ಲಿಯೇ ನಿಜವಾದ ಸೌಂದರ್ಯವನ್ನು ಕಾಣುತ್ತಿದ್ದರೆ, ಈ ತಂಗಿಯನ್ನು ಹೊಡೆದೋಡಿಸಿ ಅವಳ ಸ್ಥಾನದಲ್ಲಿ ಅಮೃತಶಿಲೆಯ ಮೂರ್ತಿಯನ್ನು ನಿಲ್ಲಿಸಬಾರದೇಕೆ? ಅದು ಸುಂದರವೂ ಸಂಗಡಲೇ ಚಿರಸ್ಥಾಯಿಯೂ ಆಗುವುದು."

ಮಿತ್ರದಂಪತಿಯ ಬಾಯಿಯಿಂದ ಮಾತೇ ಹೊರಡಲಿಲ್ಲ. ಮತ್ತೊಮ್ಮೆ ಬಂದಾಗ ಕೋಣೆಯಲ್ಲಿ ತೋಟದ ಹೂಗಳೇ ಇರುವುದನ್ನು ನೋಡಿದೆ.






## ಹನುಮ ಕಂಡ ಹೂ

ಸಮರ್ಥ ರಾಮದಾಸರು ಹಗಲಲ್ಲಿ ದಿನವೂ ರಾಮಕಥಾ ಪ್ರಸಂಗವನ್ನು ಬರೆಯುತ್ತಿದ್ದರು. ರಾತ್ರಿ ಅದನ್ನು ಶಿಷ್ಯರಿಗೂ ಭಕ್ತರಿಗೂ ಓದಿ ಹೇಳುತ್ತಿದ್ದರು. ಸ್ವತಃ ಹನುಮಂತನು ವೇಷ ಮರೆಸಿಕೊಂಡು ಅಲ್ಲಿ ರಾಮಕಥೆಯನ್ನು ಕೇಳುತ್ತಿದ್ದನು.

ಒಂದು ದಿನ ಕಥೆ ಕೇಳುತ್ತ ಕೇಳುತ್ತ ಹನುಮಂತನಿಗೆ ತಡೆಯದಾಯಿತು. "ಅಶೋಕವನದಲ್ಲಿ ನಾನು ಬಿಳಿತಾವರೆಗಳನ್ನು ನೋಡಿದೆನೆಂದಿರಲ್ಲ, ಅದು ತಪ್ಪು. ನಾನು ನೋಡಿದ್ದು ಕೆಂದಾವರೆಗಳನ್ನು. ತಪ್ಪನ್ನು ತಿದ್ದಿಕೊಳ್ಳಿರಿ" ಎಂದಾತ ಹೇಳಿದ.

ರಾಮದಾಸರು ಹೇಳಿದರು: "ನಿಮಗೀಗ ಮರೆತು ಹೋಗಿದೆ. ಆ ಕಮಲಗಳು ಕೆಂಪಗಿದ್ದಿಲ್ಲ, ಬೆಳ್ಳಗೇ ಇದ್ದವು."

ಹನುಮಂತ ಸಿಡಿದೆದ್ದು "ನಾನು ನನ್ನ ಸ್ವಂತ ಕಣ್ಣುಗಳಿಂದ ನೋಡಿದ್ದೇನೆ; ನೀವು ಹೀಗನ್ನುತ್ತೀರಲ್ಲ!" ಎಂದ.

ಕೊನೆಗೆ ಸ್ವತಃ ರಾಮದೇವರೇ ಈ ಸಮಸ್ಯೆಯನ್ನು ಬಿಡಿಸಿದರು. ಅವರು ನಸುನಕ್ಕು ಹೇಳಿದರು: "ಹನುಮಂತಾ, ನೀನು ನಿಜವಾಗಿ ಬಿಳಿದಾವರೆಗಳನ್ನೇ ನೋಡಿದ್ದೆ. ಆದರೆ ಆ ಸಮಯದಲ್ಲಿ ನಿನಗೆ ಮಿತಿಮೀರಿದ ಕೋಪವಿದ್ದುದರಿಂದ ನಿನ್ನ ಕಣ್ಣುಗಳು ಕೆಂಪಾಗಿದ್ದವು. ಅದರಿಂದಲೇ ನಿನಗೆ ಬಿಳಿದಾವರೆಗಳು ಕೆಂದಾವರೆಗಳಾಗಿ ಕಾಣಿಸಿದವು."

— ವಿನೋಬಾ ಭಾವೆ

# ಭಾರತದಲ್ಲಿ ಅಣುಶಕ್ತಿ

**ಅಣುಶಕ್ತಿ ತೆಗೆಯಲು ಬೇಕಾದ ಪದಾರ್ಥಗಳೆಲ್ಲ ಭಾರತದಲ್ಲೇ ಸಿಗುತ್ತವೆ.**
**ಭಾರತ ಈ ದಿಶೆಯಲ್ಲಿ ಬಹಳ ಪ್ರಗತಿ ಸಾಧಿಸಿದೆ**

ಇದೇ ಜನವರಿ ೨೦ ರಂದು ಮುಂಬಯಿಯ ಬಳಿ ಟ್ರಾಂಬೆಯಲ್ಲಿ ಭಾರತದ ಅಣುಶಕ್ತಿ ಸಂಸ್ಥೆಯನ್ನು ಪ್ರಧಾನಮಂತ್ರಿ ನೆಹರೂ ಅವರು ಉದ್ಘಾಟಿಸಿದರು. ಅದರ ಸಂಗಡಲೇ ಅವರು ಭಾರತದ ಪ್ರಥಮ ಅಣುಶಕ್ತಿ ರಿಯಾಕ್ಟರ್ ಯಂತ್ರವನ್ನೂ ಔಪಚಾರಿಕವಾಗಿ ಉದ್ಘಾಟಿಸಿ ಅದಕ್ಕೆ "ಅಪ್ಸರಾ" ಎಂದು ಹೆಸರಿಟ್ಟರು. ಈ ಸಮಾರಂಭದಲ್ಲಿ ೩೦ ವಿದೇಶಗಳ ೧೦೦ ರಷ್ಟು ವಿಜ್ಞಾನಿಗಳು ಭಾಗವಹಿಸಿದ್ದರು. ಅವರಲ್ಲಿ ಹಾರ್ವೆಲ್ಲಿನಲ್ಲಿರುವ ಬ್ರಿಟಿಶ ಅಣುಶಕ್ತಿ ಸಂಸ್ಥೆಯ ಉಪ-ಡೈರೆಕ್ಟರರಾದ ಡಾ. ಜೆ. ಜೆ. ಶಟ್ಲಂಡರೂ ಒಬ್ಬರಾಗಿದ್ದರು.

ಈ ಅಣುಶಕ್ತಿ ಸಂಸ್ಥೆಯ ಸ್ಥಾಪನೆಯಲ್ಲಿ ಭಾರತದ ಮುಖ್ಯ ಉದ್ದೇಶ ಅಣುಶಕ್ತಿಯಿಂದ ವಿದ್ಯುತ್ತನ್ನು ಉತ್ಪಾದಿಸುವುದು ಮತ್ತು ರಿಯಾಕ್ಟರಿನಿಂದ ತಯಾರಾದ ರೇಡಿಯೋ ಐಸೊಟೋಪುಗಳನ್ನು ಕೃಷಿ, ಉದ್ದಿಮೆ, ಔಷಧ ಮತ್ತು ಆರೋಗ್ಯ ಸುಧಾರಣೆಗಾಗಿ ಉಪಯೋಗಿಸುವುದು. ಭಾರತದ ಅಣುಶಕ್ತಿ ಶಾಖೆಯ ಕಾರ್ಯದರ್ಶಿಗಳಾದ ಡಾ. ಹೋಮಿ ಜೆ. ಭಾಭಾ ಅವರು ಅಣುಶಕ್ತಿಯಿಂದ ವಿದ್ಯುತ್ ಶಕ್ತಿಯನ್ನು ಉತ್ಪಾದಿಸುವುದೇ ಭಾರತದ ಮುಖ್ಯ ಉದ್ದೇಶವೆಂದು ಹೇಳಿದ್ದಾರೆ. ಎರಡನೇ ಪಂಚವಾರ್ಷಿಕ ಯೋಜನೆಯ ಅಂತ್ಯದೊಳಗೆ ಭಾರತದಲ್ಲಿ ಪ್ರಥಮ ಅಣು ವಿದ್ಯುತ್ ಕೇಂದ್ರ ಪ್ರಾರಂಭವಾಗಿ ಬಿಡಬಹುದೆಂದು ಅವರು ಆಶೆಯನ್ನು ವ್ಯಕ್ತಪಡಿಸಿದ್ದಾರೆ. ಇದಾದ ಮೇಲೆ ಹಡಗುಗಳನ್ನು ಅಣುಶಕ್ತಿಯಿಂದ ನಡೆಸುವ ಸಾಹಸ ಕೈಕೊಳ್ಳಬಹುದು.

ಅಣುಶಕ್ತಿ ಕ್ಷೇತ್ರದಲ್ಲಿ ಇಂದು ದುಡಿಯುತ್ತಿರುವ ಜಗತ್ತಿನ ಆರು ಪ್ರಪ್ರಥಮ ರಾಷ್ಟ್ರಗಳಲ್ಲಿ ಭಾರತವೂ ಒಂದಾಗಿದೆಯೆಂದು ಡಾ. ಭಾಭಾರ ಮತ. ೧೯೪೮ರಲ್ಲಿಯೇ ಭಾರತದಲ್ಲಿ ಅಣುಶಕ್ತಿ ಮಂಡಲ ಸ್ಥಾಪಿಸಲ್ಪಟ್ಟಿತು. ಭಾರತದಲ್ಲಿ ಅಣುಶಕ್ತಿಯ ಉತ್ಪಾದನೆಗೆ ತಳಪಾಯ ಹಾಕುವುದು ಮತ್ತು ಪರಮಾಣು ವಿಷಯದಲ್ಲಿ ತಜ್ಞರಾದ ವಿಜ್ಞಾನಿಗಳನ್ನು ತರಬೇತುಗೊಳಿಸುವುದು ಅದರ ಉದ್ದೇಶವಾಗಿತ್ತು. ವಿಜ್ಞಾನಿಗಳ ಬಳಗವನು ತಯಾರಿಸುವುದರಲ್ಲಿ ೧೯೪೫ರಲ್ಲಿ ಸ್ಥಾಪಿಸಲ್ಪಟ್ಟ ಟಾಟಾ ಮೂಲಭೂತ ಸಂಶೋಧನ ಸಂಸ್ಥೆಯಿಂದ ತುಂಬ ಸಹಾಯವಾಯಿತು. ೧೯೫೪ರಲ್ಲಿ ಭಾರತ ಸರಕಾರದ ಅಣುಶಕ್ತಿಶಾಖೆ ಪ್ರಾರಂಭವಾಗಿ ಅಣುಶಕ್ತಿ ಕ್ಷೇತ್ರವನ್ನು ಅಧೀನಕ್ಕೆ ತೆಗೆದುಕೊಂಡಿತು. ಟ್ರಾಂಬೆಯಲ್ಲಿ ಸ್ಥಾಪಿತವಾದ ಅಣುಶಕ್ತಿ ಸಂಸ್ಥೆಯು ಈ ಕ್ಷೇತ್ರದಲ್ಲಿ ಭೌತ-ವಿಜ್ಞಾನ, ರಸಾಯನಶಾಸ್ತ್ರ ಮತ್ತು ಎಂಜಿನಿಯರಿಂಗ್ ಎಂಬ ಮುಖ್ಯ ವಿಭಾಗಗಳನ್ನೊಳಗೊಂಡಿದೆ.

ಟ್ರಾಂಬೆಯಲ್ಲಿ ಪ್ರಾರಂಭವಾಗಿರುವ ಅಣುಶಕ್ತಿ ರಿಯಾಕ್ಟರ ಯಂತ್ರವನ್ನು ಅಣುಶಕ್ತಿ ಸಂಸ್ಥೆಯ ಭಾರತೀಯ ವಿಜ್ಞಾನಿಗಳೇ ಸ್ವತಃ ಯೋಜಿಸಿ ಕಟ್ಟಿದ್ದಾರೆ. ವಾಸ್ತವಿಕವಾಗಿ ಇದು ೧೯೫೬ ಅಗಸ್ಟನಿಂದಲೇ ಕೆಲಸಕ್ಕೆ ತೊಡಗಿದೆ. ಅದು "ಈಜುಕೊಳ"ದ ಮಾದರಿಯ ಯಂತ್ರ

"ಎನ್‌ವಾಯ್" ಇಂದ

ವಾಗಿರುವುದರಿಂದಲೇ ಅಪ್ಸರಾ ಎಂದು ಹೆಸರಿಡಲಾಗಿದೆ. ಇದರ ಆಳವಾದ "ಕೊಳ" ದಲ್ಲಿ ನೀರು ತುಂಬಿ ಅದರಲ್ಲಿ ಅಣುಶಕ್ತಿಗೆ ಬೇಕಾದ ಉರುವಲೆನಿಸಿದ ಯುರೇನಿಯಂ ಧಾತುವನ್ನು ತೂಗಹಾಕಿ ಸದ್ಯಕ್ಕೆ ವೈದ್ಯಕೀಯ ಮತ್ತು ಇತರ ಸಂಶೋಧನೆಗಳಿಗೆ ಬೇಕಾದ ರೇಡಿಯೋ ಕ್ರಿಯಾಶೀಲ ಐಸೋಟೋಪುಗಳನ್ನು ತಯಾರಿಸುತ್ತಿದ್ದಾರೆ. ಭಾವೀ ಯೋಜನೆಗಳಿಗಾಗಿ ನಮ್ಮ ಎಂಜಿನಿಯರರು ಇಲ್ಲಿ ಅನುಭವ ಪಡೆಯುತ್ತಿದ್ದಾರೆ.

ಅಪ್ಸರಾ ಅಲ್ಲದೆ ಕೊಲಂಬೊ ಯೋಜನೆಯ ಅನ್ವಯ ಭಾರತಕ್ಕೆ ಕೆನಡಾದಿಂದ ಇನ್ನೊಂದು ರಿಯಾಕ್ಟರು ದಾನವಾಗಿ ಬಂದಿದೆ. ಇದು ತುಂಬ ಶಕ್ತಿಶಾಲಿ ಯಂತ್ರ. ಬರುವ ವರ್ಷ ಇದು ಕೆಲಸ ಪ್ರಾರಂಭಿಸಬಹುದು. ಆಗ ಇನ್ನೂ ಮುಂದುವರಿದ ಪ್ರಬಲ ಅಣುಶಕ್ತಿ ಯಂತ್ರಗಳ ರಚನೆಗೆ ಭಾರತದ ವಿಜ್ಞಾನಿಗಳೂ ಎಂಜಿನಿಯರರೂ ಇಲ್ಲಿ ತರಬೇತಾಗುವರು.

ಭಾರತದ ಅಣುಶಕ್ತಿ ಯೋಜನೆ ಫಲಿಸಬೇಕಾದರೆ ಅದಕ್ಕೆ ಬೇಕಾದ ಸರಕು ಮತ್ತು ವೈಜ್ಞಾನಿಕ ಕೌಶಲ ಇವೆರಡರಲ್ಲಿಯೂ ನಾವು ಸ್ವಾವಲಂಬಿಗಳಾಗಬೇಕು. ಬೇಕಾದ ಮುಖ್ಯ ಪದಾರ್ಥಗಳೆಂದರೆ, ಯುರೇನಿಯಂ ಮತ್ತು ಥೋರಿಯಂ ಧಾತುಗಳು; ಗ್ರಾಫೈಟ್, ಬೆರಿಲಿಯಾ ಅಥವಾ ಭಾರಜಲ; ಝಿರ್ಕೋನಿಯಂ, ಬೆರಿಲಿಯಂ ಅಥವಾ ನಿಯೋಬಿಯಂ; ಬೊರೋನ್, ಸೋಡಿಯಂ ಅಥವಾ ಬಿಸ್ಮತ್.

ತಿರ್ವಾಂಕೂರಿನ ಮತ್ತು ಮದ್ರಾಸಿನ ಸಮುದ್ರತೀರದಲ್ಲಿ ಸೇಕಡಾ ೦.೫ ರಿಂದ ೨.೦ ವರೆಗೆ ಮೊನಾಜೈಟ್ ಇರುವ ಮಳಲು ಇದೆ. ಇದರಿಂದ ಅಣುಶಕ್ತಿಗೆ ಬೇಕಾದ ಇಂಧನಗಳಾದ ಯುರೇನಿಯಂ ಮತ್ತು ಥೋರಿಯಂ ಧಾತುಗಳನ್ನು ಸುಲಭವಾಗಿ ತೆಗೆಯಬಹುದು. ಕೇರಳ ರಾಜ್ಯದ ತೀರದಲ್ಲೆ ೧೦ ಲಕ್ಷ ಟನ್ ಮೊನಾಜೈಟ್ ಸಿಗುವುದೆಂದು ಲೆಕ್ಕವಿದೆ. ಮದ್ರಾಸ ತೀರ ಸೇರಿದರೆ ೨೦ ಲಕ್ಷ ಟನ್ ಮೊನಾಜೈಟ್ ಸಿಗಲು ಮೋಸವಿಲ್ಲ. ಇದರಿಂದ ಸಿಗಬಹುದಾದ ಯುರೇನಿಯಂ ಧಾತುವೇ ಹಲವು ಸಾವಿರ ಟನ್ನುಗಳಷ್ಟಾಗುತ್ತದೆ; ಥೋರಿಯಂ ಇನ್ನೂ ಹೆಚ್ಚು ಹೊರಡುವುದು.

ಇದಲ್ಲದೆ ಭಾರತ ಸರಕಾರವು ಸೇಕಡಾ ೦.೪ ರಷ್ಟು ಯುರೇನಿಯಂ ಭಸ್ಮ ಇರುವ ೫೦ ಟನ್ನಿನಷ್ಟಾದರೂ ಯುರೇನಿಯಂ ಅದರುಗಳಿರುವ ಸ್ಥಳಗಳನ್ನು ತೋರಿಸಿದವರಿಗೆ ರೂ. ೧೦,೦೦೦ ಬಹುಮಾನವನ್ನು ಜಾಹೀರು ಮಾಡಿದೆ. ದೇಶದ ಅನೇಕ ಹೊಸ ಸ್ಥಳಗಳಲ್ಲಿ ಯುರೇನಿಯಂ ದೊರೆತ ವರದಿಗಳು ಬಂದಿವೆ. ಆದರೆ ಇವು ವ್ಯಾಪಾರಿ ದೃಷ್ಟಿಯಿಂದ ಎಷ್ಟು ಲಾಭದಾಯಕವಾಗುವುವೆಂಬುದು ಅಷ್ಟಿಷ್ಟು ಅಗೆದ ಮೇಲೆಯೇ ತಿಳಿಯಬೇಕಷ್ಟೇ.

ಕೇರಳದ ಸಮುದ್ರ ಕರಾವಳಿಯಲ್ಲಿರುವ ಮೊನಾಜೈಟ್ ಮಳಲನ್ನು ರೂಪಾಂತರಿಸಲು ಭಾರತ ಮತ್ತು ಕೇರಳ ಸರಕಾರಗಳ ಸಮಸಮ ಪಾಲು ಬಂಡವಾಳವುಳ್ಳ ಒಂದು ಕಂಪನಿಯನ್ನು ಸ್ಥಾಪಿಸಲಾಗಿದೆ. ಈ ಕಂಪನಿಯು ಅಲ್ಲಿ ಈಗಾಗಲೇ ಮೊನಾಜೈಟ್ ತೆಗೆಯುತ್ತಿರುವ ಸಣ್ಣ ಸಣ್ಣ ಸಂಸ್ಥೆಗಳನ್ನು ( ಎರಡನ್ನು ಹೊರತು ) ಕೊಂಡುಕೊಳ್ಳುವುದು. ಆಳ್ವಾಯಿಯಲ್ಲಿರುವ ಕಾರಖಾನೆ ವರ್ಷಕ್ಕೆ ೩,೦೦೦ ಟನ್ ಮೊನಾಜೈಟ್ ಶುದ್ಧೀಕರಿಸಬಲ್ಲದು. ಅಲ್ಲಿ ತಯಾರಾದ ಯುರೇನಿಯಂ-ಥೋರಿಯಂ "ವಡೆ"ಗಳನ್ನು ಟ್ರಾಂಬೆಯಲ್ಲಿರುವ ಕಾರಖಾನೆಯು ಶುದ್ಧೀಕರಿಸಿ ಥೋರಿಯಂ ನೈಟ್ರೇಟ್ ಮತ್ತು ಯುರೇನಿಯಂ ತೆಗೆಯುವುದು. ಈ ಯುರೇನಿಯಂ ಮಾತ್ರವೇ ವರ್ಷಕ್ಕೆ ೧೦೦ ಕೋಟಿ ಟನ್ ಕಲ್ಲಿದ್ದಲಿಯಷ್ಟು ಶಕ್ತಿಯನ್ನು ಕೊಡಬಲ್ಲದು. ಇದಲ್ಲದೆ ಘಟಶಿಲಾದಲ್ಲಿ ಇನ್ನೊಂದು ಕಾರಖಾನೆ ಸ್ಥಾಪಿತವಾಗಿದ್ದು ಅದು ತಾಮ್ರದ ಅದಿರನ್ನು ಶುದ್ಧೀಕರಿಸುವ ಇಂಡಿಯನ್ ಕಾಪರ್ ಕಾರ್ಪೊರೇಶನ್ನಿನವರ ಸಹಕಾರದಿಂದ ಆ ಅದಿರನಲ್ಲಿ ಶೇಷವಾಗುಳಿಯುವ ಯುರೇನಿಯಮನ್ನು ತೆಗೆಯಲಿದೆ.

ಭಾರತದಲ್ಲಿ ನೆಲ್ಲೂರು, ಬಿಹಾರ, ರಾಜಸ್ಥಾನಗಳಲ್ಲಿರುವ ಅಭ್ರಕ ( Mica ) ದ ಅದಿರುಗಳೊಡನೆ ಧಾರಾಳವಾಗಿ ಬೆರಿಲ್ ಸಿಗುತ್ತದೆ. ಇದ

ರಿಂದ ವರ್ಷಕ್ಕೆ ೧,೦೦೦ ಟನ್ ಲೋಹರೂಪ ಬೇರೀಲಿಯಂ ಹೊರಡಲಡ್ಡಿಯಿಲ್ಲ. ಇದು ರಿಯಾಕ್ಟರ ಯಂತ್ರದಲ್ಲಿ "ಪರಮಾಣವಿಕ ರಾಶಿ" ( Atomic pile ) ಗಳಿಂದ ನ್ಯೂಟ್ರಾನುಗಳು ಹಾರಿಹೋಗದಂತೆ ಪ್ರತಿಬಂಧಿಸಲು ಅತ್ಯುತ್ತಮ ಪದಾರ್ಥವಾಗಿದೆ. ಇದು ಈ ಕಾರ್ಯದಲ್ಲಿ ಗ್ರಾಫೈಟ್ ಮತ್ತು ಭಾರಜಲಗಳಿಗಿಂತಲೂ ಶ್ರೇಷ್ಠವಾಗಿದೆ. ಶುದ್ಧ ಗ್ರಾಫೈಟ್ ತಯಾರಿಸಲಿಕ್ಕೂ ಪಂಜಾಬದ ನಂಗಲದಲ್ಲಿರುವ ಹೊಸ ಕೃತಕ ಗೊಬ್ಬರ ಕಾರಖಾನೆಯಲ್ಲಿ ಭಾರಜಲ ತಯಾರಿಸಲಿಕ್ಕೂ ಯೋಜನೆ ಮಾಡಲಾಗಿದೆ.

ಇನ್ನೊಂದು ಅವಶ್ಯಕ ಪದಾರ್ಥವಾದ ಝಿರ್ಕೋನಿಯಂ ಲೋಹವನ್ನೊಳಗೊಂಡ ಝಿರ್ಕನ್ ಅದಿರು ಭಾರತದಲ್ಲಿ ೫ ಕೋಟಿ ಟನ್ನಾದರೂ ಇರಬೇಕು. ಅದರಿಂದ ಶುದ್ಧ ಝಿರ್ಕೋನಿಯಂ ತೆಗೆಯಲು ಒಂದು ಕಾರಖಾನೆ ಸ್ಥಾಪಿಸಲಾಗುವುದು.

ಭಾರತದ ಪ್ರಥಮ ಅಣುಶಕ್ತಿ ಕೇಂದ್ರವು ಬ್ರಿಟಿಶ ಕಾಲ್ಡರ್ ಹಾಲ್ ಮಾದರಿಯ ಸುಧಾಸಿದ ಆವೃತ್ತಿಯಾಗಬಹುದೆಂದು ತೋರುತ್ತದೆ. ಇದರಲ್ಲಿ ಅತ್ಯಂತ ಶುದ್ಧವಾದ ಗ್ರಾಫೈಟನ್ನು ರಿಯಾಕ್ಟರಿನಲ್ಲಿಕ್ಕಿ ಅದರ ಮಧ್ಯದಲ್ಲಿ ಯುರೇನಿಯಂ ಲೋಹವನ್ನು ಹಾಕಲಾಗುತ್ತದೆ. ಅದರಿಂದ ಉತ್ಪನ್ನವಾದ ಉಷ್ಣತೆಯನ್ನು ಗ್ಯಾಸ್ ಅಥವಾ ನೀರಿನ ಮೂಲಕ ಹೀರಿಕೊಂಡು ಉಗಿ ಅಥವಾ ವಿದ್ಯುತ್ತಿನ ಉತ್ಪಾದನೆಗೆ ವಿನಿಯೋಗಿಸಲಾಗುವುದು.

ಇದಕ್ಕೆ ಖರ್ಚು ಎಷ್ಟು ಬರಬಹುದು? ಬ್ರಿಟಿಶ ಅಣುಶಕ್ತಿ ಶಾಖೆಯು ಕಳೆದ ವರ್ಷ ೧೪,೦೦೦ ಕಿಲೋವಾಟ್ ಶಕ್ತಿಯ ಎರಡು ಶಕ್ತಿ ರಿಯಾಕ್ಟರುಗಳನ್ನು ಜಪಾನಕ್ಕೆ ಮಾರಲು ಸಿದ್ಧವಾಗಿತ್ತು. ಅದಕ್ಕೆ ೩.೭೦ ಕೋಟಿ ಪೌಂಡು ( ಸುಮಾರು ೫೦ ಕೋಟಿ ರೂಪಾಯಿ ) ಬೆಲೆ ಬೀಳುತ್ತದೆಂದೂ ಇಂಧನಕ್ಕೆ ಬೇರೆ ಒಂದು ಕೋಟಿ ಪೌಂಡು ಕೊಡಬೇಕಾಗುವುದೆಂದೂ ಹೇಳಿದ್ದರು.

ಅಂತೂ ಅಣುಶಕ್ತಿಯನ್ನು ಶಾಂತಿಮಯ ಉಪಯೋಗಗಳಿಗೆ ತೊಡಗಿಸುವಲ್ಲಿ ಭಾರತಕ್ಕೆ ಧಾರಾಳ ಅವಕಾಶಗಳಿವೆ. ಆದ್ದರಿಂದ ಭಾರತೀಯರನೇಕರು ಇಂಗ್ಲಂಡ್, ಕೆನಡಾ, ಅಮೇರಿಕಗಳಲ್ಲಿ ಈ ವಿಷಯದಲ್ಲಿ ಉಚ್ಚ ಶಿಕ್ಷಣವನ್ನು ಪಡೆಯುತ್ತಿದ್ದಾರೆ.

---

## ಬುದ್ಧಿ ಬಂದ ಮೇಲೆ

ಆರೋಪಿ— ಸ್ವಾಮಿ, ನಾನು ನನ್ನ ಅಪರಾಧವನ್ನು ಒಪ್ಪಿಕೊಳ್ಳುತ್ತೇನೆ.
ನ್ಯಾಯಾಧೀಶ— ಮೊದಲೇ ಯಾಕೆ ಒಪ್ಪಿಕೊಳ್ಳಲಿಲ್ಲ?
ಆರೋಪಿ— ನಾನು ನಿರಪರಾಧಿ ಎಂದು ತಿಳಿದುಕೊಂಡಿದ್ದೆ. ಈಗ ಸಾಕ್ಷಿಗಳು ಹೇಳಿದ್ದು ಕೇಳಿದ ಮೇಲೆ ನಾನು ಅಪರಾಧಿ ಎನ್ನುವದು ತಿಳಿಯಿತು.

## ನೀನೇ ಯೋಗ್ಯ

ಚಿಕ್ಕ ವಯಸ್ಸಿನ ಇಬ್ಬರು ಹುಡುಗರು ಅಡಿಗೆಮನೆಯ ಬಾಗಿಲಲ್ಲಿ ನಿಂತಿದ್ದರು. ತಾಯಿ ಚಕ್ಕುಲಿ ಕರಿಯುತ್ತಿದ್ದಳು. ಆಗ ಆ ಹುಡುಗರಲ್ಲಿ ಹಿರಿಯವ "ರಾಜು, ಹೋಗಿ ಒಂದು ಚಕ್ಕುಲಿ ಕೊಡೆಂದು ಅಮ್ಮನನ್ನು ಕೇಳು" ಎಂದ. ಅದಕ್ಕೆ ರಾಜು, "ಅಣ್ಣಾ, ನೀನೇ ಕೇಳು. ನನಗಿಂತ ನೀನು ದೊಡ್ಡವ. ಅಮ್ಮನನ್ನು ನನಗಿಂತ ನೀನೇ ಚೆನ್ನಾಗಿ ಬಲ್ಲೆ" ಎಂದ.



# ಗಣೇಶ ಪೂಜೆ ಎಂದಿನಿಂದ ಹುಟ್ಟಿತು?

**ಇಂದಿನ ಅತಿ ಜನಪ್ರಿಯ ದೇವ ೫ನೇ ಶತಕದಿಂದೀಚೆಗೆ ತಲೆಯೆತ್ತಿದನೆಂದು ಸಂಶೋಧಕರೆನ್ನುತ್ತಾರೆ**

ಗಣಪತಿ ಇಂದು ಭಾರತದ ಅತಿ ಜನಪ್ರಿಯ ದೇವತೆಗಳಲ್ಲಿ ಒಬ್ಬನಾಗಿಬಿಟ್ಟಿದ್ದಾನೆ. ಪ್ರತಿಯೊಂದು ಕಾರ್ಯದ ಆರಂಭದಲ್ಲಿಯೂ "ಶ್ರೀ ಗಣೇಶಾಯ ನಮಃ" ಎಂದು ಅವನಿಗೆ ಪೂಜೆ ಸಲ್ಲಿಸಿಯೇ ಮುಂದಿನ ಕೆಲಸ. ಭಾದ್ರಪದ ಶುದ್ಧ ಚತುರ್ಥಿಯ ದಿನ ಅವನಿಗೆ ಸಾರ್ವತ್ರಿಕ ಪೂಜೆ ಸಲ್ಲುತ್ತದೆ. ಶೈವ ವೈಷ್ಣವರೆಲ್ಲರೂ ಗಣಪತಿಯನ್ನು ತಮ್ಮವನನ್ನಾಗಿ ಮಾಡಿಕೊಂಡಿದ್ದಾರೆ.

ಗಣಪತಿಯನ್ನು ಪೂಜಿಸದಿದ್ದರೆ ನೀವು ಮಹಾ ದುಷ್ಪರಿಣಾಮಗಳನ್ನು ಅನುಭವಿಸಬೇಕಾಗುತ್ತದೆ. "ಹಿಂದೆ ರಾವಣನು ಮದದಿಂದ ನಿನ್ನ ಪೂಜಿಸದೆ ಸಂದ ರಣದಲಿ ಗಣನಾಥಾ" ಎಂದು ಪುರಂದರ ದಾಸರು ಹೇಳಿದ್ದಾರೆ. ರಾವಣನೇನು ಶ್ರೀಕೃಷ್ಣ ಕೂಡ ಗಣೇಶ ಚತುರ್ಥಿಯ ದಿನ ಚಂದ್ರನನ್ನು ನೋಡಕೂಡದೆಂಬ ಗಣಪತಿ ಶಾಪವನ್ನು ಮರೆತು ಚಂದ್ರದರ್ಶನ ಮಾಡಿದ್ದಕ್ಕೆ ಫಲ ತೆರಬೇಕಾಯಿತು. ಸ್ಯಮಂತಕ ಮಣಿಯನ್ನು ಅಪಹರಿಸಿದನೆಂಬ ಸುಳ್ಳು ಅಪವಾದಕ್ಕೆ ಗುರಿಯಾದ ಆತನು ಕೊನೆಗ ಗಣಪತಿ ವ್ರತವನ್ನು ಕೈಕೊಂಡು ಅಪವಾದದಿಂದ ಮುಕ್ತನಾದನೆಂದು ಭಾಗವತ ಪುರಾಣ ಹೇಳುತ್ತದೆ.

ಗಣಪತಿಯು ಇಷ್ಟು ಪ್ರಬಲ ಜನಪ್ರಿಯ ದೇವನಾಗಿ ಇಂದು ನಮ್ಮ ಮುಂದಿದ್ದರೂ ಅವನು ಬಹಳ ಪುರಾತನ ದೇವತೆಯೇನೂ ಅಲ್ಲೆಂದು ಸಂಶೋಧಕರು ಹೇಳುತ್ತಾರೆ. ಮಹಾಭಾರತ ಕಾಲದ ಕೊನೆಯ ವರೆಗೂ ಗಣಪತಿ ಶಿವನ ಮಗನೆಂಬ ಕಲ್ಪನೆ ಹುಟ್ಟಿರಲಿಲ್ಲ. ಅವನು ಜನಪ್ರಿಯ ದೇವತೆಯಾಗಿ ತಲೆಯೆತ್ತಿದ್ದು ಗುಪ್ತರ ಕಾಲದಲ್ಲಿ—ಐದನೇ ಶತಮಾನದ ಸುಮಾರಿಗೆ ಎಂದು ಡಾ. ಎ. ಪಿ. ಕರಮರಕರರು ಬರೆದಿದ್ದಾರೆ.

"ಗಣಾನಾಂ ತ್ವಾ ಗಣಪತಿಂ", "ನಿಷುಸೀದ ಗಣಪತೇ ಗಣೇಷು ತ್ವಾಮಾಹುರ್ವಿಪ್ರಥಮಂ ಕವೀನಾಂ" ಇತ್ಯಾದಿಯಾಗಿ ವೇದಗಳಲ್ಲಿ ಗಣಪತಿಯ ಹೆಸರು ಬರುತ್ತದೆ. ಆದರೆ ಆ ಗಣಪತಿಗೂ ನಮ್ಮ ಗಜಮುಖ ಗಣಪತಿಗೂ ಏನೂ ಸಂಬಂಧವಿದ್ದಂತೆ ಕಾಣುವುದಿಲ್ಲ.

ಪ್ರಾಚೀನ ಭಾರತದಲ್ಲಿ "ಗಣ" ಗಳೆಂಬ ರಾಜನಿಲ್ಲದ ಪ್ರಜಾರಾಜ್ಯಗಳಿದ್ದವು. ಅವುಗಳ ಆಯ್ಕೆ ಹೊಂದಿದ ಪ್ರಮುಖರಿಗೆ ಗಣನಾಯಕರೆಂಬ ಹೆಸರಿತ್ತು. ಅವರಿಗೆ ಸಹಜವಾಗಿ ಎಲ್ಲ ಉತ್ಸವಗಳಲ್ಲಿ ಅಗ್ರಪೂಜೆ ಸಲ್ಲುತ್ತಿತ್ತು. ದ್ರಾವಿಡರು ತಮಿಳಿನಲ್ಲಿ "ಪಿಳ್ಳೆಯಾರ್" (ಮರಿಯಾನೆ) ಎಂದು ಹೆಸರಾದ ದೇವತೆಯನ್ನು ಪೂಜಿಸುತ್ತಿದ್ದರು. ಬೌದ್ಧರು ಬುದ್ಧನ ತಪಸ್ಸಿನಲ್ಲಿ ವಿಘ್ನವನ್ನುಂಟುಮಾಡಲೆಳಸಿದ "ಮಾರ" ಎಂಬ ದುರ್ದೇವತೆಯನ್ನು ಕಲ್ಪಿಸಿದ್ದರು. ಇವೂ ಇನ್ನೂ ಅನೇಕ ಕಲ್ಪನೆಗಳೂ ಸೇರಿ ಕ್ರಿ. ಶ. ೫ನೇ

ಶತಮಾನದ ಸುಮಾರಿಗೆ ದೊಡ್ಡ ಹೊಟ್ಟೆಯ, ಆನೆಮೋರೆಯ, ಪೂಜಿಸದವರಿಗೆ ವಿಘ್ನ ತರುವ, ಎಲ್ಲರಿಗಿಂತ ಮೊದಲು ಪೂಜೆಗೊಳ್ಳುವ ದೇವತೆಯಾಗಿ ಗಣಪತಿ ಹಿಂದೂ ಧರ್ಮದಲ್ಲಿ ನೆಲೆಯೂರಿದನು.

ಗಣಪತಿಗೆ ಅನೇಕ ಹೆಸರುಗಳುಂಟು. "ಏಕದಂತ" ಎಂಬುದು ಅವುಗಳಲ್ಲೊಂದು. ತನ್ನ ಮೂಷಿಕ ವಾಹನದ ಮೇಲೆ ಡೊಳ್ಳುಹೊಟ್ಟೆಯನ್ನು ಹೊತ್ತು ಹೋಗುತ್ತಿದ್ದ ಗಣಪತಿಯನ್ನು ಕಂಡು ಚಂದ್ರನಿಗೆ ಸಹಜವಾಗಿ ನಗೆ ಬಂತಂತೆ. ಆದರಿಂದ ಕ್ರುದ್ಧನಾಗಿ ಗಣಪತಿ ಹತ್ತಿರ ಮತ್ತಾವ ಆಯುಧವೂ ಇಲ್ಲದ್ದರಿಂದ ತನ್ನ ಒಂದು ದಾಡೆಯನ್ನೇ ಕಿತ್ತು ಚಂದ್ರನ ಕಡೆ ಬೀಸಹೊರಟನು. ಆಗ ಚಂದ್ರ ಅಂಜಿ ಶರಣಾಗತನಾದನು. ಗಣಪತಿ ಶಾಂತನಾಗಿ ತನ್ನ ಜನ್ಮದಿನದಂದು ಚಂದ್ರನನ್ನು ನೋಡಿದವರು ಕಳ್ಳತನದ ಆರೋಪಕ್ಕೊಳಗಾಗಲಿ ಎಂದಷ್ಟೇ ಶಪಿಸಿ ಚಂದ್ರನನ್ನು ಕ್ಷಮಿಸಿದನು. ಆಗ ಕಿತ್ತ ದಂತ ಹಾಗೇ ಉಳಿದು ಗಣಪತಿ ಏಕದಂತನಾದ. —ಹೀಗೊಂದು ಪುರಾಣ ಕಥೆಯಿದೆ.

"ವಿನಾಯಕ" ಎಂದು ಆತನ ಇನ್ನೊಂದು ಹೆಸರು. ಮಹಾ ಭಾರತದಲ್ಲಿ "ಗಣೇಶ್ವರ", "ವಿನಾಯಕ" ಎಂಬ ದೇವತೆಗಳು ಕಾಣಿಸುತ್ತಾರೆ. ಅವರು ಮನುಷ್ಯನ ಸಕಲ ಕರ್ಮಗಳಿಗೆ ಸಾಕ್ಷಿಗಳಾಗಿರುತ್ತಾರೆ, ಪೂಜಿಸಿದರೆ ಕೇಡನ್ನು ನಿವಾರಿಸುತ್ತಾರೆ. ಗೃಹ್ಯಸೂತ್ರಗಳಲ್ಲಿ ಒಬ್ಬನಲ್ಲ ನಾಲ್ವರು ವಿನಾಯಕರಿದ್ದಾರೆಂದು ಹೇಳಿದೆ- ಶಾಲಕಾಟಂಕಟ, ಕೂಷ್ಮಾಂಡ ರಾಜಪುತ್ರ, ಉಸ್ಮಿತ ಮತ್ತು ದೇವಯಜ್ಞ ಎಂದು ಅವರ ಹೆಸರುಗಳು. ರುದ್ರನೂ ಒಬ್ಬ ವಿನಾಯಕನೆಂದು ಅಥರ್ವ ಶಿರಸ ಉಪನಿಷತ್ತು ಹೇಳಿದೆ. ಆದರೆ ಅನಂತರದ ಯಾಜ್ಞವಲ್ಕ್ಯ ಸ್ಮೃತಿಯಲ್ಲಿ ಎಲ್ಲ ವಿನಾಯಕರೂ ಸೇರಿ ಒಬ್ಬನೇ ಗಣಪತಿ ವಿನಾಯಕನಾಗಿದ್ದಾನೆ.

"ಗಣಪತಿ" ಅಥವಾ "ಗಣೇಶ" ಎಂಬ ಆತನ ಹೆಸರುಗಳ ವಿಚಾರದಲ್ಲಿ ಯಾಜ್ಞವಲ್ಕ್ಯನು ಗಣೇಶನನ್ನು ಬ್ರಹ್ಮನೂ ರುದ್ರನೂ ಸೇರಿ ಗಣಗಳಿಗೆ ಅಧಿಪತಿಯಾಗಿ ನೇಮಿಸಿದರೆಂದು ಹೇಳಿದ್ದಾನೆ. ಈ ಗಣಪತಿ ಬರೆಯುವುದರಲ್ಲಿ ಅತಿ ನಿಪುಣನೆಂದು ಮಹಾಭಾರತದ ಆದಿ ಪರ್ವದಲ್ಲಿ ಹೇಳಿದೆ. ವ್ಯಾಸ ಮಹರ್ಷಿಗಳು ಮಹಾಭಾರತವನ್ನು ಬಾಯಿಂದ ಹೇಳಿದರು; ಅದನ್ನು ಅಮಾನುಷ ವೇಗದಿಂದ ಗಣಪತಿಯು ಬರೆದುಕೊಂಡನು. ಈ ಕಥೆ ಮೂಲ ಭಾರತದಲ್ಲಿ ಇದ್ದಿಲ್ಲ; ಈಚೆಗೆ ಅದನ್ನು ಸೇರಿಸಿರಬೇಕೆಂದು ನಂಬಲಾಗಿದೆ.

ವಕ್ರತುಂಡ, ವಿಘ್ನೇಶ್ವರ, ಸಿದ್ಧಿದಾತ, ಹೇರಂಬ, ದ್ವಿದೇಹ, ಲಂಬೋದರ, ಗಜಾನನ ಇತ್ಯಾದಿ ಹೆಸರುಗಳೂ ಗಣಪತಿಗಿವೆ.

ಗಣಪತಿಗೆ ಅಗ್ರಪೂಜೆ ಸಲ್ಲಬೇಕು, ಅವನು ಶಿವಪಾರ್ವತಿಯರ ಪ್ರೀತಿಯ ಮಗ ಎಂದು ಇಂದು ಎಲ್ಲ ಹಿಂದೂ ಪಂಥದವರೂ ಒಪ್ಪುತ್ತಾರೆ. ಆದರೆ ಗಾಣಪತ್ಯ ದರ್ಶನ ಪಂಥದವರು ಗಣಪತಿಯೇ ವಿಷ್ಣು ಬ್ರಹ್ಮ ರುದ್ರರಿಗಿಂತ ಮಿಗಿಲಾದ ಸರ್ವಶ್ರೇಷ್ಠ ಸರ್ವಕರ್ತ ದೇವನೆಂದು ನಂಬುತ್ತಾರೆ. ಅವರ ಪ್ರಕಾರ ಬ್ರಹ್ಮನನ್ನೂ ಅವನೇ ಸೃಷ್ಟಿಸುತ್ತಾನೆ. ಪ್ರಳಯಾಂತ್ಯದಲ್ಲಿ ಅವನೊಬ್ಬನೇ ಉಳಿಯುತ್ತಾನೆ.

ಗಾಣಪತ್ಯರಲ್ಲಿ ಹಲವು ವಿಧ. "ಮಹಾ ಗಣಪತಿ"ಯ ಭಕ್ತರು ಗಜಮುಖದ, ಕೆಂಬಣ್ಣದ, ಏಕದಂತದ ರೂಪದಲ್ಲಿ ಅವನನ್ನು ಭಜಿಸುತ್ತಾರೆ. ಅವನು ಮುಕ್ತಿಯನ್ನು ಕೊಡುತ್ತಾನೆಂದು ಅವರ ನಂಬಿಕೆ.

"ಹರಿದ್ರಾಗಣಪತಿ"ಯ ಉಪಾಸಕರು ಅರಸಿಣ ಬಣ್ಣದ ರೇಶ್ಮೆ ಬಟ್ಟೆಯನ್ನುಟ್ಟ, ಅರಸಿಣ ಜನಿವಾರವುಳ್ಳ, ಚತುರ್ಭುಜನಾದ, ಮೂರು ಕಣ್ಣುಳ್ಳ, ಮುಖವೆಲ್ಲ ಅರಸಿಣತೊಡೆದ, ಪಾಶಾಂಕುಶಧರನಾದ ಗಣಪತಿಯನ್ನು ಭಜಿಸುತ್ತಾರೆ. ಅವರು ಗಣಪತಿಯ ಮುಖ ಮತ್ತು ಒಂದು ದಂತದ ತಪ್ತ ಮುದ್ರೆಯನ್ನು ಒತ್ತಿಸಿಕೊಳ್ಳುತ್ತಾರೆ.

"ಉಚ್ಛಿಷ್ಟಗಣಪತಿ"ಯ ಭಕ್ತರಲ್ಲಿ ಜಾತಿ ಭೇದವಿಲ್ಲ. ಅವರು ಹಣೆಯಲ್ಲಿ ಕೆಂಪು ತಿಲಕ ಹಚ್ಚಿಕೊಳ್ಳುತ್ತಾರೆ. ಅವರ ಗಣಪತಿಯ ರೂಪ

ಅಶ್ಲೀಲವಾದದ್ದು. ಮದ್ಯ, ಮಾಂಸ, ಸಂಭೋಗ ಇವೆಲ್ಲವೂ ಅವರ ಆರಾಧನಾ ಪದ್ಧತಿಯಲ್ಲಿ ಸೇರುತ್ತವೆ.

ಗಾಣಪತ್ಯ ಪಂಥದ ಗಣಪತಿಗಳ ಸ್ವರೂಪ ಒಂದೇ ಇಲ್ಲ. ಉಚ್ಛಿಷ್ಟ ಗಣಪತಿಗೆ ನಾಲ್ಕು ಕೈ, ಕೆಂಬಣ್ಣ; ಮಹಾ ಗಣಪತಿಗೆ ಹತ್ತು ಕೈ, ಕೆಂಬಣ್ಣ; ಊರ್ಧ್ವ ಗಣಪತಿಗೆ ಆರು ಕೈ ಹಳದಿ ಬಣ್ಣ; ಲಕ್ಷ್ಮೀ ಗಣಪತಿಗೆ ಎಂಟು (ಅಥವಾ ನಾಲ್ಕು) ಕೈ, ಬಿಳಿ ಬಣ್ಣ; ಪಿಂಗಲ ಗಣಪತಿಗೂ ಆರು ಕೈ. ಇವೆಲ್ಲ ಗಣಪತಿಗಳೂ ಬ್ರಹ್ಮಚಾರಿಗಳಲ್ಲ. ಅರಸಿನ ಬಣ್ಣದ, ಕಮಲ ಪುಷ್ಪ ಧಾರಿಣಿಯರಾದ ಶಕ್ತಿಯರು ಅವರನ್ನು ಅಪ್ಪಿಕೊಂಡಿರುತ್ತಾರೆ.

ಗಣಪತಿಯ ಕಥೆ ಒಂದೊಂದು ಪುರಾಣದಲ್ಲಿ ಒಂದೊಂದು ಬಗೆಯಾಗಿದೆ. ವರಾಹಪುರಾಣದ ಒಂದು ಕಥೆ ಹೀಗಿದೆ: ಶಿವನು ಧ್ಯಾನಮಗ್ನನಾಗಿದ್ದಾಗ ಅವನ ಹಣೆಗಣ್ಣಿನಿಂದ ಅವನ ಗುಣಗಳಿಂದಲೇ ಯುಕ್ತನಾದ ತೇಜಸ್ವಿ ತರುಣ ಉದ್ಭವಿಸಿದನು. ತನ್ನ ನೆರವಿಲ್ಲದೆ ಈ ಸುಂದರ ತರುಣನನ್ನು ಶಿವನು ಪಡೆದದ್ದರಿಂದ ಮತ್ಸರಗೊಂಡು ಉಮಾದೇವಿ ಆ ತರುಣನನ್ನು ಆನೆಮೊಗದ ದೊಡ್ಡ ಹೊಟ್ಟೆಯ ಕುರೂಪಿಯಾಗೆಂದು ಶಪಿಸಿದಳು!

ಸ್ಕಂದ ಪುರಾಣ ಬೇರೆಯೇ ಕಥೆ ಹೇಳುತ್ತದೆ. ಪಾರ್ವತಿಯು ತನ್ನ ಮೈಯ ಮಣ್ಣಿನಲ್ಲಿ ತನ್ನ ಸ್ನಾನದ ಪರಿಮಳದ್ರವ್ಯಗಳನ್ನು ಬೆರಸಿ ಗಂಗಾ ನದಿಯ ಮುಖದಲ್ಲಿದ್ದ ಆನೆಮೋರೆಯ ಮಾಲಿನಿಯೆಂಬ ರಾಕ್ಷಸಿಗೆ ಕೊಡಲಾಗಿ ಅವಳು ಅದನ್ನು ತಿಂದು ಐದು ಆನೆ ಮೋರೆಗಳುಳ್ಳ ಮಗುವನ್ನು ಹೆತ್ತಳು. ಪಾರ್ವತಿ ಅವನನ್ನು ತನ್ನ ಮಗನೆಂದು ಹೇಳಲು ಶಿವನು ಒಪ್ಪಿ ಐದು ತಲೆಗಳು ಒಂದೇ ತಲೆಯಾಗಲೆಂದು ಅನುಗ್ರಹಿಸಿ ಮಗುವನ್ನು ವಿಘ್ನಾಧಿಪತಿಯಾಗಿ ನೇಮಿಸಿದನು.

ಬ್ರಹ್ಮವೈವರ್ತ ಪುರಾಣದ ಕಥೆಯ ಪ್ರಕಾರ ಗಣಪತಿಯು ಕೃಷ್ಣನ ಅವತಾರವಂತೆ! ಪಾರ್ವತಿಯು ಬಹುಕಾಲ ಮಕ್ಕಳಿಲ್ಲದೆ ವ್ಯಥಿತಳಾದಳು. ಒಂದು ದಿನ ಆಕಾಶವಾಣಿಯನ್ನು ಕೇಳಿ ಅವಳು ತನ್ನ ರಾಣೀವಾಸಕ್ಕೆ ಹೋಗಿ ನೋಡಲಾಗಿ ಕೃಷ್ಣನ ಅವತಾರವಾದ ಸುಂದರ ಮಗುವೊಂದು ಅಲ್ಲಿತ್ತು. ಶಿವ ಪಾರ್ವತಿಯರು ಅದನ್ನು ತಮ್ಮ ಮಗುವೆಂದೊಪ್ಪಿದರು. ಪುತ್ರೋತ್ಸವ ಆಚರಿಸುತ್ತಿದ್ದಾಗ ಶನಿಯು ಆ ಮಗುವನ್ನು ನೋಡಿದನು. ಆಗ ಅದರ ಶಿರಸ್ಸು ಹಾರಿ ಕೃಷ್ಣನ ಗೋಲೋಕಕ್ಕೆ ಹೋಗಿಬಿಟ್ಟಿತು. ದೇವತೆಗಳೆಲ್ಲರೂ ದುಃಖದಿಂದ ಪ್ರಳಾಪಿಸುತ್ತಿದ್ದಾಗ ವಿಷ್ಣುವು ಗರುಡಾರೂಢನಾಗಿ ಹೋಗಿ ಪುಷ್ಪಭದ್ರನದೀತೀರದಲ್ಲಿ ಉತ್ತರಕ್ಕೆ ತಲೆಹಾಕಿ ಮಲಗಿದ್ದ ಆನೆಯ ತಲೆಯನ್ನು ಕಡಿದು ತಂದು ರುಂಡವಿಲ್ಲದ ಮಗುವಿನ ಮುಂಡಕ್ಕೆ ಜೋಡಿಸಿ ಅದಕ್ಕೆ ಜೀವಕಳೆ ಕೊಟ್ಟನು ಇದೇ ಗಣಪತಿ.

ಇನ್ನೊಂದು ಕಥೆಯೂ ಇದೆ. ಒಮ್ಮೆ ಶಿವ ಪಾರ್ವತಿಯರು ಹಿಮಾಲಯದಲ್ಲಿ ವಿಹರಿಸುತ್ತಿದ್ದಾಗ್ಗ ಗಜದಂಪತಿಗಳು ಕೂಡುತ್ತಿರುವುದನ್ನು ಕಂಡು ತಾವೂ ಹಾಗೇಯೇ ಗಜರೂಪ ಧರಿಸಿ ಭೋಗಿಸಿದರು. ಆಗ ಹುಟ್ಟಿದ ಮಗುವೇ ಗಣಪತಿ.

ಗಣಪತಿ ಬ್ರಹ್ಮಚಾರಿಯೆಂದು ಸಾಮಾನ್ಯ ಭಾವನೆಯಾಗಿದ್ದರೂ ಕೆಲ ಪುರಾಣಗಳಲ್ಲಿ ಅವನಿಗೆ ಸಿದ್ಧಿ ಋದ್ಧಿಯರೆಂಬ ಹೆಂಡತಿಯರುಂಟೆಂದು ಹೇಳಿದೆ. ಬೇರೆ ಪುರಾಣಗಲ್ಲಿ ಪುಷ್ಟಿಯೆಂಬ ಪತ್ನಿ ಅವನಿಗಿದ್ದಾಳೆಂದಿದೆ.

ಗಣಪತಿ ಇಂದು ಹಿಂದುಗಳ ಪಂಚಮಹಾದೇವತೆಗಳಲ್ಲೊಬ್ಬನಾಗಿದ್ದಾನೆ. ಆದರೆ ಬೌದ್ಧರು ಕೂಡ ಗಣಪತಿಯನ್ನು ಪೂಜಿಸಿದ ಉಲ್ಲೇಖಗಳಿವೆ. "ಗಣಪತಿ ಹೃದಯ" ಎಂಬ ಮಂತ್ರವನ್ನು ಸತ್ವಃ ಬುದ್ಧನೇ ತನ್ನ ಶಿಷ್ಯ ಆನಂದನಿಗೆ ಬೋಧಿಸಿದನೆಂದು ಹೇಳಿದೆ. ಬೌದ್ಧ ದೇಶಗಳಲ್ಲೆಲ್ಲ ಆನೆಯ ತಲೆಯನ್ನು ಹೋಲುವ ಗುಡ್ಡಗಳಿದ್ದಲ್ಲಿ ಗಣಪತಿಯ ಪೂಜೆಯ ಸಂಪ್ರದಾಯವಿದೆ. ತಿಬೇಟದ ಬೌದ್ಧರು ಗಂಡು ಗಣೇಶನನ್ನಲ್ಲದೆ ಹೆಣ್ಣು ಗಣೇಶನನ್ನೂ ಆರಾಧಿಸುತ್ತಾರೆ!

ಎಲಿಜಾಬೆತ್ ಬ್ರೂನರ್

# ನಾನು ರವೀಂದ್ರರ ಚಿತ್ರ ಬರೆದೆ



**ಹಂಗೇರಿಯನ್ ಕಲಾವಿದೆಯೊಬ್ಬಳು ಕವೀಂದ್ರರೊಡನೆ ಕಳೆದ ದಿನಗಳ ಮನೋಹರ ಸ್ಮೃತಿಗಳು**

೧೯೩೦ರ ಸುಮಾರಿನಲ್ಲಿ ನನ್ನ ಮನಸ್ಸನ್ನೆಲ್ಲ ಒಂದೇ ಒಂದು ಆಶೆ, ಉತ್ಸಾಹ ಆವರಿಸಿತ್ತು. ಆ ಕಾಲದಲ್ಲಿ ಜಗತ್ತಿನಲ್ಲಿ ಜೀವಿಸಿದ್ದ ಅತಿ ಶ್ರೇಷ್ಠ ಪುರುಷರ ಚಿತ್ರವನ್ನು ಬರೆಯಬೇಕು ಎನ್ನುವ ಆಕಾಂಕ್ಷೆ ನನ್ನಲ್ಲಿ ಅತ್ಯಂತ ಪ್ರಬಲವಾಗಿತ್ತು.

ಭಾರತದಲ್ಲಾಗ ಸ್ವಾತಂತ್ರ್ಯಸಮರ ಬಿರುಸಾಗಿ ನಡೆದಿತ್ತು. ಅದರ ಹಿರಿ ಧುರೀಣರೆಲ್ಲ ಹೊರಗಿರುವದಕ್ಕಿಂತ ಜೇಲಿನಲ್ಲಿರುವದೇ ಹೆಚ್ಚಾಗಿತ್ತು. ಹೊರಗೆ ಬಂದಾಗ ಅವರು ಸಭೆ, ಪರಿಷತ್ತುಗಳಲ್ಲಿ ಮಗ್ನರಾಗಿರುತ್ತಿದ್ದರು.

ನಾನು ಭಾರತದಲ್ಲಿ ತೆಗೆದ ಮಹಾಪುರುಷರ ಚಿತ್ರಗಳಲ್ಲಿ ಮೊದಲನೆಯದು ಗುರುದೇವ ರವೀಂದ್ರನಾಥ ಠಾಕೂರರದು. ನಾನು ಅವರ ಅನೇಕ ಚಿತ್ರಗಳನ್ನು ಬರೆದಿದ್ದೇನೆ. ತಮ್ಮ ಚಿತ್ರಗಳನ್ನು ತೆಗೆಸಿಕೊಳ್ಳುವದು ಅವರಿಗೆ ಪ್ರಿಯವಾಗಿತ್ತು.

ನಾನವರನ್ನು ಮೊದಲನೆಯ ಸಲ ಕಂಡಾಗ ಅವರು ಒಂದು ರೇಶಿಮೆ ನಿಲುವಂಗಿಯನ್ನು ತೊಟ್ಟಿದ್ದರು. ಅವರ ಉದ್ದನ್ನ ಕೂದಲು ಮತ್ತು ಗಡ್ಡ ಹಾಗೂ ಸುಂದರ ಕಾಯಕ್ಕೆ ಆ ಉಡುಪು ಅತ್ಯಂತ ರಮಣೀಯವಾಗಿ ಕಾಣಿಸುತ್ತಿತ್ತು. ಅವರಿಗೆ ತಮ್ಮ ಸೌಂದರ್ಯದ ಅರಿವು ಇದ್ದಿತು. "ನಿಮ್ಮ ಚಿತ್ರ ಬರೆಯಲೆ?" ಎಂದು ನಾನು ಕೇಳಿದಾಗ ಅವರು ಸಮ್ಮತಿದರ್ಶಕವಾಗಿ ನಸುನಕ್ಕರು. ಚಿತ್ರಕಲೆಯಲ್ಲಿ ಅತ್ಯಂತ ಆಸ್ಥೆಯುಳ್ಳ ಅವರು ನನ್ನ ವಿನಂತಿಯನ್ನು ನಿರಾಕರಿಸುವದಾದರೂ ಹೇಗೆ?

ನನಗೆ ಹಂಗೇರಿಯನ್ ಭಾಷೆಯನ್ನು ಬಿಟ್ಟು

**"ಸಂಡೇ ಸ್ಟ್ಯಾಂಡರ್ಡ್"ನಿಂದ**

A2– 2

ಬೇರಾವ ಭಾಷೆಯೂ ಬರುತ್ತಿರಲಿಲ್ಲವಾದ್ದರಿಂದ ನಾನವರ ಚಿತ್ರ ಬಿಡಿಸುತ್ತಿರುವಾಗ ನಮ್ಮಲ್ಲಿ ಮಾತುಕತೆ ನಡೆಯುವಂತಿರಲಿಲ್ಲ. ಬಂದು ಹೋಗುವ ಜನರೊಂದಿಗೆ ಗುರುದೇವರು ಮಾತುಕತೆ ನಡೆಸುತ್ತಿದ್ದರು. ನಾನು ನನ್ನ ಕೆಲಸದಲ್ಲಿ ಮಗ್ನಳಾಗಿದ್ದರೂ ಒಂದು ಮಾತು ನನ್ನ ಗಮನಕ್ಕೆ ಬರದೆ ಹೋಗಲಿಲ್ಲ. ಅವರೊಂದಿಗೆ ಮಾತಾಡಲು ಅಥವಾ ಏನನ್ನಾದರೂ ಕೇಳಲು ಬರುವ ಪ್ರತಿಯೊಬ್ಬನೂ ಅವರ ಹಿಂದುಗಡೆ, ಕೆಳಗೆ ದೃಷ್ಟಿ ಹಾಕಿ ನಿಂತು ಮಾತಾಡುತ್ತಿದ್ದನು. ಗುರುದೇವರು ನೇರವಾಗಿ ಮುಂದುಗಡೆ ನೋಡುತ್ತ ಉತ್ತರವೀಯುತ್ತಿದ್ದರು. ಇದು ಅವರದೊಂದು ವೈಶಿಷ್ಟ್ಯವಾಗಿರಲಿಲ್ಲ. ಇದು ಅತ್ಯಂತ ಗೌರವವನ್ನು ಸೂಚಿಸುವ ಒಂದು ಪ್ರಾಚೀನ ಪದ್ಧತಿ.

ನಾನು ಮತ್ತು ನನ್ನ ತಾಯಿ ಇಬ್ಬರೂ ರವೀಂದ್ರರ ಚಿತ್ರ ಬಿಡಿಸುತ್ತಿದ್ದೆವು. ಆಕೆ ಅವರ ಪೂರ್ಣಾಕಾರದ ಚಿತ್ರ ಬಿಡಿಸುತ್ತಿದ್ದರೆ ನಾನು ಕೇವಲ ಮುಖದ ಚಿತ್ರವನ್ನಷ್ಟೆ ಬರೆಯುತ್ತಿದ್ದೆ. ಅವರ ಮುಖಕ್ಕೂ ಮೈಕೆಲ್ ಎಂಜೆಲೋ ಬರೆದ ಮೋಸಸ್‌ನ ಮುಖಕ್ಕೂ ಬಹು ಸಾಮ್ಯವಿದ್ದಂತೆ ನನಗನಿಸುತ್ತಿತ್ತು.

ಗುರುದೇವರಿಗರಿವಾಗದಂತೆಯೆ ಅವರ ಚಿತ್ರ ಬರೆಯಬೇಕು ಎಂದು ನನಗನಿಸಿತು. ತನ್ನ ಚಿತ್ರ ಬರೆಯುತ್ತಿದ್ದಾರೆ, ಅಷ್ಟೆ ಏಕೆ, ಯಾರೊ ತನ್ನನ್ನು ನೋಡುತ್ತಿದ್ದಾರೆ ಎಂಬ ಅರಿವಿರುವಾಗಲೆಲ್ಲ ಅವರು ಸ್ವಾಭಾವಿಕವಾಗಿ ಒಂದು ಭಂಗಿಯಲ್ಲಿ ನಿಲ್ಲುತ್ತಿದ್ದರು. ಈ ಅಹಂಭಾವ ಅವರ ಸ್ವಭಾವದ ಭಾಗವಾಗಿದ್ದರೂ ಅದರಿಂದ ಅವರ ಮಹಾ ವ್ಯಕ್ತಿತ್ವಕ್ಕೆ ಯಾವ ಕುಂದೂ ಬಾರದೆ ಅದು ಅವರನ್ನು ಇನ್ನಿಷ್ಟು ಪ್ರಿಯರನ್ನಾಗಿ ಮಾಡಿತ್ತು.

ಆದರೂ ಗುರುದೇವರನ್ನು ಸ್ವಾಭಾವಿಕ ಭಂಗಿಯಲ್ಲಿರುವಾಗ ಹಿಡಿದು ಚಿತ್ರ ಬರೆಯಬೇಕು ಎಂದು ನಾನು ನಿರ್ಧರಿಸಿಕೊಂಡೆ.

ನಾನು ಸದಾ ಕಾದಿದ್ದರೂ ಅಂಥದೊಂದು ಅವಕಾಶ ನನಗೆ ದೊರೆಯಬೇಕಾದರೆ ಬಹು ದಿನಗಳು ಹಿಡಿದವು. ಆ ಮೇಲೊಂದು ದಿನ ಅವರು ಮಧ್ಯಾಹ್ನದಲ್ಲಿ ಯಾವ ಗದ್ದಲವೂ ಇಲ್ಲದಾಗ ಯಾವುದೊ ಕೆಲಸದಲ್ಲಿ ಮಗ್ನರಾಗಿರುವದನ್ನು ಕಂಡೆ. ತಮ್ಮ ಕಾರ್ಯದಲ್ಲಿ ಅವರೆಷ್ಟು ತಲ್ಲೀನರಾಗಿದ್ದರೆಂದರೆ ನಾನು ಬಂದದ್ದು ಅವರಿಗೆ ಗೊತ್ತಾಗಲೇ ಇಲ್ಲ. ಇದೇ ನಾನು ಕಾಯುತ್ತಿದ್ದ ಸುಸಂಧಿ ಎಂದುಕೊಂಡು ನನ್ನ ಬಣ್ಣ ಕುಂಚ ಮುಂತಾದವನ್ನು ತರಲು ಓಡಿದೆ.

ಬಾಗಿಲಿಂದ ಒಳಬರುವ ಬದಲು ನಾನು ಕಿಡಿಕಿಯಿಂದ ಒಳಗೆ ಬಂದು ಗುರುದೇವರ ಎದುರುಗಡೆ ದೂರದಲ್ಲಿ ಕುಳಿತೆ. ಎರಡು ಇಡೀ ತಾಸುಗಳ ವರೆಗೆ ನಾನು ಚಿತ್ರ ಬರೆದೆ. ಎಲ್ಲಿಯಾದರೂ ನನ್ನ ಅರಿವು ಉಂಟಾಗಿ ಗುರುದೇವರು ಈ ಸದವಕಾಶವನ್ನು ತಪ್ಪಿಸಿಬಿಡುವರೋ ಎಂದು ಗಟ್ಟಿಯಾಗಿ ಉಸಿರು ಬಿಡಲು ಕೂಡ ನನಗೆ ಭಯವಾಗುತ್ತಿತ್ತು.

ಅವರು ಕಿಡಿಕಿಯ ಬಳಿ ದೊಡ್ಡ ಖುರ್ಚಿಯೊಂದರಲ್ಲಿ ಕುಳಿತಿದ್ದರು. ಅವರ ಮುಖದ ಮೇಲೆ ಅಮರ ಜೀವದ ಶಾಂತ ತೇಜಸ್ಸನ್ನು ನಾನು ಕಂಡೆ. ಅವರೊಂದು ಕವಿತೆ ರಚಿಸುತ್ತಿದ್ದರು. ದೈವೀ ಶಬ್ದಗಳು ಬಂದು ತಮ್ಮ ಕಿವಿಯಲ್ಲಿ ಗುಣುಗುಡುವದನ್ನು ಕೇಳುವವರಂತೆ ಅವರು ಕುಳಿತಿದ್ದರು. ನಾನು ವೇಗವಾಗಿ ಚಿತ್ರ ಬಿಡಿಸುತ್ತಿದ್ದೆ. ನನ್ನ ಕೈಲಿದ್ದ ಕುಂಚ ತಂತಾನೇ ಕೆಲಸ ಮಾಡುವಂತಿತ್ತು.

ನಾವು ಮಾಳಿಗೆಯ ಮೇಲೆ ಇದ್ದೆವು. ಕೆಳಗೆ ಹುಡುಗಿಯೊಬ್ಬಳು ಪಿಯಾನೊ ಬಾರಿಸತೊಡಗಿದಳು. ಅದರ ಧ್ವನಿ ಆಗಿಷ್ಟು, ಈಗಿಷ್ಟು ಬಂದು ನಮ್ಮ ಕಿವಿಗೆ ಬೀಳುತ್ತಲಿತ್ತು. ಈ ಧ್ವನಿ ರವೀಂದ್ರರನ್ನು ಇನ್ನೊಂದು ಜಗತ್ತಿಗೆ ಒಯ್ದಂತನಿಸಿತು. ಅವರು ಭರಭರ ಬರೆಯತೊಡಗಿದರು.

ನನ್ನ ಚಿತ್ರ ಮುಗಿದಿತ್ತು. ಇನ್ನು ಒಂದೇ ಒಂದು ಗೆರೆ ಎಳೆದರೆ ಅದು ಕೆಡುತ್ತಿತ್ತು. ಅಷ್ಟರಲ್ಲಿ ಅವರು ಮುಖವೆತ್ತಿದರು. ನನ್ನನ್ನಲ್ಲಿ ಕಂಡು ಅವರಿಗೆ ಆಶ್ಚರ್ಯಾಘಾತವಾಯಿತು. ತಮ್ಮ ಏಕಾಂತದಲ್ಲಿ ಹೀಗೊಬ್ಬರು ಅನಧಿಕೃತವಾಗಿ

ಪ್ರವೇಶಿಸಿದರಲ್ಲ ಎಂಬ ವಿಚಾರದಿಂದ ಅವರ ಮುಖದಲ್ಲಿ ರೋಷದ ರೇಖೆಯೊಂದು ಮೂಡಿತು.

ಆದರೆ ಮರುಕ್ಷಣದಲ್ಲೆ ಪರಿಸ್ಥಿತಿಯ ಅರಿವಾದೊಡನೆ ಅವರು ಮುಗುಳ್ನಗೆಯಿಂದ ನನ್ನನ್ನು ಸ್ವಾಗತಿಸಿ ನಾನು ಮಾಡಿದ್ದನ್ನು ನೋಡಲೆಂದು ಎದ್ದು ಬಂದರು.

"ನಿಜವಾಗಿಯೂ ನನ್ನನ್ನು ನೀನು ಸೋಲಿಸಿದಿ" ವಿಸ್ಮಯದಿಂದ ಅವರು ಹೇಳಿದರು. ಜಗತ್ತಿನ ಎಲ್ಲ ಭಾಗಗಳ ಮೂರು ನೂರು ಜನ ಚಿತ್ರಕಾರರು ನನ್ನ ಚಿತ್ರ ಬರೆದಿದ್ದಾರೆ. ಆದರೆ ಇದೊಂದೇ ನನ್ನ ನಿಜವಾದ ಚಿತ್ರ."

"ಹಂಗರಿಯ ಒಬ್ಬ ಸಾಮಾನ್ಯ ಹುಡುಗಿಯಷ್ಟು ಯಶವನ್ನು ಜಗತ್ತಿನ ಶ್ರೇಷ್ಠ ಕಲಾವಿದರು ಪಡೆಯಲಿಲ್ಲವಲ್ಲ" ಎಂಬ ಅರಿವಿನಿಂದಾದ ಆಶ್ಚರ್ಯ ಅವರನ್ನು ಗೆದ್ದಿತು. ತಮ್ಮ ಏಕಾಂತದಲ್ಲಿ ಇತರರು ಪ್ರವೇಶಿಸುವದು ಅವರಿಗಿನ್ನೂ ಅಪ್ರಿಯವಾಗಿದ್ದರೂ ಮನಬಂದಾಗ ಬಂದು ಅವರ ಚಿತ್ರ ಬಿಡಿಸಲು ನನಗೆ ಅವಕಾಶ ಬೇಕೆಂಬ ಬೇಡಿಕೆಯನ್ನು ಅವರು ನಿರಾಕರಿಸಲಾರದೆ ಹೋದರು. ನಾನು ಯಾವಾಗ ಬಂದರೂ ನನಗೆ ಪ್ರವೇಶ ಸಿಗಬೇಕು ಎಂದು ತಮ್ಮ ಆಳುಗಳಿಗೆ ಅಪ್ಪಣೆಯಿತ್ತರು. ಇಂಥ ಅನುಗ್ರಹವನ್ನು ಅವರು ಮತ್ತೆ ಯಾರಿಗೇ ಆಗಲಿ, ದಯಪಾಲಿಸಿದ್ದರು ಎಂದು ನನಗನಿಸುವದಿಲ್ಲ.

ಈ ರೀತಿ ಕಳ್ಳ ಬೆಕ್ಕಿನೋಪಾದಿಯಲ್ಲಿ ಬಂದು ಅವರ ಮುಖದ ಮೇಲೆ ಸರಿಯಾದ ಭಾವ ಮೂಡಿದಾಗ ಅವರ ಚಿತ್ರವನ್ನು ಬರೆಯತೊಡಗಿದೆ. ಅವರ ಅನೇಕ ಚಿತ್ರಗಳನ್ನು ಬರೆಯುವದರಲ್ಲಿ ಯಶಸ್ವಿಯಾದೆ.

ಅವರು ಸ್ವತಃ ಚಿತ್ರ ಬರೆಯತೊಡಗಿದರೆ ಅವರ ವ್ಯಕ್ತಿತ್ವ ಮತ್ತೊಂದು ರೂಪವನ್ನು ತಾಳುತ್ತಿತ್ತು. ಬರೆದು ಬರೆದು ಸೋತಾಗ ಅವರು ಚಿತ್ರ ಬಿಡಿಸುವ ಕಾರ್ಯಕ್ಕೆ ಕೈಹಾಕುತ್ತಿದ್ದರು. ನೂರುಗಟ್ಟಲೆ ಸಂಖ್ಯೆಯಲ್ಲಿದ್ದ ವಿಧವಿಧದ ಬಣ್ಣಗಳ ಬಟ್ಟಲುಗಳ ಬಳಿ ಹೋಗಿ, ಆಟಿಗೆಯನ್ನು ಇತರರಿಗೆ ಕೊಡಲು ಮನಸ್ಸಿಲ್ಲದ ಹುಡುಗ ಅದನ್ನು ಗಟ್ಟಿಯಾಗಿ ಹಿಡಿದುಕೊಳ್ಳುವಂತೆ ಅವುಗಳನ್ನು ಎತ್ತಿ ಹಿಡಿದುಕೊಳ್ಳುತ್ತಿದ್ದರು.

ಎಡಗೈಲಿ ಬಟ್ಟಲು, ಬಲಗೈಲಿ ಕುಂಚ. ಚಿತ್ರವಿಚಿತ್ರವಾದ ಆಕೃತಿಗಳನ್ನು ಬಿಡಿಸಿ ಅವುಗಳಿಗೆ ಬಣ್ಣ ತುಂಬುತ್ತಿರುವಾಗ ಅವರ ಮುಖವೂ ಆರಕ್ತವಾಗುತ್ತಿತ್ತು. ಅವರ ಹಣೆಯ ಮೇಲಿನ ನರಗಳು ಉಬ್ಬುತ್ತಿದ್ದವು.

ಹೊಸ ಸ್ಫೂರ್ತಿಯೊಂದು, ಹೊಸ ಜೀವ-ವೊಂದು ಅವರಲ್ಲಿ ಮೂಡಿದಂತಿರುತ್ತಿತ್ತು. ಲೇಖಕ ಬೇರೆ, ಚಿತ್ರಕಾರ ಬೇರೆ. ಬಾಲಿಶ ಉತ್ಸಾಹಭರದಲ್ಲಿ ಅವರು ಸಂತೋಷ ಅದ್ಭುತಗಳ ಇನ್ನೊಂದು ಜಗತ್ತಿಗೆ ಹೋಗುತ್ತಿದ್ದರು. ಆ ಜಗತ್ತಿನ ಚಿತ್ರಗಳನ್ನು ಬರೆಯುತ್ತಿದ್ದರು.

ಅವರು ಈ ಸ್ಥಿತಿಯಲ್ಲಿದ್ದಾಗ ಅವರ ಚಿತ್ರ ಬರೆಯಬೇಕೆಂಬ ಹಂಬಲ ನನಗಿತ್ತು. ಆದರೆ ಅವರು ಚಿತ್ರಬಿಡಿಸುತ್ತಿದ್ದ ಕೋಣೆ ತೀರ ಚಿಕ್ಕದಾಗಿದ್ದರಿಂದ ಅಲ್ಲಿ ಅವರನ್ನು ಬಿಟ್ಟು ಇನ್ನೊಬ್ಬರಿಗೆ ನಿಲ್ಲಲು ಕೂಡ ಸ್ಥಳವಿರಲಿಲ್ಲ. ಹಾಗಿದ್ದರೂ ಒಂದು ದಿನ ಕಿಡಕಿಯ ಮೂಲಕ ಅವರು ಸರಿಯಾಗಿ ಕಾಣಿಸುವ ಸ್ಥಳವನ್ನು ಹುಡುಕಿಕೊಂಡೆ. ಅದರಿಂದ "ಚಿತ್ರ ಬಿಡಿಸುತ್ತಿರುವ ಠಾಕೂರರು" ಎಂಬ ಚಿತ್ರವನ್ನು ಬರೆಯುವದು ನನಗೆ ಸಾಧ್ಯವಾಯಿತು.

ಬಣ್ಣಗಳೆಂದರೆ ಅವರಿಗೆ ಹಿಗ್ಗು. ಅವು ಅವರಿಗೆ ಸ್ಫೂರ್ತಿಯನ್ನೀಯುತ್ತಿದ್ದವು. ಇದನ್ನು ಅವರ ಬಟ್ಟೆಗಳ ಮೇಲಿಂದ ಕಾಣಬಹುದಿತ್ತು. ತಮ್ಮ ಲಹರಿಗನುಸರಿಸಿ ಅವರು ದಿನಕ್ಕೆ ಮೂರು ನಾಲ್ಕು ಸಲ ತಮ್ಮ ನಿಲುವಂಗಿಯನ್ನು ಬದಲಿಸುತ್ತಿದ್ದರು. ವಾತಾವರಣದ ಪ್ರಭಾವಕ್ಕೂ ಅವರು ಒಳಗಾಗುತ್ತಿದ್ದಂತಿತ್ತು. ಅವರ ಲಹರಿ ಅವರನ್ನು ಮನೆಯ ಬೇರೆ ಬೇರೆ ಕೋಣೆಗಳಿಗೆ ಅಲೆಸುತ್ತಿತ್ತು. ಒಂದು ದಿನದಲ್ಲಿ ಅವರು ನಾಲ್ಕೈದು ಕೋಣೆಗಳಲ್ಲಿ ಹೋಗಿರುತ್ತಿದ್ದುದುಂಟು. ರಾತ್ರಿಯೂ ಅದೇ ರೀತಿ.

ಸಂಜೆ ಜಗುಲಿಯ ಮೇಲೆ ಅವರ ಹಾಸಿಗೆ

ಯನ್ನು ಕಂಡವರು ರಾತ್ರಿ ಅದು ಇನ್ನೊಂದು ಕೋಣೆಗೆ ಸಾಗಿದ್ದನ್ನು ಕಾಣುತ್ತಿದ್ದರು. ಮತ್ತು ತಾಸರ್ಧ ತಾಸಿನಲ್ಲಿ ಅದು ಕಟ್ಟಡದ ಇನ್ನೊಂದು ಮೂಲೆಯ ಕೋಣೆಯನ್ನು ಸೇರುತ್ತಿತ್ತು. ಅವರ ನಿಷ್ಠ ಸೇವಕನಿಗೆ ಇದು ವಿಪರೀತ ತೊಂದರೆಯ ಮಾತಾಗಿರಬೇಕು. ರಾತ್ರಿಯೆಲ್ಲ ಹೆಚ್ಚು ಕಡಿಮೆ ಜಾಗರಣೆ ಮಾಡುವ ಪರಿಸ್ಥಿತಿ ಅವನಿಗೆ ಬರುತ್ತಿರಬೇಕು. ಆತನೇ ಹಗಲು ರಾತ್ರಿ ಅವರ ಸೇವೆ ಮಾಡುತ್ತಿದ್ದ. ಪ್ರತಿ ಸಲ ಠಾಕೂರರು ಸ್ಥಳ ಬದಲಿಸಿದಾಗ ಅವನು ಅವರ ಹಾಸಿಗೆ, ಸೊಳ್ಳೆಪಡದೆ, ಹಾಸಿಗೆಯ ಬಳಿ ಇಡುತ್ತಿದ್ದ ಮೇಜು, ಅವರ ಔಷಧ, ಕಾಗದಪತ್ರಗಳು ಎಲ್ಲವನ್ನೂ ಹೊತ್ತು ಒಯ್ಯಬೇಕಾಗುತ್ತಿತ್ತು.

ಠಾಕೂರರು ರಾತ್ರಿ ಕಾಲದಲ್ಲಿ ಕೆಲಸ ಮಾಡುತ್ತಿದ್ದುದೇ ಹೆಚ್ಚು. ಒಮ್ಮೊಮ್ಮೆ ಮೂರು ನಾಲ್ಕು ರಾತ್ರಿಗಳ ವರೆಗೆ ಸತತ ಕೆಲಸ ಮಾಡುತ್ತಿದ್ದರು. ಗುಡುಗು, ಮಿಂಚು ಮುಂತಾದ ನಿಸರ್ಗದಾಟಗಳು ಅವರಿಗೆ ಪ್ರಿಯವಾಗಿದ್ದವು. ಸೂರ್ಯೋದಯ, ಸೂರ್ಯಾಸ್ತಗಳ ದೃಶ್ಯಗಳನ್ನು ನೋಡುವ ಅವಕಾಶವನ್ನು ಅವರೆಂದೂ ತಪ್ಪಿಸಿಕೊಂಡವರಲ್ಲವೆನ್ನಬಹುದು.

ಮುಂಜಾನೆ ಎದ್ದೊಡನೆ ಮೊದಲು ಅವರು ತಮ್ಮ ತೋಟಕ್ಕೆ ಹೋಗುತ್ತಿದ್ದರು. ಅಲ್ಲಿ ಅವರು ಗಿಡದಿಂದ ಗಿಡಕ್ಕೆ ಹೋಗುತ್ತ, ಆಗಾಗ ಒಂದರ ಬಳಿ ಅದನ್ನು ನೋಡುತ್ತ ಇದನ್ನು ಮಾತಾಡಿಸುತ್ತ ನಿಲ್ಲುವದನ್ನು ಕಾಣುವದು ಒಂದು ಭಾಗ್ಯವಾಗಿತ್ತು. ಪ್ರತಿಯೊಂದು ಗಿಡದೊಡನೆಯೂ ಅವರ ಸಂಬಂಧ ಪ್ರತ್ಯೇಕವಾಗಿರುತ್ತಿತ್ತು. ನನ್ನ ತಾಯಿಯ "ಅಡವಿಯಲ್ಲಿ" ಎಂಬ ಚಿತ್ರದಲ್ಲಿ ಈ ದೃಶ್ಯವನ್ನು ಕಾಣಬಹುದು.

ಏನಾದರೊಂದು ದಿವ್ಯಸ್ಫೂರ್ತಿ ಹೊಳೆದಾಗ ಅದನ್ನು ಇತರರೆದುರು ಪ್ರಕಟಿಸದೆ ಸಮಾಧಾನವೆನಿಸುವದಿಲ್ಲವೆಂದಾಗ ಅವರು ಸಮಯಾಸಮಯವನ್ನು ಲೆಕ್ಕಿಸದೆ ಎದ್ದುಬಿಡುತ್ತಿದ್ದರು. ಅದು ಯಾವ ಸಮಯವೇ ಆಗಿರಲಿ, ಆಗ ಶಾಂತಿನಿಕೇತನದ ಇತರ ಚಟುವಟಿಕೆಗಳೆಲ್ಲ ನಿಂತುಹೋಗುತ್ತಿದ್ದವು. ವಿದ್ಯಾರ್ಥಿಗಳೆಲ್ಲ ಅವರ ಸುತ್ತ ಅವರ ದಿವ್ಯವಾಣಿಯನ್ನಾಲಿಸಲು ನೆರೆಯುತ್ತಿದ್ದರು.

ಸಂಜೆಯ ಸಮಯ ಹೆಚ್ಚಾಗಿ ನೃತ್ಯ ನಾಟಕಗಳಿಗೆ ಮೀಸಲಾಗಿರುತ್ತಿತ್ತು. ಇವು "ಉತ್ತರಾಯಣ" ಕಟ್ಟಡದ ಹಿಂದಿನ ವಿಶಾಲ ಜಗಲಿಯ ಮೇಲೆ ಜರುಗುತ್ತಿದ್ದವು. ಮುಳುಗುವ ಸೂರ್ಯನು ತಮ್ಮ ನಾಟಕ ಮತ್ತು ನೃತ್ಯ ನಾಟಕಗಳಿಗೆ ನೈಸರ್ಗಿಕ ಪಡದೆಯಾಗಿರಲೆಂಬ ಉದ್ದೇಶದಿಂದ ಅವರು ಈ ಕಟ್ಟಡವನ್ನು ಕಟ್ಟಿಸಿಕೊಂಡಿದ್ದರು.

ಅವರು ತಮ್ಮ ವಿದ್ಯಾರ್ಥಿಗಳಿಗೆ ತಮ್ಮ ನಾಟಕಗಳ ಹಾಡು, ದೃಶ್ಯ, ನೃತ್ಯಗಳನ್ನು ಒಂದೊಂದಾಗಿ ಕಲಿಸುತ್ತಿದ್ದರು. ಎಷ್ಟೋ ಸಲ ತಾವೇ ಎದ್ದು ನಿಂತು ಅಭಿನಯಿಸಿ ಹಾಡಿ ತೋರಿಸುತ್ತಿದ್ದರು. ಪ್ರತಿಯೊಂದೂ ತಮ್ಮ ಉದ್ದೇಶದಂತೆ ಪರಿಪೂರ್ಣವಾಗಿ ಆಗುವಂತೆ ನೋಡಿಕೊಳ್ಳುತ್ತಿದ್ದರು. ಕಲಕತ್ತೆಯಲ್ಲಿ ಅದನ್ನು ಪ್ರದರ್ಶಿಸುವದಕ್ಕಿಂತ ಮೊದಲು ರಂಗತಾಲೀಮು ಆಶ್ರಮದ ಸಕಲರ ಎದುರು ನಡೆಯುತ್ತಿತ್ತು.

ರವೀಂದ್ರರಿಗೆ ಅಭಿನಯದಲ್ಲಿ ಬಹು ಪ್ರೀತಿ. ಅವರು ತಮ್ಮ ಕವಿತೆಯನ್ನು ಅನ್ನುವಾಗ ಅಥವಾ ಹಾಡನ್ನು ಹಾಡುವಾಗ ಯಾವದೋ ದೈವೀ ತೇಜಸ್ಸು ಅವರನ್ನಾವರಿಸಿದಂತಿರುತ್ತಿತ್ತು.

ಆಗ ಅವರ ನಾಟಕಗಳು ಕಲಕತ್ತೆಯಲ್ಲಿ ತುಂಬ ಜನಪ್ರಿಯವಾಗಿದ್ದವು. ರಂಗಭೂಮಿಯ ಒಂದು ಪಕ್ಕದಲ್ಲಿ ಕುಳಿತು ರವೀಂದ್ರರು ಹಾಡುತ್ತಿದ್ದರು. ವಿದ್ಯಾರ್ಥಿಗಳು ರಂಗದ ಮೇಲೆ ನರ್ತಿಸುತ್ತಿದ್ದರು. ಅವರಲ್ಲಿ ಈ ಆಸಕ್ತಿ ಎಷ್ಟರ ಮಟ್ಟಿಗೆ ಬೆಳೆಯಿತೆಂದರೆ ಮುಂದೆ ಅವರು ಕೊನೆಯ ತೆರೆ ಬೀಳುವ ಹೊತ್ತಿಗೆ ಕುಳಿತವರು ಎದ್ದು ನಿಂತು ಕೈ ಬೀಸುತ್ತ ಉಚ್ಚ ಸ್ವರದಲ್ಲಿ ಹಾಡತೊಡಗುತ್ತಿದ್ದರು. ಅವರ ಹಾಡು ಇಡೀ ಮಂದಿರವನ್ನು ತುಂಬಿ ಪ್ರೇಕ್ಷಕರು ಅವರ ಭಾವದಲ್ಲಿ ತಲ್ಲೀನರಾಗುವಂತೆ ಮಾಡುತ್ತಿತ್ತು.

ರವೀಂದ್ರರ ನೃತ್ಯ ನಾಟಕಗಳು ಈಗ

ಇಷ್ಟೊಂದು ಜನಾದರಣೀಯವಾಗಿದ್ದರೂ ಕೆಲವೇ ವರ್ಷಗಳ ಹಿಂದೆ ರವೀಂದ್ರರು ಜನತೆಯ ಪ್ರಬಲ ವಿರೋಧವನ್ನು ಎದುರಿಸಬೇಕಾಯಿತು. ಸಂಗೀತ-ನೃತ್ಯಗಳು ಕೀಳು ಕಲೆಗಳು ಎಂದು ಉಚ್ಚ ಕುಲದವರು ಭಾವಿಸಿದ್ದರು. ಉಚ್ಚ ಕುಲದಲ್ಲಿ ಜನ್ಮಿಸಿದ ಹುಡುಗ ಹುಡುಗಿಯರು ಅವುಗಳಲ್ಲಿ ಭಾಗವಹಿಸುವಂತಿರಲಿಲ್ಲ.

ಇಂಥ ಕುಟುಂಬಗಳ ಹುಡುಗ-ಹುಡುಗಿಯರು ಪಾತ್ರ ವಹಿಸಿದ್ದ ಮೊದಲನೆಯ ನಾಟಕವನ್ನು ರವೀಂದ್ರರು ಕಲಕತ್ತೆಯಲ್ಲಿ ಆಡಿಸಿದಾಗ ಪ್ರೇಕ್ಷಕರು ಅವರನ್ನು ಬಯ್ದರು. ಕೊಳೆತ ಹಣ್ಣುಗಳನ್ನು, ಕಲ್ಲುಗಳನ್ನು ನಟರ ಮೇಲೆ ಎಸೆದರು. ನಾಟಕ ಅರ್ಧಕ್ಕೇ ನಿಲ್ಲಿಸಲ್ಪಡಬೇಕಾಯಿತು.

ಆದರೆ ಠಾಕೂರರು ಇಷ್ಟಕ್ಕೆಲ್ಲ ಅಂಜುವವರಾಗಿರಲಿಲ್ಲ. ಅವರು ಅದೇ ರಾತ್ರಿ ತಮ್ಮ ವಿದ್ಯಾರ್ಥಿಗಳಿಂದ ಕಮಲವನ್ನು ಖಡ್ಗದಿಂದ ಇರಿದ ಚಿತ್ರಗಳಿರುವ ಭಿತ್ತಿ ಪತ್ರಿಕೆಗಳನ್ನು ಬರೆಸಿ ಬೆಳಗಾಗುವದರೊಳಗೆ ನಗರದಲ್ಲೆಲ್ಲ ಅಂಟಿಸಿದರು. ತಮ್ಮನ್ನು ವಿರೋಧಿಸಿದವರಿಗೆ ಇದು ಅವರಿತ್ತ ಉತ್ತರವಾಗಿತ್ತು. ಈ ವಿರೋಧಿಗಳು ಕಲೆಯನ್ನು ಕೊಲ್ಲುತ್ತಿದ್ದಾರೆಂದು ಅವರು ತಮ್ಮ ಚಿತ್ರದಿಂದ ತೋರಿಸಿದ್ದರು.

ರವೀಂದ್ರರು ಕೊನೆಗೆ ಗೆದ್ದರು. ಭಾರತಕ್ಕೆ ಭಾರತವೇ ಅವರನ್ನು ಗೌರವಿಸತೊಡಗಿತು.

೧೯೩೧ ರಲ್ಲಿ ನಾನು ಶಾಂತಿನಿಕೇತನದಿಂದ ಹೊರಟೆ. ಮುಂದೆ ಅವರನ್ನು ಕಾಣುವ ಸುಯೋಗ ಒದಗಿದ್ದು ೧೯೩೯ ರಲ್ಲಿ. ನಾನು ಮತ್ತು ನನ್ನ ತಾಯಿ ಆಗ ಭಾರತಕ್ಕೆ ಬಂದೆವು. ನಾವು ಬರುವ ವಿಚಾರವನ್ನು ರವೀಂದ್ರರಿಗೆ ತಿಳಿಸಿರಲಿಲ್ಲ.

ಶಾಂತನಿಕೇತನಕ್ಕೆ ಬಂದೊಡನೆಯೆ ಅವರನ್ನು ಕಾಣುವ ಆತುರವನ್ನು ನನ್ನಿಂದ ಒಂದು ಕ್ಷಣವೂ ತಡೆಯುವದಾಗಲಿಲ್ಲ. ಅದೇ ಆಗ ಬೆಳಗಾಗಿದ್ದರೂ ರವೀಂದ್ರರು ಕಾರ್ಯಮಗ್ನರಾಗಿದ್ದರು.

ದೊಡ್ಡ ಮನೆಗಳಿಗೆ ಬೇಸತ್ತು ಅವರಾಗ ಚಿಕ್ಕ ಗುಡಿಸಲೊಂದರಲ್ಲಿ ವಾಸಿಸುತ್ತಿದ್ದರು. ಅವರು ಬಾಗಿಲಿಗೆ ಬೆನ್ನುಮಾಡಿ ಕುಳಿತದ್ದರಿಂದ ನಾನು ಬಂದದ್ದು ಅವರಿಗೆ ಗೊತ್ತಾಗಲಿಲ್ಲ. ಒಮ್ಮಿಂದೊಮ್ಮೆ ನನ್ನಲ್ಲಿ ನನ್ನ ಹಂಗರಿ ಸಂಸ್ಕಾರ ಜಾಗ್ರುತವಾಗಿ ನಾನು ಅವರ ಬಳಿ ಹೋಗಿ ಕೈಗಳನ್ನು ಅವರ ಕುತ್ತಿಗೆಯ ಸುತ್ತ ಬಳಸಿ ಅವರ ಕಣ್ಣು ಮುಚ್ಚಿದೆ, ಇಂಥ ಸಲಿಗೆ ತೋರುವ ಧೈರ್ಯ ಯಾರಿಗೂ ಇರಲಿಲ್ಲವಾದ್ದರಿಂದ ಅವರಿಗೆ ಆಗೇನೆನಿಸಿತೊ ಹೇಳಲಾರೆ.

"ಕಣ್ಣು ಮುಚ್ಚಿದವರು ಯಾರು ಹೇಳಿರಿ?" ಎಂದೆ ನಾನು. ಇಷ್ಟೊಂದು ವರ್ಷಗಳ ಮೇಲೂ ಅವರು ನನ್ನ ದನಿಯನ್ನು ಗುರುತಿಸಿ ನನ್ನನ್ನು ಪ್ರೀತಿಯಿಂದ ಸ್ವಾಗತಿಸಿದರು. ಅವರು ನನ್ನೆಡೆ ತಿರುಗಿದಾಗ ನನ್ನ ತಾಯಿ ಅವರ ಕಣ್ಣಿಗೆ ಬಿದ್ದಳು. ಅತ್ಯಾನಂದದಿಂದ ಅವರು "ಅಂತೂ ನೀವು ಬಂದಿರಿ" ಎಂದರು.

ನನಗೆ ಅವರ ಚಿತ್ರಗಳನ್ನು ಬಿಡಿಸುವದನ್ನು ಬಿಟ್ಟು ಮತ್ತೇನೇನೂ ಬೇಕಾಗಿರಲಿಲ್ಲ. ಆದರೆ ಗುಡಿಸಲು ತೀರ ಚಿಕ್ಕದಾಗಿದ್ದರಿಂದ ಅದು ಕಠಿಣವಾಗುತ್ತಿತ್ತು. ಚಿಕ್ಕ ಕೋಣೆಗಳಲ್ಲಿ ವಾಸಿಸುವದು ರವೀಂದ್ರರ ಒಂದು ವೈಶಿಷ್ಟ್ಯ. ಚಿತ್ರ ತೆಗೆಯಲು, ಲೇಖನ ಕಾರ್ಯ ನಡೆಸಲು ಅವರು ಯಾವಾಗಲೂ ಚಿಕ್ಕ ಕೋಣೆಯನ್ನೆ ಉಪಯೋಗಿಸುತ್ತಿದ್ದರು. ಅಲ್ಲಿ ಅವರ ಮೇಜು, ಕುರ್ಚಿಗಳನ್ನು ಬಿಟ್ಟರೆ ಮತ್ತಾವುದಕ್ಕೂ ಸ್ಥಳವೇ ಇರುತ್ತಿರಲಿಲ್ಲ. ನಸುಕಿನಲ್ಲಿ ಅವರು ಜಗಲಿಯ ಮೇಲೆ ಕುಳಿತು ಬರೆಯುವಾಗ ಮಾತ್ರ ನಾನವರ ಚಿತ್ರಗಳನ್ನು ಬಿಡಿಸಬಹುದಾಗಿತ್ತು.

ಅದೇ ವರ್ಷ ಮಹಾಯುದ್ಧದ ವಾರ್ತೆ ಶಾಂತಿನಿಕೇತನದ ಶಾಂತಿಯನ್ನು ಕದಡಿಬಿಟ್ಟಿತು. ಆಶ್ರಮದ ಪ್ರಮುಖರೆಲ್ಲ ಠಾಕೂರರ ಸುತ್ತ ನೆರೆದರು, ಯುದ್ಧದ ಬಗ್ಗೆ ಅವರೇನನ್ನುವರೊ ಎಂದು ಕೇಳಬೇಕೆಂಬ ಕುತೂಹಲದಿಂದ. ಯುದ್ಧದಲ್ಲಿ ಯಾರು ಗೆಲ್ಲುವರು ಎಂಬ ಚರ್ಚೆ ನಡೆದಿತ್ತು. ಅವರಲ್ಲನೇಕರು ಜರ್ಮನಿ ಗೆಲ್ಲುತ್ತದೆ ಎಂಬ ಅಭಿಪ್ರಾಯದವರಾಗಿದ್ದರು.

ಮಾತಿನ ನಡುವೆ ನನ್ನ ತಾಯಿ- "ಜರ್ಮನರೂ

ಗೆಲ್ಲುವದಿಲ್ಲ, ಇಂಗ್ಲಿಷರೂ ಗೆಲ್ಲುವದಿಲ್ಲ. ಗೆಲ್ಲುವವರು ರಶಿಯನ್ನರು" ಎಂದಾಗ ರವೀಂದ್ರರು ಅವಾಕ್ಕಾದರು. ಮುಂದೆರಡು ದಿನ ರಾತ್ರಿ ಅವರಿಗೆ ನಿದ್ದೆ ಬರಲಿಲ್ಲ. ಮೂರನೆಯ ದಿನ ಅವರು ನನ್ನ ತಾಯಿಯನ್ನು ಕರೆದು "ನೀವನ್ನುವದು ನಿಜವೆಂದು ನನಗನಿಸುತ್ತದೆ" ಎಂದರು.

ಈ ದಿನಗಳಲ್ಲಿ ಅವರು ತುಂಬ ಕೆಲಸ ಮಾಡುತ್ತಿದ್ದಿರಬೇಕು. ತಮ್ಮ ಕಾಲ ಮುಗಿಯುತ್ತ ಬಂದಿದೆ ಎಂದು ಅವರಿಗೆ ಅನಿಸುತ್ತಿದ್ದಿರಬೇಕು. ೧೯೪೧ ರಲ್ಲಿ ನಾವು ನ್ಯೂಯಾರ್ಕಿನಲ್ಲಿದ್ದಾಗ ಅವರು "ಇನ್ನೊಮ್ಮೆ ನನ್ನನ್ನು ನೋಡಬೇಕೆಂದಿದ್ದರೆ ತಡಮಾಡಲಾಗದು. ಬೇಗನೆ ಬನ್ನಿ" ಎಂದು ಬರೆದಿದ್ದರು.

ನಾವು ಬಂದಿದ್ದೆವು. ಈ ಕೊನೆಯ ದಿನಗಳಲ್ಲಿ ಅವರನ್ನು ಕಾಣುವದು ಹೃದಯಸ್ಪರ್ಶಿ ವಿಚಾರವಾಗಿತ್ತು. ಅವರು ಕೆಲ ಪ್ರಾಣಿಗಳನ್ನು-ಒಂದು ಬಿಡಾಡಿ ನಾಯಿಯನ್ನೂ ಒಂದು ನವಿಲನ್ನೂ-ಸಾಕತೊಡಗಿದ್ದರು. ಅವರು ಅವುಗಳನ್ನು ಅತ್ಯಂತ ಪ್ರೇಮದಿಂದ ಕಾಣುತ್ತಿದ್ದರು. ಯಾರಾದರೂ ಅವುಗಳನ್ನು ಗದರಿಸಿದಾಗ ಅವರಿಗಾಗುವ ನೋವನ್ನು ಇತರರು ಸ್ಫುಟವಾಗಿ ಕಾಣಬಹುದಿತ್ತು.

೧೯೪೧ ರಲ್ಲಿ ನಾವು ಮಸೂರಿಯಲ್ಲಿದ್ದೆವು. ಅಗಸ್ಟ ತಿಂಗಳ ಪೂರ್ಣಿಮಾಚಂದ್ರನು ಡೆಹರಾಡೂನಿನ ಕೊಳ್ಳದ ಮೇಲ್ಗಡೆ ಪ್ರಕಾಶಿಸಿದನು. ಕಾಮನ ಬಿಲ್ಲಿನ ಬಣ್ಣದ ಪ್ರಕಾಶವೊಂದು ಮಂದವಾಗಿ ಅವನ ಸುತ್ತ ಪಸರಿಸಿತ್ತು. ಅಂಥ ದೃಶ್ಯವನ್ನು ಆ ಮೊದಲು ನಾನು ನೋಡಿರಲಿಲ್ಲ, ಅನಂತರವೂ ಕಂಡಿಲ್ಲ.

ಈ ಸೌಂದರ್ಯ ಒಂದು ನಿಮಿಷ ಮನುಷ್ಯನನ್ನು ಮುಗ್ಧನನ್ನಾಗಿ ಮಾಡಿದರೂ ಅದು ಸಂತೋಷಸೂಚಕವಾಗಿರದೆ ಗತಿಸುತ್ತಿರುವ ವೈಭವವನ್ನು ಕಂಡು ಉಂಟಾಗುವ ದುಃಖವನ್ನು ಸೂಚಿಸುವಂತಿತ್ತು. ನನ್ನ ತಾಯಿ ಆ ರಾತ್ರಿಯ ಚಿತ್ರವನ್ನು ಬರೆದಳು.

ಮರುದಿನ ಮುಂಜಾನೆ ಪತ್ರಿಕೆಗಳು ರವೀಂದ್ರನಾಥ ಠಾಕೂರರ ಮರಣವನ್ನು ಸಾರಿದವು.

ಮತ್ತೊಮ್ಮೆ ನಾನವರ ಚಿತ್ರವನ್ನು ಬರೆದೆ. ಹತ್ತು ವರ್ಷಗಳು ಕಳೆದು ಹೋಗಿದ್ದವು. ಅವರ ಜನ್ಮದಿನೋತ್ಸವಕ್ಕೆ ಮೂರು ದಿನಗಳ ಮುಂಚೆ ನನ್ನ ಕೋಣೆಯೆಲ್ಲ ಅವರ ಸಾನ್ನಿಧ್ಯದಿಂದ ತುಂಬಿಹೋಯಿತು. ನನ್ನ ಕಣ್ಣು ಹೊರಳಿದತ್ತೆಲ್ಲ ಅವರೇ ಕಣ್ಣಿಗೆ ಬಿದ್ದರು.

ನಾನು ಅವರ ಚಿತ್ರವನ್ನು ಬರೆಯತೊಡಗಿದೆ. ಆದರೆ ನಾನು ಮತ್ತು ನನ್ನ ತಾಯಿ ಭಾರತಕ್ಕೆ ಬರುವದಕ್ಕಿಂತ ಮುಂಚೆ ಸಿಸಿಲಿಯಲ್ಲಿ ಒಂದು ಕನಸಿನಲ್ಲಿ ಅವರನ್ನು ಕಂಡಂತೆ ಈ ಸಲ ಅವರ ಚಿತ್ರವನ್ನು ಬರೆದೆ. ಆ ಕನಸೇ ನಮ್ಮನ್ನು ಶಾಂತಿನಿಕೇತನಕ್ಕೆ, ಠಾಕೂರರ ಸಾನ್ನಿಧ್ಯಕ್ಕೆ ತಂದು ನಿಲ್ಲಿಸಿತ್ತು.



## ಪುಸ್ತಕಪಾತಿವ್ರತ್ಯ

**ಲೇಡಿ ಗಫ್ ಎಂಬ ಬ್ರಿಟಿಶ ಮಹಿಳೆ ತನ್ನ ಮನೆಯ ಪುಸ್ತಕಾಲಯದಲ್ಲಿ ಪುರುಷಲೇಖಕರ ಗ್ರಂಥಗಳನ್ನು ಸ್ತ್ರೀಲೇಖಕರ ಪುಸ್ತಕಗಳ ಹತ್ತಿರ ಹತ್ತಿರ ಇಡಬಾರದೆಂದು ನಿಯಮವಿಟ್ಟಿದ್ದಳು. ಗಂಡ ಹೆಂಡತಿ ಇಬ್ಬರೂ ಲೇಖಕರಿದ್ದಲ್ಲಿ ಅವರ ಪುಸ್ತಕಗಳನ್ನು ಒತ್ತೊತ್ತಿಗೆ ಇಡಬಹುದೆಂದೊಂದು ಅಪವಾದವನ್ನು ಮಾತ್ರ ಆಕೆ ಮನ್ನಿಸಿದ್ದಳು !**

**—ಜೆನೆಟ್ ಸರ್ಫ್**

# ಇದುವೆ ಜೀವ, ಇದು ಜೀವನ

೧೬ ನೇ ಅಗಸ್ಟದಂದು ಬೆಳಗಾವಿಯಲ್ಲಿ ಪಾಯೋನಿಯರ ಕೋ-ಆಪರೇಟವ ಅರ್ಬನ ಬ್ಯಾಂಕಿನ ಅಟ್ಟದ ಮೇಲೆ ಸ್ವಾತಂತ್ರ್ಯ ಸಮರ ಶತಾಬ್ದಿ ಉತ್ಸವದ ಅಂಗವಾಗಿ ಶ್ರೀ ದಿವಾಕರ ರಂಗರಾಯರ ಭಾಷಣವಿತ್ತು. ಕರ್ಮಧರ್ಮ ಸಂಯೋಗದಿಂದ ನಾನು ಅಂದು ಬೆಳಗಾವಿಯಲ್ಲಿಯೇ ಇದ್ದೆ. ಭಾಷಣ ಕೇಳಬೇಕೆಂಬ ಆತುರದಲ್ಲಿ ನಾನು ಬಳ್ಳೇ ಉತ್ಸಾಹದಿಂದ ನನ್ನ ಸೈಕಲ್ ಹೊಡೆಯುತ್ತ ಹನುಮನ ಬೀದಿಯೊಳಗಿಂದ ಸಭಾಸ್ಥಾನದ ಕಡೆಗೆ ನಡೆದಿದ್ದೆ. ಅಕಸ್ಮಾತ್ "ಸಂತೋಷ ಭವನ" ಹೊಟೇಲಿನ ಎದುರು ನಿಂತಿದ್ದ ಒಬ್ಬ ವ್ಯಕ್ತಿಯ ಮೇಲೆ ನನ್ನ ಸಾಯಕಲ್ ಹಾಯ್ದಿತು. ಆ ವ್ಯಕ್ತಿಯ ಎರಡು ಕಾಲಿನ ನಡುವೆ ನನ್ನ ಸೈಕಲ್ಲಿನ ಮುಂದಿನ ಗಾಲಿ ಹೋಗಿ ನಿಂತುಕೊಂಡಿತು. ಸಾಯಕಲ್ ಮೇಲಿಂದ ಇಳಿದ ನಾನು ಕ್ಷಮಾಯಾಚನೆ ಮಾಡಿ ಅವರ ಬೈಗಳುಗಳನ್ನು ಆಲಿಸಲು ಸಿದ್ಧನಾಗಿ ಕೆಳಗೆ ಮೋರೆ ಮಾಡಿಕೊಂಡು ನಿಂತುಕೊಂಡೆ.

"ರಾಯ್ರೇ ನಿಮಗೆ ಸೈಕಲ್ ಇಡಲು ಸ್ಟ್ಯಾಂಡ್ ಬೇಕಿದ್ದರೆ ಅಗೋ ಅಲ್ಲಿದೆ ಹೊಟೇಲಿನ ಎದುರು, ಸಾಯಕಲ್ ಸ್ಟ್ಯಾಂಡು; ಇದು ಸೈಕಲ್ ಸ್ಟ್ಯಾಂಡಲ್ಲ. ನನ್ನ ಎರಡು ಕಾಲುಗಳು" ಎಂದು ಅಂದವರೆ ಆ ಮಹಾಶಯರು ಮುಂದೆ ಸಾಗಿದರು.

ಅನಂತ ಕಲ್ಲೋಳ, ವಿಜಾಪುರ

ಒಂದು ದಿನ ನಾವು ನಮ್ಮ ಪ್ರೊಫೆಸರರೊಡನೆ ವಿಲ್ಸನ್ ಗಾರ್ಡನಿನಾಚೆ ಇರುವ ಹುಚ್ಚ ರಾಸ್ಪತ್ರೆಯನ್ನು ನೋಡಲು ಹೋದೆವು. ದಾರಿಯಲ್ಲಿ ಪ್ರೊಫೆಸರರು ನಮಗೆ ಎಚ್ಚರಿಕೆಯ ಮಾತುಗಳನ್ನು ಹೇಳುತ್ತ "ಯಾವ ರೋಗಿಯನ್ನೂ ನೆಟ್ಟ ದೃಷ್ಟಿಯಿಂದ ನೋಡಬೇಡಿರಿ. ಸಹಜವಾಗಿ ಮುಂದೆ ಸಾಗಬೇಕು" ಎಂದರು.

ನಾವು ಸ್ಯಾನಿಟೋರಿಯಂದ ಒಳ ಆವರಣವನ್ನು ಪ್ರವೇಶಿಸಿದಾಗ ಅಲ್ಲಿನ ಹೂದೋಟದಲ್ಲಿ ಕೆಲವರು ರೋಗಿಗಳಿದ್ದರು. ಡಾಕ್ಟರರೂ ದಾದಿಗಳೂ ಅಲ್ಲಿಯೇ ರೋಗಿಗಳ ಚರ್ಯೆಯನ್ನು ಪರೀಕ್ಷಿಸುತ್ತಿದ್ದರು.

ನಮ್ಮ ತಂಡ ಹೂದೋಟದ ಕಾಲುಹಾದಿಯಲ್ಲಿ ಮುಂದೆ ಹೋದಾಗ ಒಬ್ಬ ರೋಗಿ ಪ್ರೊಫೆಸರರ ಕಡೆ ಬರುವಂತೆ ಕಂಡಿತು. ಪ್ರೊಫೆಸರರು ಸ್ವಲ್ಪ ಅಳುಕಿ ಬಿರುಸಾಗಿ ಹೆಜ್ಜೆಯಿಟ್ಟರು. ರೋಗಿ ಅವರನ್ನು ಹಿಂಬಾಲಿಸಿದಂತೆ ಅವರು ಓಡತೊಡಗಿದರು. ಹುಚ್ಚ ಬೆನ್ನಟ್ಟಿದ. ಡಾಕ್ಟರರು ಪ್ರೊಫೆಸರರನ್ನು ನಿಲ್ಲುವಂತೆ ಕೇಳಿಕೊಂಡರೂ ಅವರು ಮತ್ತಷ್ಟು ಜೋರಾಗಿ ಓಡಿದರು.

ಒಳಗಿನ ಹೂದೋಟದಿಂದ ಹೊರಗಡೆ ಹೋಗಲು ಕಟ್ಟಡದ ಮಧ್ಯದಲ್ಲಿ ಹೋಗುವದೊಂದೇ ದಾರಿಯಿತ್ತು. ಅಲ್ಲಿಗೆ ಅವರು ಪುನಃ ತಲುಪಬೇಕಾಗಿದ್ದರೆ ಹೂದೋಟವನ್ನು ಸುತ್ತಬೇಕಾಗಿತ್ತು. ಅಷ್ಟು ಓಡುವುದರೊಳಗೆ ಪ್ರೊಫೆಸರರು ಸೋತು ಕುಸಿದು ಬಿದ್ದುಬಿಟ್ಟರು.

ಅವರನ್ನು ಹಿಂಬಾಲಿಸಿದ ರೋಗಿ ಒಡನೆಯೇ ಅವರನ್ನು ಮುಟ್ಟಿ, "ಮುಟ್ಟಿದೆ, ಮುಟ್ಟಿದೆ!" ಎಂದು ಕೂಗಿ ಚಪ್ಪಾಳೆ ತಟ್ಟಿದ.

ಈಗ ಪ್ರೊಫೆಸರರಿಗೆ ಜೀವ ಬಂತು. "ಇಷ್ಟೇ ಆಗಿದ್ದರೆ ನಾನೆಲ್ಲಿ ಓಡುತ್ತಿದ್ದೆ?" ಎಂದು ಅವರು ಉದ್ಗಾರ ತೆಗೆದರು.

— ಬಾ ಕು

ಅಂದು ನಿಲ್ದಾಣದ ಮೇಲೆ ಎಂದಿಲ್ಲದ ಗದ್ದಲ. ಗಾಡಿ ಏರುವದೇ ದುಸ್ತರವಾಯಿತು. ಅಂತೂ ಕೊನೆಗೊಮ್ಮೆ ವಿಶ್ವಪ್ರಯತ್ನ ಮಾಡಿ ಹತ್ತಿದೆ. ಎಲ್ಲಿಯಾದರೂ ಕುಳಿತುಕೊಳ್ಳಲು ಸ್ಥಳವಿದೆಯೇ ಎಂದು ಅತ್ತ ಇತ್ತ ದೃಷ್ಟಿ ಕ್ಷೇಪ ಮಾಡಿದೆ. ನನ್ನ ಬಲಗಡೆಯ ಬೆಂಚಿನ ಮೇಲೆ ಒಬ್ಬ ಮಹಾಪುರುಷ ಒರಗಿ ನಿದ್ರಿಸುತ್ತಿದ್ದ. ನನ್ನೊಡನೆ ನಿಂತ ಎಲ್ಲರ ದೃಷ್ಟಿಯೂ ಅತ್ತ ಹರಿಯಿತು. ಕೆಲ ಜನರು ಹೋಗಿ ಆ ಮಹಾಪುರುಷನನ್ನು ಎಬ್ಬಿಸಲು ಪ್ರಯತ್ನಿಸಿದರು. ಅವನು ಅರ್ಭಟಿಸುತ್ತ, "ನಾನು ಮಲಗಿಕೊಳ್ಳುವ ಟಿಕೆಟ್ ತೆಗೆಸಿದ್ದೇನೆ ಏಳುವದಿಲ್ಲ" ಎಂದು ಗದರಿಸಿದನು. ಹೀಗೆ ಅವನನ್ನು ಎಬ್ಬಿಸಲು ಎರಡು ಮೂರು ಪ್ರಯತ್ನಗಳಾದವು. ಎಲ್ಲರಿಗೂ ಒಂದೇ ಉತ್ತರ ಸಿಕ್ಕಿತು– "ಮಲಗಿಕೊಳ್ಳುವ ಟಿಕೇಟ್ ತೆಗೆಸಿದ್ದೇನೆ" ಎಂದು.

ನಾನೊಮ್ಮೆ ಪ್ರಯತ್ನಿಸಿ ನೋಡಬೇಕೆಂದು ಅವನ ಬಳಿಗೆ ಹೋದೆ. "ಸ್ವಾಮಿ, ಬೇರೆಯವರಿಗೆ ನಿಲ್ಲಲು ಸ್ಥಳವಿಲ್ಲದಾಗ ತಾವು ಮಲಗಿಕೊಳ್ಳುವದೇ ?"

"ನಿಮಗೆ ಬೇರೆ ಹೇಳಬೇಕೇನ್ರಿ ? ನಾನು ಮಲಗುವ ಟಿಕೆಟ್ ತೆಗೆಸಿದ್ದೇನೆ."

"ಸ್ವಾಮಿ ನನ್ನ ಟಿಕೇಟನ್ನು ಸ್ವಲ್ಪ ನೋಡ್ರಿ. ನಾನು ಮಲಗಿಕೊಂಡವರ ಎದೆಯ ಮೇಲೆ ಕೂಡುವ ಟಿಕೇಟನ್ನು ತೆಗೆಸಿದ್ದೇನೆ" ಎಂದು ನಾನು ಅವನಿಗಿಂತಲೂ ಬಿರುಸಾಗಿ ಎಂದೆ.

ಆ ಡಬ್ಬಿಯಲ್ಲಿ ಕೂತ, ನಿಂತ ಜನವೆಲ್ಲ ಖೊಳ್ಳೆಂದು ನಕ್ಕಿತು. ಆ ಮಹಾಪುರುಷನು ನನ್ನನ್ನು ಮುಗುಳು ನಗೆಯಿಂದ ನೋಡುತ್ತ ಎದ್ದು ಕುಳಿತ. — ಪಿ. ಎಮ್. ಗಲಗಲಿ, ಬೀದರ.

ನಾನು ಸಣ್ಣವನಾಗಿದ್ದಾಗಿನ ಕಥೆ. ಬಹುಶಃ ೭೦ ವರ್ಷಗಳ ಹಿಂದೆ. ನಮ್ಮ ನೆರೆಮನೆಯ ಕಮಲೆಗೆ ಐದೇ ವರ್ಷವಾದರೂ ಅವಳಿಗೆ ಆಗಲೇ ಮದುವೆ ಮಾಡಿದ್ದರು. ಅವಳ ಮದುವೆಯಾಗಿ ಎರಡು ತಿಂಗಳಾಗಿರಲಿಲ್ಲ, ಅಷ್ಟರಲ್ಲಿ ಅವಳ ಗಂಡ ಸತ್ತ ವಾರ್ತೆ ಬಂದು ಅವಳ ತಾಯಿ ತಂದೆ ಆಕೆಯ ಗಂಡನ ಹೆಸರು ಹೇಳಿ ಅಳತೊಡಗಿದರು.

ಕಮಲೆಗೂ ಅಳಬೇಕೆನಿಸಿತು. ಆದರೆ ಗಂಡನ ಹೆಸರು ಹೇಳಬಾರದೆಂದು ಅವಳಿಗೆ ಹೇಳಿಕೊಟ್ಟಿದ್ದರು. ಆದ್ದರಿಂದ ಅವಳು ಅಳುತ್ತಿದ್ದ ತಾಯಿಯ ನ್ನೆಯಲುಗಿಸಿ ಕೇಳಿದಳು : "ಅಮ್ಮ ನಾನು ಯಾವ ಹೆಸರನ್ನು ಹೇಳಿ ಅಳಬೇಕು ?" ಎಂದು.

— ತಿ. ಶ. ಕು



ಪಾ. ವೆಂ. ಆಚಾರ್ಯ

# ನೇತ್ರದಾನಿ ಡಾ. ಮೋದಿಯವರು

**ಆಯುರ್ವೇದ ವೈದ್ಯರೊಬ್ಬರು ಜಗತ್ತಿನಲ್ಲೇ ಪ್ರಚಂಡ ಎನಿಸಬಹುದಾದ ಕಣ್ಣಿನ ಸರ್ಜನ್ನರಾದ ಕಥೆ.**

ಜೀವನದ ಸರ್ವೋತ್ತಮ ಪದಾರ್ಥಗಳು ಧರ್ಮಾರ್ಥವಾಗಿ ಬರುತ್ತವೆಂದು ಒಬ್ಬ ತತ್ವಜ್ಞಾನಿ ಹೇಳಿದ್ದಾನೆ; ಈ ಗಾಳಿ, ಈ ನೀರು ಮತ್ತು ಈ ಬೆಳಕು ಇವು ಮಾನವ ಮಾತ್ರನಿಗೆ ದೇವರ ದಾನವಾಗಿವೆ. ಡಾ. ಮೋದಿಯವರು ಈ ಮೂರನೇ ಮಹಾದಾನವನ್ನು ಅನುಭವಿಸಲು ಸಾವಿರಗಟ್ಟಳೆ ಜನರಿಗೆ ನೆರವಾಗಿದ್ದಾರೆ. ಕಣ್ಣು ಕಳೆದುಕೊಂಡ ಜನರಿಗೆ ಪುನಃ ಬೆಳಕಿನ ಸೌಭಾಗ್ಯವನ್ನು ದೊರಕಿಸಿಕೊಡುವ ಡಾ. ಮೋದಿಯವರು ದೇವರ ಕೈ ಎಂದೇ ಹೇಳಬೇಕು. ಯಾಕೆಂದರೆ ದೇವರು ಕೊಡುವ ಬೆಳಕಿನಂತೆ ಡಾ. ಮೋದಿಯವರ ನೇತ್ರಚಿಕಿತ್ಸೆ ಕೂಡ ಉಚಿತವಾಗಿಯೇ ದೊರೆಯುತ್ತದೆ.



ಡಾ. ಮುರಿಗೆಪ್ಪ ಚೆನ್ನವೀರಪ್ಪ ಮೋದಿಯವರು ದೇವರ ಕೈ ಎನ್ನಲು ಹಿಂಜರಿಯ ಬೇಕಾಗಿಲ್ಲ. ಅವರು ನೇತ್ರ ಚಿಕಿತ್ಸೆಯನ್ನಾರಂಭಿಸಿ ಕಳೆದ ಹದಿನೈದು ವರ್ಷಗಳಲ್ಲಿ ಸುಮಾರು ೭೦,೦೦೦ ಜನರಿಗೆ ಕಣ್ಣಿನ ಆಪರೇಶನ್ ಮಾಡಿದ್ದಾರೆ. ಅವರ ಶಸ್ತ್ರಕ್ರಿಯಾ ಕೌಶಲ ನಿಜವಾಗಿಯೂ ಅತಿಮಾನುಷ ವಾಗಿದೆ. ಒಂದು ದಿನಕ್ಕೆ ೨೦೦ ಕಣ್ಣಿನ ಆಪರೇಶನ್ನುಗಳನ್ನು ಮಾಡುವುದೆಂದರೆ ಅವರಿಗೆ ನೀರು ಕುಡಿದ ಹಾಗೆ. ಅವರ ಧರ್ಮಾರ್ಥ ನೇತ್ರಯಜ್ಞ ಶಿಬಿರಗಳ ಸಂಘಟಕರಾದ ರುಮಾಲೆ ಚೆನ್ನಬಸವಯ್ಯನವರು "ಒಂದೇ ದಿನದಲ್ಲಿ ಡಾ. ಮೋದಿಯವರು ೨೭೦ ಶಸ್ತ್ರಕ್ರಿಯೆಗಳನ್ನು ಮಾಡಿದ್ದನ್ನು ನಾನು ಕಣ್ಣಾರೆ ಕಂಡಿದ್ದೇನೆ" ಎಂದಿದ್ದಾರೆ.

ಅವರು ಮಾಡಿದ ಮೋತಿಬಿಂದು (Cataract) ಆಪರೇಶನ್ನುಗಳು ನೂರಕ್ಕೆ ನೂರರಷ್ಟು ಯಶಸ್ವಿಯಾಗಿವೆ. ಇದಲ್ಲದೆ ೧೫—೨೦ ಲಕ್ಷ ಜನರ ಕಣ್ಣುಗಳನ್ನು ಪರೀಕ್ಷಿಸಿ ಅನೇಕ ಲಕ್ಷ ಜನರಿಗೆ ಔಷಧ ಕೊಟ್ಟಿದ್ದಾರೆ ಅವರು. ದೇವರ ಕೈ ಇಲ್ಲದೆ ಇಂಥ ಅದ್ಭುತ ಸಾಮರ್ಥ್ಯ ಯಾರಿಗಾದರೂ ಹೇಗೆ ಬಂದೀತು?

ಡಾ. ಮೋದಿಯವರ ಸಂಗತಿ ಎಲ್ಲವೂ ಅಗಾಧವೇ. ಕೈಚಳಕಕ್ಕೆ ಸಮಾನವಾದ ಸಂಘಟನಾ ಸಾಮರ್ಥ್ಯ ಅವರಿಗಿದೆ. ಅವರು ಒಂದು ಹಳ್ಳಿಗೋ ಪಟ್ಟಣಕ್ಕೋ ಬಂದರೆಂದರೆ ಮೊದಲು ಪ್ರಮುಖರ ಸಭೆ ಕರೆದು ನೇತ್ರಶಿಬಿರದ ದೈನಂದಿನ ವೆಚ್ಚಕ್ಕಾಗಿ ನಿಧಿ ಕೂಡಿಸಲು ಕೇಳಿಕೊಳ್ಳುತ್ತಾರೆ. ಭಾರತದ ಲಕ್ಷಾಂತರ ಕಣ್ಣಿನ ರೋಗಿಗಳ ಕರುಣ ಕಥೆಯನ್ನು ಬಣ್ಣಿಸುತ್ತಾರೆ. ಅವರ ಸರಳ ವರ್ತನೆ, ಶಾಂತ ಪ್ರಕೃತಿ, ಸೇವಾಧರ್ಮದ ಸ್ಫೂರ್ತಿ ಒಂದು ದೈವೀ ಪ್ರಭಾವವನ್ನು ಹೊರಹೊಮ್ಮಿಸುತ್ತವೆ. ಧನ, ಧಾನ್ಯ, ಶ್ರಮ–ಯಾವ ದಾನವನ್ನೂ ಮೋದಿಯವರು ಸ್ವೀಕರಿಸುತ್ತಾರೆ.

ಸುದ್ದಿ ಸುತ್ತಮುತ್ತ ಹಳ್ಳಿಗಳಿಗೆ ಹಬ್ಬುತ್ತದೆ. ಪೂರ್ತಿ ಕಣ್ಣು ಕಳೆದುಕೊಂಡವರು, ಅರ್ಧ ಅಂಧರು ಮೋದಿಯವರ ಶಿಬಿರದತ್ತ ಬಸ್ಸುಗಳಲ್ಲಿ, ಬಂಡಿಗಳಲ್ಲಿ, ರೇಲುಗಳಲ್ಲಿ, ಕಾಲ್ನಡಿಗೆಯಲ್ಲಿ ಬರುತ್ತಾರೆ. ಅವರಲ್ಲಿ ಬಹುಮಂದಿ ಹರಕು ಚಿಂದಿಯ ದರಿದ್ರನಾರಾಯಣರು. ಅಷ್ಟು ಹೊತ್ತಿಗೆ ಊರಿನ ಧರ್ಮಶಾಲೆಯೋ ಪಾಠಶಾಲೆಯೋ ಖಾಲಿಯಾಗಿ ಆಸ್ಪತ್ರೆಯ ರೂಪ ಧರಿಸುತ್ತದೆ. ಗೋಡೆಗಳಿಗೆ ಸುಣ್ಣ ಬಳಿದು ಮೇಜುಗಳನ್ನು ಅಣಿಗೊಳಿಸಿ, ಡಿ. ಡಿ. ಟಿ. ಹೊಡೆದು, ದೀಪಗಳ ವ್ಯವಸ್ಥೆಯಾಗಿರುತ್ತದೆ. ಭಾರತ ಸೇವಾದಲದ ಸ್ವಯಂಸೇವಕರು ಡಾ. ಮೋದಿಯವರ ಸಂಘಟನೆಯ ಕೈಯಂತಿದ್ದಾರೆ. ಅವರು ನೇತ್ರ ಶಿಬಿರಗಳ ವ್ಯವಸ್ಥೆಯನ್ನು ವಹಿಸಿಕೊಳ್ಳುತ್ತಾರೆ.

ಮೊದಲಿನ ಎರಡು ದಿನ ರೋಗಿಗಳ ಪರೀಕ್ಷೆ ನಡೆಯುತ್ತದೆ. ನೂರಾರು ರೋಗಿಗಳ ಕಣ್ಣುಗಳನ್ನು ನೋಡಿ ಕೆಲವರಿಗೆ ಔಷಧ ಕೊಟ್ಟು, ಕೆಲವರಿಗೆ ಇನ್ನೂ ಕೆಲ ತಿಂಗಳು ಕಾಯಲು ಹೇಳಿ, ಕೆಲವರನ್ನು ಆಪರೇಶನಿಗಾಗಿ ನೊಂದಾಯಿಸಲಾಗುತ್ತದೆ.

ಮೂರನೇ ದಿವಸ ಶಸ್ತ್ರಕ್ರಿಯೆಯ ಸತ್ರದ ಆರಂಭ. ಬೆಳಿಗ್ಗೆ ೮ ಗಂಟೆಗೇ ನಾಲ್ಕು ಮೇಜುಗಳ ಮೇಲೆ ನಾಲ್ವರು ರೋಗಿಗಳು ಮಲಗಿರುತ್ತಾರೆ. ಉಳಿದವರು ತಮ್ಮ ಸರದಿಗಾಗಿ ಕಾಯುತ್ತಿದ್ದಾರೆ. ನೆತ್ತಿನಸುವೆ ಬೋಳಾಗಿದ್ದರೂ ಇನ್ನೂ ಎಳೆಹರೆಯದ ಸರಳ ಮುಖಬಿಂಬವುಳ್ಳ ೪೦ ವಯಸ್ಸಿನ ಡಾ. ಮೋದಿಯವರು ಪ್ರವೇಶಿಸುತ್ತಾರೆ. ಅವರ ಕೈಯಲ್ಲಿರುವ ಶಸ್ತ್ರ ವಿದ್ಯುದ್ವೇಗದಿಂದ ಚಲಿಸುತ್ತದೆ. ಕ್ಷಣಗಳಲ್ಲಿ ನಾಲ್ಕೂ ರೋಗಿಗಳ ಕಣ್ಣಕೆಳಗೆ ಗಾಯಗಳಾಗಿರುತ್ತವೆ. ಮತ್ತೆ ಕೆಲ ನಿಮಿಷಗಳಲ್ಲಿ ಅವರೆಲ್ಲರ ಶಸ್ತ್ರಕ್ರಿಯೆ ಮುಗಿದು ಕಣ್ಣುಗಳಿಗೆ ಪಟ್ಟಿ ಬಿಗಿದು ಸ್ವಯಂಸೇವಕರು ಅವರನ್ನೆತ್ತಿ ಹೊರಗಿರುವ ಶುಶ್ರೂಷಾಶಿಬಿರಕ್ಕೆ ಸಾಗಿಸಿರುತ್ತಾರೆ ಮತ್ತು ಇನ್ನೊಂದು ತಂಡ ಮೇಜುಗಳ ಮೇಲೆ ಮಲಗಿರುತ್ತದೆ. ಮತ್ತೆ ಡಾ. ಮೋದಿಯವರ ಸಿದ್ಧಹಸ್ತ ಚಲಿಸತೊಡಗುತ್ತದೆ.

ಇದು ತಾಸಿನಿಂದ ತಾಸಿಗೆ, ದಿನದಿಂದ ದಿನಕ್ಕೆ ನಿರಂತರವಾಗಿ ಸಾಗುತ್ತದೆ. ಡಾ. ಮೋದಿಯವರು ದಿನಕ್ಕೆ ೧೬ ತಾಸು ತೆರಪಿಲ್ಲದೆ ದುಡಿಯುತ್ತಾರೆ. ಆದರೂ ಒಂದಿಷ್ಟು ಬೇಸರ, ಕೋಪ-ತಾಪ, ಆಯಾಸ ಅವರಿಗಾಗುವುದಿಲ್ಲ. ಆ ಊರಿಂದ ಡಾ. ಮೋದಿಯವರು ಕದಲುವ ಮೊದಲು ಸಾವಿರಾರು ಜನರು ಅವರ ಶಸ್ತ್ರೋಪಕರಣಗಳಿಂದ ದೃಷ್ಟಿಲಾಭಹೊಂದಿ ಹರಸುತ್ತ ತಮ್ಮೂರುಗಳಿಗೆ ಹೊರಟಿರುತ್ತಾರೆ.

ಡಾ. ಮೋದಿಯವರನ್ನು ಈ ಅಪ್ರತಿಮ ಪರಿಶ್ರಮಕ್ಕೆ ಪ್ರೋತ್ಸಾಹಿಸುವ ಶಕ್ತಿ ಯಾವುದು? ಅವರು ಇಷ್ಟೆಲ್ಲವನ್ನು ಹೇಗೆ ತಾಳಿಕೊಳ್ಳುತ್ತಾರೆ?

ಮೋದಿಯವರು ಹುಡುಗನಾಗಿದ್ದಾಗಲೇ ಮಹಾತ್ಮಾ ಗಾಂಧಿಯವರ ಪ್ರಭಾವಕ್ಕೊಳಗಾದರು. ವಿಜಾಪುರದ ಸಾಮಾನ್ಯ ವ್ಯಾಪಾರಸ್ಥ ಮನೆತನದಲ್ಲಿ ಹುಟ್ಟಿದ ಅವರಲ್ಲಿ ಮೊದಲೇ ಇದ್ದ ಭೂತದಯೆಯ ಬೀಜ ಸಸಿಯಾಗಿ ಬೆಳೆಯಿತು. ತಮ್ಮ ಸುತ್ತಲೂ ಇರುವ ದುಃಖಕ್ಲೇಶಗಳನ್ನು ತಮ್ಮದೇ ರೀತಿಯಲ್ಲಿ ಪರಿಹರಿಸುವ ಹಂಬಲ ಅವ

ರನ್ನು ವೈದ್ಯಕೀಯ ವೃತ್ತಿಯತ್ತ ಸೆಳೆಯಿತು. ಶ್ರೀಮಂತವಲ್ಲದ ಕುಟುಂಬದ ನಾಲ್ವರು ಮಕ್ಕಳಲ್ಲೊಬ್ಬರಾದ ಮುರಿಗೆಪ್ಪನವರಿಗೆ ಬಲು ತುಟ್ಟಿಯಾದ ವಿದೇಶಿ ವೈದ್ಯಕೀಯ ಶಿಕ್ಷಣ ಹೇಗೆ ಸಾಧ್ಯವಾಗಬೇಕು? ಆದರೆ ತರುಣ ಮುರಿಗೆಪ್ಪನವರು ಹಿಂಜರಿಯದೆ ಆಯುರ್ವೇದದ ಮೂಲಕವಾಗಿ ವೈದ್ಯಕೀಯ ಪ್ರಪಂಚದಲ್ಲಿ ಪ್ರವೇಶಿಸಲು ನಿರ್ಧರಿಸಿದರು. ಅವರು ಮುಂಬಯಿ ಸರಕಾರದ ಆಂಗ್ಲಾಯುರ್ವೇದ "ಭಿಷಗ್ವರ" ಪದವಿ ಪಡೆದು ವೃತ್ತಿಯನ್ನಾರಂಭಿಸಿದರು.

ಆದರೆ ಇದರಿಂದ ಮೋದಿಯವರಿಗೆ ತೃಪ್ತಿಯಾಗಲಿಲ್ಲ. "ತನ್ನನ್ನು ಪೂರ್ಣವಾಗಿ ಅರ್ಪಿಸಿಕೊಂಡ ಹೊರತು ಏನನ್ನೂ ಅರ್ಪಿಸಿದಂತಲ್ಲ" ಎಂಬ ಗಾಂಧೀಜಿಯ ನುಡಿ ಅವರ ಚಿತ್ತಫಲಕದಲ್ಲಿ ಕೆತ್ತಿತ್ತು. ಅವರಿಗೆ ಆತ್ಮಾರ್ಪಣೆಯ ಒಂದು ಸಾಧನ ಬೇಕಾಗಿತ್ತು.

ಭಾರತದಲ್ಲಿ ೧೫ ಲಕ್ಷ ಪೂರ್ಣಾಂಧರೂ ೪೫ ಲಕ್ಷ ಅಂಶಾಂಧರೂ ಇರುವರೆಂದರಿತ ಮೋದಿಯವರ ಹೃದಯ ದೇವರ ಬೆಳಕಿನಿಂದ ವಂಚಿತರಾದ ಈ ದುರ್ದೈವಿಗಳ ಸಹಾಯಕ್ಕೆ ಹೋಗಬೇಕೆಂದು ಹಾರೈಸಿತು. ಮುಂಬಯಿಯ ಕೆ. ಬಿ. ಎಚ್. ಬಿ. ಕಣ್ಣಿನ ಆಸ್ಪತ್ರೆಯಲ್ಲಿ ತರಬೇತಿಗಾಗಿ ಸೇರಿಕೊಂಡರು. ಅವರಿಗಾಗ ೨೦ ವರ್ಷ. ಈ ಆಯುರ್ವೇದ ವೈದ್ಯನಿಂದ ಯಾರೂ ಬಹಳ ನಿರೀಕ್ಷಿಸಿರಲಿಲ್ಲ. ಆದರೆ ಕೆಲ ಕಾಲದಲ್ಲೆ ಅವರ ಕೈ ಅವರ ಗುರುಗಳ ಕೈಗಳಷ್ಟೇ ಚೆನ್ನಾಗಿ, ನಿರ್ಭಯವಾಗಿ ಕಣ್ಣುಗಳ ಚಿಕಿತ್ಸೆ ಮಾಡತೊಡಗಿತು. ಆಸ್ಪತ್ರೆಯಲ್ಲಿ ತರಬೇತಿ ಮುಗಿಸಿಕೊಂಡು ಹೊರಬೀಳಬೇಕಾದರೆ ಅವರು ಒಂದು "ಅದ್ಭುತ" ವಾಗಿ ಹೋಗಿದ್ದರು: ಆಸ್ಪತ್ರೆಯ ಎಂಟು ಡಾಕ್ಟರರು ಮಾಡಬಲ್ಲಷ್ಟು ಶಸ್ತ್ರಕ್ರಿಯೆಗಳನ್ನು ಮೋದಿಯವರೊಬ್ಬರೇ ಮಾಡಬಲ್ಲವರಾಗಿದ್ದರು.

ನೇತ್ರ ಚಿಕಿತ್ಸೆಯಲ್ಲಿ ಪ್ರಥಮ ವರ್ಗದ ಪ್ರವೀಣನೆಂದು ಆಗಲೇ ಹೆಸರಾದ ಮೋದಿಯವರು ಮುಂಬಯಿಯಂಥ ಪಟ್ಟಣದಲ್ಲಿ ನಿಂತಿದ್ದರೆ ಲಕ್ಷಾಧೀಶರಾಗಿಬಿಡಬಹುದಿತ್ತು. ಆದರೆ ಅವರನ್ನು ಹಣವು ಮೋಹಿಸಲಿಲ್ಲ. ಭಾರತದ ಕುರುಡುತನದ ಮೇಲೆ "ಮಹಾಯುದ್ಧ"ವನ್ನು ಸಾರಲು ಅವರು ನಿರ್ಧರಿಸಿದರು. ಇದಕ್ಕೆ ನಗರಗಳಲ್ಲ, ಹಳ್ಳಿಗಳೇ ಉತ್ತಮ ರಣರಂಗವೆಂದು ಅವರಿಗೆ ತೋರಿತು.

ಡಾ. ಮೋದಿಯವರ ಪ್ರಥಮ "ನೇತ್ರ ಶಿಬಿರ" ಗಾಂಧೀಜಿಯ ನಾಡಾದ ಗುಜರಾಥದ ಪಾಟಣ ಎಂಬಲ್ಲಿ ೧೯೪೩ ರಲ್ಲಿ ಪ್ರಾರಂಭವಾಯಿತು. ಅಚ್ಚ ಗಾಂಧೀ ಆದರ್ಶದಿಂದ ಹೊರಟ ಈ ಶಿಬಿರದಲ್ಲಿ ಬಡವ ಬಲ್ಲಿದ, ಉಚ್ಚ ನೀಚ ಭೇದವೆಣಿಸಲು ಮೋದಿಯವರು ಅವಕಾಶವೀಯಲಿಲ್ಲ. ಈ ಶಿಬಿರಕ್ಕೆ ಸಾವಿರ ಜನ ಬಂದರು. ಕಣ್ಣಿಲ್ಲದವರ ನೆರವಿಗಾಗಿ ಅವರ ಬಂಧುಮಿತ್ರರೂ ಬಂದದ್ದರಿಂದ ಅವರಿಗೆಲ್ಲ ಪುಕ್ಕಟೆ ಚಿಕಿತ್ಸೆಯೊಡನೆ ಧರ್ಮಾರ್ಥ ಅಶನ-ವಸತಿಗಳ ವ್ಯವಸ್ಥೆಯೂ ಅಗತ್ಯವಾಯಿತು.

ನೇತ್ರದಾನಿ ಡಾ. ಮುರಿಗೆಪ್ಪ ಮೋದಿಯವರ ಅಪೂರ್ವ— ಅದು ಖಂಡಿತವಾಗಿ ಪ್ರಪಂಚದ ಅಪೂರ್ವ ಸೇವಾ ಸಾಹಸಗಳಲ್ಲಿ ಒಂದಾಗಿದೆ— ನೇತ್ರ ಶಿಬಿರಗಳ ಕಥೆ ಪ್ರಾರಂಭವಾದುದು ಹೀಗೆ. ಪಾಟಣ ಶಿಬಿರದ ಅನುಭವದಿಂದ ಮೊದಲು ರೂಪುಗೊಂಡ ಸಾಮೂಹಿಕ ನೇತ್ರ ಚಿಕಿತ್ಸಾ ತಂತ್ರವನ್ನು ಮೋದಿಯವರು ಸುಧಾರಿಸುತ್ತಲೇ ಇದ್ದಾರೆ. ಮೊದಲೆರಡು ದಿನ ಪ್ರಾರಂಭಿಕ ಪರೀಕ್ಷೆ, ಮತ್ತೆರಡು ದಿನ ನಿರಂತರ ಶಸ್ತ್ರ ಚಿಕಿತ್ಸೆ, ಕೊನೆಯ ೧೨ ದಿನ ಶಸ್ತ್ರಕ್ರಿಯಾನಂತರದ ಪರೀಕ್ಷೆ, ಕನ್ನಡಕ ಮತ್ತು ಔಷಧಿಗಳಿಗಾಗಿ ಸಲಹೆ. ಇದೀಗ ಅವರ ನೇತ್ರ ಶಿಬಿರಗಳ ಸಾಮಾನ್ಯ ಮಾದರಿಯಾಗಿದೆ.

ಡಾ ಮೋದಿಯವರು ಪಾಟಣದಲ್ಲಿ ನೇತ್ರ ಯಜ್ಞ ದೀಕ್ಷೆಯಲ್ಲಿದ್ದಾಗಲೇ ಅವರ ತಂದೆ ಮಗನ ವಿವಾಹದ ಪ್ರಸ್ತಾಪದಲ್ಲಿದ್ದರು. ಶ್ರೀಮಂತ ಜಮೀನ್ದಾರರಾದ ರಾಯಪ್ಪ ಮೆಣಸಿನಕಾಯಿಯವರ ಮಗಳಾದ ಲೀಲಾವತಿ ಅನುರೂಪ ವಧುವೆಂದು ಗೊತ್ತಾಯಿತು. ರಾಯಪ್ಪನವರು ಭಾವಿ ಅಳಿಯನ ದರ್ಶನಕ್ಕಾಗಿ ಪಾಟಣ ಯಾತ್ರೆ ಮಾಡಿದರು. ನೇತ್ರಪರೀಕ್ಷೆಗಳ ಮಧ್ಯದಲ್ಲಿಯೇ ಮೋದಿಯವರು ಅವರನ್ನು ಕಂಡರು.. ಮದು

ವೆಗೆ ಮೋದಿಯವರ ಅಡ್ಡಿಯಿದ್ದಿಲ್ಲ. ಹೆತ್ತವರ ಅಪೇಕ್ಷೆಯಿದ್ದರೆ ಹಾಗೆಯೇ ಆಗಲಿ. ಆದರೆ ಅಳಿಯ ನಾಳೆ ಲಕ್ಷಾಧೀಶ ಸರ್ಜನ್ನನಾಗಲಿದ್ದಾನೆಂಬ ಯೋಚನೆಯಿದ್ದರೆ ಅದನ್ನು ಈಗಲೇ ಬಿಟ್ಟುಬಿಡುವುದು ಒಳಿತು— ಎಂದು ಮೋದಿಯವರು ಎಚ್ಚರಿಕೆ ಕೊಟ್ಟರಂತೆ.

ರಾಯಪ್ಪನವರು ಎಚ್ಚರಿಕೆಯನ್ನು ಲಕ್ಷಿಸಲಿಲ್ಲ. ಈ ತರುಣನ ಸೇವಾಸ್ಫೂರ್ತಿ ಅವರಿಗೂ ತಗಲಿತಷ್ಟೇ ! ಕು. ಲೀಲಾವತಿ ಮೋದಿಯವರ ಪತ್ನಿಯಾದರು. ಇಂದು ಶ್ರೀಮತಿ ಮೋದಿಯವರು ಡಾ. ಮೋದಿಯವರ ಕಾರ್ಯದಲ್ಲಿ ನೆರವು ನೀಡುತ್ತ, ಅವರ ಶಿಬಿರಗಳ ಸಂಘಟನೆಯಲ್ಲಿ ತಮ್ಮ ಸ್ವಂತದ ವಿಚಾರಗಳಿಂದ ದಕ್ಷತೆಯನ್ನು ಹೆಚ್ಚಿಸುತ್ತ ಪತಿಕಾರ್ಯಪರಾಯಣತೆಯನ್ನು ಪ್ರಕಟಿಸುತ್ತಿದ್ದಾರೆ. ಮಾವ ರಾಯಪ್ಪನವರು ಅವರ ಶಿಬಿರಗಳ ಮುಖ್ಯ ಧನಸಹಾಯಕರಲ್ಲೊಬ್ಬರಾಗಿದ್ದಾರೆ.

ಡಾ. ಮೋದಿಯವರಿಗೆ ಸಂಸಾರದ ವಿಚಾರ ಎಂದೂ ಅಂಟಿಕೊಳ್ಳುವುದಿಲ್ಲ. ಬೆಳಗಾವಿಯಲ್ಲಿರುವ ತಮ್ಮ ಹೆಂಡತಿ ಮತ್ತು ಮಗ ಅಮರನಾಥನನ್ನು ಕಾಣಲು ಅವರು ಬರುವುದು ಮೂರು ತಿಂಗಳಿಗೊಮ್ಮೆ. ಸಾಮಾಜಿಕ ಸಮಾರಂಭಗಳಲ್ಲಿ ಅವರು ಭಾಗವಹಿಸುವುದು ವಿರಳ. ಅವರಿಗೆ ತಮ್ಮ ಅಂಧ ರೋಗಿಗಳದೇ ಹಗಲಿರಳು ಚಿಂತೆ. ಯಾರಾದರೂ ಅವರಿಗೆ ಸಮಾರಂಭಗಳಿಗೆ ಆಮಂತ್ರಣ ಕೊಟ್ಟರೆ "ಕ್ಷಮಿಸಿರಿ. ನನ್ನರೋಗಿಗಳೇ ನನ್ನ ದೇವರು. ಅವರ ಪೂಜೆ ಬಿಟ್ಟು ಬರಲಾರೆ" ಎನ್ನುತ್ತಾರೆ. ಯಾವಾಗಲೂ ಊರಿಂದೂರಿಗೆ ಯಾತಾಯಾತ ಹಾಕುತ್ತಿರುವ ಅವರಿಗೆ ರೇಲು ಗಾಡಿಗಳಲ್ಲಿ ಕೂಡ ರೋಗಿಗಳ ಯೋಚನೆ. ಡಬ್ಬಿಯಿಂದ ಡಬ್ಬಿಗೆ ಹೋಗಿ ಪ್ರಯಾಣಿಕರ ಕಣ್ಣುಗಳನ್ನು ಪರೀಕ್ಷಿಸುತ್ತಾರೆ. ಒಮ್ಮೆಯಂತೂ ಅವರು ಗಾಡಿಯಲ್ಲಿ ಹೀಗೆ ಪರೀಕ್ಷಾಸಂಚಾರ ಮಾಡಿ, ಅದು ಮುಗಿದ ಮೇಲೆ ಕೆಲಸವಾಯಿತೆಂದುಕೊಂಡು ಯಾವುದೋ ನಿಲ್ದಾಣದಲ್ಲಿ ಇಳಿದುಬಿಟ್ಟರು. ತಮ್ಮೊಡನೆ ಬಂದಿದ್ದ ಪತ್ನಿಯ ವಿಚಾರವಾಗಲಿ ತಾವು ಹೋಗಬೇಕೆಂದಿದ್ದ ಊರು ಬಿಟ್ಟು ಬೇರಾವುದೋ ಊರಲ್ಲಿ ತಾವು ಇಳಿದದ್ದಾಗಲಿ ಅವರ ಗಮನದಲ್ಲಿದ್ದಿಲ್ಲ.

ಡಾ. ಮೋದಿಯವರ ವೇಷಭೂಷಣ, ಊಟ ಉಪಚಾರಗಳೆಲ್ಲ ನಿರಾಡಂಬರ, ಸರಳ. ಜನರ ನೆರವಿಯಲ್ಲಿ ಅವರನ್ನು ಗೊತ್ತುಹಚ್ಚುವುದು ಸುಲಭವಲ್ಲ. ಶಾಕಾಹಾರಿಯಾದ ಅವರಿಗೆ ಕೆಲ ತುಣುಕು ರೊಟ್ಟಿ ಇದ್ದರೆ ದಿನದ ಪಥ ಆಗಿಹೋಯಿತು. ಇಷ್ಟೊಂದರ ಮೇಲಿಂದ ದಿನಕ್ಕೆ ೧೬ ತಾಸು ದುಡಿಯುವ ಚೈತನ್ಯ ಹೇಗೆ ಬರುತ್ತದೆಂದು ಕೇಳಿದರೆ ಅವರ ಸರಳ ಉತ್ತರ ಸಿದ್ಧವಾಗಿರುತ್ತದೆ: "ನನ್ನ ರೋಗಿಗಳೆ ನನಗೆ ಟಾನಿಕ್ !" ಎಂದು. ಅವರ ಹಿತೈಷಿಗಳು ಅವರ ಆರೋಗ್ಯದ ಬಗ್ಗೆ ಚಿಂತಿತರಾಗಿರುತ್ತಾರೆಯೇ ಹೊರತು ಅವರಲ್ಲ. ಅವರ ಕೃಶಕಾಯದಲ್ಲಿ ಒಂದು ನಿಶ್ಚಿಂತ ಉಲ್ಲಸಿತ ತೇಜಸ್ಸು ಮಿಂಚುತ್ತಿರುತ್ತದೆ.

೧೯೪೯ರಲ್ಲಿ ಲಕ್ಷಾಂತರ ಅಂಧಬಾಂಧವರ ಸೇವೆಯನ್ನು ಮಾಡಿ ಮುಗಿಸಿದ ಮೇಲೆ ಡಾ. ಮೋದಿಯವರು ಅಮೇರಿಕಕ್ಕೆ ಹೋಗಿ ಅಲ್ಲಿನ ಪ್ರಮುಖ ಆಸ್ಪತ್ರೆಗಳಲ್ಲಿ ಅತ್ಯಾಧುನಿಕ ನೇತ್ರ ಚಿಕಿತ್ಸಾ ವಿಧಾನಗಳನ್ನೂ ಕಣ್ಣಿನ ಬ್ಯಾಂಕ್, ಪ್ಲಾಸ್ಟಿಕ್ ಸರ್ಜರಿ ಮೊದಲಾದ ತಂತ್ರಗಳನ್ನೂ ಅಭ್ಯಸಿಸಿ ಬಂದರು. ಅನಂತರ ಯುರೋಪಿನಲ್ಲೆಲ್ಲ ಸಂಚರಿಸಿ ನೇತ್ರ ಚಿಕಿತ್ಸಾಕ್ರಮಗಳನ್ನು ಕಂಡರು. ಇದೀಗ ಅವರು ರಶಿಯಕ್ಕೂ ಹೋಗಿ ಬಂದಿದ್ದಾರೆ.

ಪ್ರಾರಂಭದಲ್ಲಿ ಏಕಾಂಗಿಯಾಗಿ ಸ್ವಯಂಸೇವಕರ ಮತ್ತು ದಾನಿಗಳ ಸಹಾಯದಿಂದ ಅವರು ನಡೆಸುತ್ತಿದ್ದ ನೇತ್ರ ಯಜ್ಞಕ್ಕೆ ಈಗ ಮೈಸೂರು, ಮುಂಬಯಿ, ಆಂಧ್ರ, ಮದ್ರಾಸ್ ಸರಕಾರಗಳ ನೆರವು ದೊರಕತೊಡಗಿದೆ. ಸಾವಿರಾರು ಹಳ್ಳಿಗಳು ಅವರ ಧರ್ಮಾರ್ಥ ನೇತ್ರ ಶಿಬಿರಗಳ ಅಳವಿನಲ್ಲಿ ಬಂದಿವೆ. ಅವರಿಗೆ ಮೈಸೂರು ಸರಕಾರ ಒಂದು ವ್ಯಾನ್ ಕೊಟ್ಟಿದೆ; ಒಬ್ಬ ಡ್ರೈವರ್, ಸ್ವಯಂಸೇವಕ ದಾದಿಗಳು ಮತ್ತು ಸಹಾಯಕರು,ಇದ್ದಾರೆ. ಅವರಿಂದ ಕಣ್ಣು ಪಡೆದ ಅನೇಕರು ಇಂದು ಅವರ ಶಿಬಿರಗಳಲ್ಲಿ ಸ್ವಯಂಸೇವಕ

ರಾಗಿ ದೃಷ್ಟಿಋಣವನ್ನು ತೀರಿಸಿಕೊಳ್ಳುತ್ತಿದ್ದಾರೆ. ಬೆಂಗಳೂರು ಕಾರ್ಪೊರೇಶನ್ ಕೊಟ್ಟ ಕಾರಿನಲ್ಲಿ ಮೋದಿಯವರೀಗ ಓಡಾಡುತ್ತಾರೆ.

ಇಂದು ಅವರಿಗೆ ರಾಷ್ಟ್ರೀಯ ಗೌರವವೂ ಬಂದಿದೆ. ೧೯೫೬ ಜನವರಿ ೨೬ರಂದು ರಾಷ್ಟ್ರಪತಿ ರಾಜೇಂದ್ರಪ್ರಸಾದರು ಅವರಿಗೆ "ಪದ್ಮಶ್ರೀ" ಬಹುಮಾನವನ್ನು ದಯಪಾಲಿಸಿದರು. ಇದು ಅವರ ಸುದೀರ್ಘ ಸೇವೆಗೆ ರಾಷ್ಟ್ರವಿತ್ತ ಮನ್ನಣೆ.

ನೋಬಲ್ ಪಾರಿತೋಷಕ ಪಡೆದ ಭೌತ ವಿಜ್ಞಾನಿ ಡಾ. ಸಿ. ವಿ ರಾಮನ್ನರು ಬೆಂಗಳೂರಲ್ಲಿ ೧೯೫೫ರಲ್ಲಿ ಮೋದಿಯವರ ನೇತ್ರ ಶಿಬಿರವನ್ನು ಉದ್ಘಾಟಿಸುತ್ತ "ನನ್ನ ಭಾರತರತ್ನ ಪದವಿಯನ್ನು ಡಾ. ಮೋದಿಯವರಿಗೆ ವರ್ಗಾಯಿಸಲು ಸಾಧ್ಯವಿದ್ದಿದ್ದರೆ ವರ್ಗಾಯಿಸಿ ಬಿಡುತ್ತಿದ್ದೆ. ಇದಕ್ಕೆ ಅವರು ನನಗಿಂತ ಯೋಗ್ಯ ಪಾತ್ರರು" ಎಂದರು. ಮರುವರ್ಷವೇ ಮೋದಿಯವರಿಗೆ ಪದ್ಮಶ್ರೀ ಬಂದದ್ದು.

ಅಮೇರಿಕದ ಪ್ರಸಿದ್ಧ ಅಂಧಮಹಿಳೆ ಹೆಲನ್ ಕೆಲ್ಲರ್ ಮೋದಿಯವರ ಕಾರ್ಯವನ್ನು ನೋಡಿ "ಅಂಧಕಾರವನ್ನು ಚುಚ್ಚುವ ಬೆಳಕು" ಎಂದು ಮೋದಿಯವರನ್ನು ಬಣ್ಣಿಸಿದ್ದಾರೆ. ಆಲ್ಬರ್ಟ್ ಶ್ವೈಟ್ಸರರಂತೆ ಮೋದಿಯವರಿಗೆ ಒಂದು ದಿನ ನೋಬಲ್ ಬಹುಮಾನ ಬಂದರೆ ಅದು ಸುಪಾತ್ರವನ್ನೇ ಹುಡುಕಿಕೊಂಡು ಬಂದಂತಾದೀತು.

ತಮಗೆ ವೈದ್ಯಕೀಯ ವೃತ್ತಿಯ ಬಾಗಿಲು ತೆರೆದ ಆಯುರ್ವೇದವನ್ನು ಡಾ. ಮೋದಿ ಮರೆತಿಲ್ಲ. ಬೆಳಗಾವಿಯಲ್ಲಿರುವ ಆಯುರ್ವೇದ ವಿದ್ಯಾಪೀಠ ಅವರ ಸಾಹಸದ ಫಲ. ನೇತ್ರಚಿಕಿತ್ಸೆಯ ವಿಚಾರದಲ್ಲಿಯೂ ಅವರು ಯೋಜನೆಯೊಂದನ್ನಿಟ್ಟುಕೊಂಡಿದ್ದಾರೆ. ದಾವಣಗೆರೆಯಲ್ಲಿ ಒಂದು ಧರ್ಮಾರ್ಥ ಕಣ್ಣಿನ ಆಸ್ಪತ್ರೆ ತೆರೆಯುವ ಅವರ ವಿಚಾರ ಮೂರ್ತರೂಪಕ್ಕೆ ಬರುತ್ತಿದೆ. ಅದಕ್ಕಾಗಿ ಅವರು ಸ್ಥಳವನ್ನು ಆಗಲೇ ನೋಡಿಟ್ಟಿದ್ದಾರೆ

ಗಾಂಧೀಜಿಯ ಪ್ರಭಾವ ಭಾರತದಲ್ಲಿ ಮಾಸಿ ಹೋಗಿದೆಯೆಂದು ಭಾವಿಸುವವರು ಡಾ. ಮೋದಿಯವರ ಕಾರ್ಯವನ್ನು ನೋಡಬೇಕು—ಎಂದು ಅಮೇರಿಕದ ಒಬ್ಬ ಪತ್ರಿಕೋದ್ಯೋಗಿ "ಕೊರೊನೆಟ್" ಪತ್ರಿಕೆಯಲ್ಲಿ ಬರೆದಿದ್ದಾನೆ. ವಿನೋಬಾರಲ್ಲಿ ಗಾಂಧೀಜಿಯ ದರಿದ್ರಸೇವಾಭಾವ ಆವೇಶಗೊಂಡಿದ್ದರೆ ಮೋದಿಯವರಲ್ಲಿ ಅವರ ರುಗ್ಣ ಸೇವಾಕಾಂಕ್ಷೆಯ ಆತ್ಮಜ್ಯೋತಿಯ ಅಂಶ ಬೆಳಗುತ್ತಿದೆ. ಗಾಂಧೀಜಿಯಂತೆ ಮೋದಿಯವರ ಸೇವಾಧರ್ಮವೂ ಪ್ರಾಂತೀಯತೆಯನ್ನು ಮೀರಿ ನಿಂತಿದೆ. ಅವರ ನೇತ್ರಯಜ್ಞ ಪ್ರಾರಂಭವಾದುದು ಗುಜರಾಥದಲ್ಲಿ; ಬೆಳೆದುದು ಕರ್ನಾಟಕದಲ್ಲಿ; ತಮಿಳುನಾಡು ಆಂಧ್ರಗಳನ್ನೂ ಅದು ಮರೆತಿಲ್ಲ; ಅವರ ತೀರ ಈಚೆಗಿನ ನೇತ್ರಯಜ್ಞ ನಡೆದುದು ಆಂಧ್ರದ ತಿರುಪತಿಯಲ್ಲಿ.



## ಪೋಲೀಸರಿದ್ದಾರೆಯೆ ?

"ಏನ್ರೀ ಸ್ವಾಮಿ, ಇಲ್ಲಿ ಹತ್ತರ ಎಲ್ಲಿಯಾದರೂ ಪೋಲೀಸರನ್ನು ಕಂಡಿದ್ದೀರಾ ? ಗೊತ್ತಿದ್ದರೆ ಹೇಳಿರಿ."

"ಎಲ್ಲೀ ಪೋಲೀಸರು ಸ್ವಾಮಿ. ಪೋಲೀಸರ ನೆರಳುಕೂಡ ಕಂಡಿಲ್ಲ. ಇಷ್ಟು ಆರಾಮುಖೋರರಾಗಿ ಹೋಗಿದ್ದಾರೆ ಈ ಪೋಲೀಸರು—"

"ಒಳ್ಳೇದು ಹಾಗಾದರೆ. ತಡಮಾಡಬೇಡಿರಿ. ನಿಮ್ಮ ಕೈಗಡಿಯಾರ ಮತ್ತು ಹಣದ ಪಾಕೀಟು ಇತ್ತಲಾಗಿ ಕೊಡಿರಿ. ಇಲ್ಲದಿದ್ದರೆ—"

# ಆ ಮಹಾ ಸ್ಫೋಟ

೧೯೪೪ ರಲ್ಲಿ ಮುಂಬಯಿ ಧಕ್ಕೆಯಲ್ಲಾದ ಭಯಂಕರ ನೌಕಾಸ್ಫೋಟದ ಒಳಗುಟ್ಟು ಈಗ ಬಯಲಿಗೆ ಬಂದಿದೆ !



ಮುಂಬಯಿ ನಗರದ ಮೇಲೆ ಗ್ರೀಷ್ಮ ಋತುವಿನ ಗಾಳಿ ಮಂದವಾಗಿ ಬೀಸುತ್ತಲಿತ್ತು. ಮುಂಬಯಿ ಬಂದರಕ್ಕೆ ಒಂದು ಮೈಲು ದೂರದಲ್ಲಿ ತನ್ನ ಗುಡಿಸಲಿನಲ್ಲಿ ಪ್ರೌಢ ಹಿಂದುವೊಬ್ಬ ಕುಳಿತುಕೊಂಡಿದ್ದ.

ಆಗ ತೀರ ಬಿಸಿಯಾದ ಗಾಳಿಯ ತೆರೆಯೊಂದು ಬಂದು ಅವನ ಮುಖಕ್ಕೆ ಬಡಿಯಿತು. ಅದರ ಹಿಂದೆಯೆ ಕಣ್ಣು ಕುಕ್ಕಿಸುವಂಥ ಬೆಳಕು ಅವನ ಗುಡಿಸಲಿನ ಮೂಲೆ ಮೂಲೆಯನ್ನೂ ಬೆಳಗಿತು. ಕಿವಿಗಡಚಿಕ್ಕಿಸುವಂಥ ಸ್ಫೋಟದ ಶಬ್ದ ಭೂಮಿಯನ್ನು ನಡುಗಿಸಿತು. ಸುಮಾರು ಒಂದು ನಿಮಿಷದ ನಂತರ ೨೮ ಪೌಂಡು ತೂಕದ ಬಂಗಾರದ ಗಟ್ಟಿಯೊಂದು ಆ ಗುಡಿಸಲಿನ ತಗಡಿನ ಚಪ್ಪರವನ್ನು ತೂರಿಕೊಂಡು ಬಂದು ಅವನ ಕಾಲ ಬುಡದಲ್ಲಿ ಬಿತ್ತು.

ಇದೆಲ್ಲ ಸಂಭವಿಸಿದ್ದು ೧೯೪೪, ಎಪ್ರಿಲ್ ೧೪ ನೆಯ ದಿನಾಂಕ ಸಂಜೆ ನಾಲ್ಕು ಗಂಟೆಯ ಸುಮಾರಿಗೆ. ದ್ವಿತೀಯ ಮಹಾಯುದ್ಧದ ಭೀಕರ ಅನಾಹುತಗಳಲ್ಲಿ ಈ ಘಟನೆಯೂ ಒಂದಾಗಿದೆ. ಈ ಭೀಕರ ಸ್ಫೋಟದ ಹರಕ ಮುರುಕು ಕಥೆಯಷ್ಟೇ ಜನರಿಗೆ ಗೊತ್ತಿದೆ. ಯುದ್ಧಕಾಲದ ಸುದ್ದಿ ನಿಯಂತ್ರಣವು

ಈ ದುರಂತದ ಕಥೆಯನ್ನು ಸಾರ್ವಜನಿಕರಿಂದಲೂ ಶತ್ರುಗಳಿಂದಲೂ ಮರೆಮಾಚಿಬಿಟ್ಟಿತು.

ಆದರೆ ಈ ಭಯಂಕರ ಸ್ಫೋಟದ ವಿವರಗಳು ಅಮೇರಿಕನ್ ಪ್ರಕಟನೆಗಳಿಂದ ಈಗ ಬೆಳಕಿಗೆ ಬಂದಿದೆ.

೭೦೦೦ ಟನ್ ತೂಗುವ ಎಸ್. ಎಸ್. ಫೋರ್ಟ ಸ್ಟಿಕೇನ್ ಎಂಬ ಹಡಗ ಅಂದು ಮುಂಬಯಿಯ ಹಡಗಗಳಿಂದ ತುಂಬಿ ಹೋಗಿದ್ದ ಬಂದರದಲ್ಲಿ ತಂಗಿತ್ತು. ಹಡಗವನ್ನು ಕಟ್ಟಿ ಇನ್ನೂ ಒಂದು ವರ್ಷ ಮಾತ್ರ ಆಗಿತ್ತು. ಈ ಹಡಗದಲ್ಲಿ ಒಣಮೀನು, ೩೦೦೦ ಟನ್ ಅರಳಿ, ಸುಮಾರು ೨೦ ಲಕ್ಷ ಪೌಂಡು ಬೆಲೆಯ ಬಂಗಾರದ ೧೫೫ ಗಟ್ಟಿಗಳು ಮತ್ತು ೧೭೦೦ ಟನ್ ಮದ್ದು ಗುಂಡು ಹಾಗೂ ಪ್ರಬಲ ಸ್ಫೋಟಕ ದ್ರವ್ಯಗಳು ಇದ್ದವು. ಬಂದರ ನಿಯಮದಂತೆ ಮದ್ದು ಗುಂಡುಗಳನ್ನು ಮೊಟ್ಟಮೊದಲು ಇಳಿಸಬೇಕಾಗಿತ್ತು. ಆದರೆ ಹಡಗದಲ್ಲಿ ತುಂಬಿಟ್ಟರೆ ಕೆಡುವ ವಸ್ತು ಮೀನವಾಗಿದ್ದರಿಂದ ಮೀನಗಳನ್ನೆ ಮೊದಲಿಗೆ ಇಳಿಸುವ ಕಾರ್ಯ ಕೈಕೊಳ್ಳಲ್ಪಟ್ಟಿತು.

ಹಡಗದಲ್ಲಿ ಒಂದು ಅರಳೆಯ ಗಂಟಿಗೆ ಆತು ಕೊಂಡು ನಿಂತಿದ್ದ ಹಿಂದು ಕೆಲಸಗಾರನೊಬ್ಬ ಸಂಭವಿಸಲಿದ್ದ ಭೀಕರ ಅನಾಹುತದ ಚಿಹ್ನವನ್ನು ಮೊದಲಿಗೆ ಕಂಡ. ಅರಳಿಯ ಗಂಟುಗಳ ರಾಶಿಯೊಂದರ ನಡುವೆ ಹೊಗೆ ಸಾವಕಾಶವಾಗಿ ಮೇಲಕ್ಕೇರುತ್ತಲಿತ್ತು. ಆ ಕೆಲಸಗಾರ ಸುದ್ದಿ ತಿಳಿಸಲು ಹಡಗದ ಮೇಲ್ಭಾಗಕ್ಕೆ ಧಾವಿಸಿದ.

ಮಧ್ಯಾಹ್ನ ೨ಗಂಟೆ ೧೮ ನಿಮಿಷಗಳಾದಾಗ ಫೋರ್ಟ ಸ್ಟಿಕೇನ್ ಹಡಗ ಅನೇಕ ಸಲ ಚಿಕ್ಕ ಕರ್ಕಶ ಸೀಟಿಗಳನ್ನು ಊದಿತು. ಅದನ್ನು ಕೇಳಿ ಬಂದರದಲ್ಲಿದ್ದ ಎಲ್ಲ ಹಡಗುಗಳೂ ಅದೇ ಬಗೆಯಲ್ಲಿ ಸೀಟಿಗಳನ್ನೂದಿದವು. ಹಡಗುಗಳನ್ನು ರಾಷ್ಟ್ರಾಧಿಪತಿಗಳು ಸಂದರ್ಶಿಸಿದಾಗ ಅಥವಾ ಹೊಸ ಹಡಗಗಳು ನೀರಿಗಿಳಿಸಲ್ಪಡುವಾಗ ಈ ಬಗೆಯ ಸೀಟಿಗಳಾಗುವ ಕ್ರಮವಿದ್ದರೂ ಪ್ರತಿಯೊಬ್ಬನ ಹೃದಯದಲ್ಲಿ ಆನಂದದ ಬದಲು ಭಯವುಂಟಾಯಿತು. ಫೋರ್ಟ ಸ್ಟಿಕೇನ್‌ದ ಮೇಲೆ ಹಾರಾಡುತ್ತಿದ್ದ ಕೆಂಪುಧ್ವಜ, ಸತ್ಯಕಥೆಯನ್ನು ಹೇಳುತ್ತಿತ್ತು—ಮದ್ದುಗುಂಡುಗಳ ಹಡಗಿಗೆ ಬೆಂಕಿಹತ್ತಿದೆ!

ನಗರದ ಎರಡು ಅಗ್ನಿ ಶಾಮಕ ಮೋಟಾರುಗಳು ಬಂದರಕ್ಕೆ ಧಾವಿಸಿದವು. ಹಡಗಿನ ಸಾಮಾನು ಕುಳಿಯಲ್ಲಿ ನೀರು ಸುರಿಸಲ್ಪಟ್ಟಿತು. ಆದರೆ ಬೆಂಕಿ ಮಣಿಯದೆ ಹಬ್ಬತೊಡಗಿತು.

ಅಗ್ನಿಶಾಮಕ ದಳಗಳ ಮೇಲೆ ಅಧಿಕಾರವಿದ್ದ ಬಂದರದ ಸುಪರಿಂಟೆಂಡೆಂಟ್ ಕರ್ನಲ್ ಜೆ. ಆರ್. ಸಾಡ್ಲರರು ಒಂದು ಮಹಾ ಸಮಸ್ಯೆಯನ್ನೆದುರಿಸಬೇಕಾಗಿತ್ತು.

ಹಡಗದಲ್ಲಿ ಅರಳಿಗಂಟುಗಳ ಕೆಳಗೆ ೧೭೦೦ ಟನ್ ಮದ್ದುಗುಂಡು ಸ್ಫೋಟಕ ದ್ರವ್ಯಗಳಿರುವದು ಸಾಡ್ಲರರಿಗೆ ಗೊತ್ತಿತ್ತು. ಈಗ ಬಂದರಕ್ಕೆ ಧಾವಿಸಿ ಬರುತ್ತಿದ್ದ ನಗರದ ಅಗ್ನಿಶಾಮಕ ದಳಗಳೆಲ್ಲ ಹಡಗಿಗೆ ಹತ್ತಿದ್ದ ಬೆಂಕಿಯನ್ನಾರಿಸಲು ಸಮರ್ಥವಾದಾವೇ? ಹಾಗಿದ್ದರೆ ಹಡಗನ್ನು ಬಂದರದಲ್ಲಿ ನಿಲ್ಲಿಸಿಕೊಳ್ಳಬಹುದಾಗಿತ್ತು.

ಅಥವಾ ಅವರು ಫೋರ್ಟ ಸ್ಟಿಕೇನ್ ಹಡಗದ ಕಪ್ತಾನನಿಗೆ ಹಡಗವನ್ನು ಬಂದರದ ಹೊರಗೆ ಸಮುದ್ರದೊಳಕ್ಕೆ ತೆಗೆದುಕೊಂಡು ಹೋಗಿ ಅಲ್ಲಿ ಆಳವಾದ ನೀರಿನಲ್ಲಿ ಬಂಗಾರದ ಪರಿವೆಯಿಲ್ಲದೆ ಹಡಗವನ್ನು ಮುಳುಗಿಸಲು ಆಜ್ಞಾಪಿಸಬೇಕೇ?

ಆದರೆ ಹಡಗನ್ನು ನಡು ಸಮುದ್ರಕ್ಕೆ ಸಾಗಿಸುವದಾದರೆ ಧಕ್ಕೆಯ ಮೇಲೆ ಸಾಲುಗಟ್ಟಿ ನಿಂತಿದ್ದ ಅಗ್ನಿಶಾಮಕ ಯಂತ್ರಗಳಿಂದ ಅದನ್ನು ದೂರ ಸಾಗಿಸಿದಂತಾಗುವದು. ಆಗ ಹಡಗದಲ್ಲಿರುವಷ್ಟು ಅಗ್ನಿಶಾಮಕ ಸಾಧನಗಳು ಮಾತ್ರವೇ ಉಪಯೋಗಕ್ಕೆ ಬೀಳುವವು. ಹಡಗ ಸಾಗುತ್ತಿರುವಾಗ ನಡುವೆಯೇ ಸ್ಫೋಟ ಸಂಭವಿಸಿದರೆ?

ಕರ್ನಲ್ ಸಾಡ್ಲರ್ ತಮ್ಮ ನಿರ್ಣಯ ಮಾಡಿದರು. ಎಸ್. ಎಸ್. ಫೋರ್ಟ ಸ್ಟಿಕೆನ್ ಈಗ ಇರುವಲ್ಲಿಯೇ ಇರಬೇಕು ಎಂದು.

ಅಗ್ನಿಶಾಮಕ ದಳಗಳು ಹಡಗದಲ್ಲಿ ನೀರು ಸುರಿದೇ ಸುರಿದವು. ನೀರಿನ ಭಾರದಿಂದ ಹಡಗು ಒಂದು ಕಡೆ ವಾಲಿತು. ಆದರೆ ಹೊಗೆ ದಟ್ಟವಾಗುತ್ತ ಹೋಯಿತೇ ವಿನಾ ಕಡಿಮೆಯಾಗಲಿಲ್ಲ.

ಉರಿಯುತ್ತಲಿದ್ದ ಹಡಗದ ಒಡಲು ಕಾವಿನಿಂದ ಕೆಂಪಾಯಿತು.

ಕೆಲ ನಿಮಿಷಗಳಲ್ಲಿಯೇ ಕರ್ಣಕಠೋರ ಸಪ್ಪಳದೊಂದಿಗೆ ಹಡಗು ಸಹಸ್ರಾರು ಚೂರುಗಳಾಗಿ ಸಿಡಿಯಿತು. ಹಡಗದ ಬಾಯ್ಲರ್ ಒಂದೇ ಇಡಿಯಾಗಿ ಉಳಿದಿತ್ತು. ಅದು ಬಂದರದಿಂದ ಅರ್ಧ ಮೈಲು ದೂರದಲ್ಲಿ ಒಂದು ರಸ್ತೆಯ ಟ್ರಾಮ್‌ಗಾಡಿಯ ಹಳಿಗಳ ಮೇಲೆ ಹೋಗಿ ಬಿತ್ತು.

ಫೋರ್ಟಸ್ಟಿಕೇನ್‌ದ ಉಳಿದ ಭಾಗ ಸಣ್ಣ ಸಣ್ಣ ಉಕ್ಕಿನ ತುಣುಕುಗಳಾಗಿ ಬಂದರದ ಹಾಗೂ ನಗರದ ಮೇಲೆ ಸಿಡಿದು ಬಿದ್ದವು. ಬೆಂಕಿ ನಂದಿಸಲು ಬಂದಿದ್ದ ೧೮ ಅಗ್ನಿಶಾಮಕ ಮೋಟಾರುಗಳೂ ಅವುಗಳ ಕೆಲಸಗಾರರೂ ಮಾಯವಾದರು. ಕಾಲು ಮೈಲು ಅಂತರದೊಳಗಿನ ಪ್ರತಿಯೊಂದು ಕಟ್ಟಡವೂ ಪುಡಿಯಾಯಿತು. ಐವತ್ತು ವಖಾರಗಳು ನೆಲಸಮವಾದವು.

ಬಂದರದಲ್ಲಾದ ಅನಾಹುತ ಮತ್ತು ಹಾನಿ ವರ್ಣನಾತೀತವಾಗಿತ್ತು. ಭರತದ ನೀರು ಧಕ್ಕೆಯಲ್ಲಿ ತೂರಿ ಬಂದು ಹಡಗಗಳು ದಂಡೆಗೆ ಅಪ್ಪಳಿಸುವಂತೆ ಮಾಡಿತು. ಒಟ್ಟು ೫೦,೦೦೦ ಟನ್ ತೂಗುವ ಹನ್ನೊಂದು ಹಡಗುಗಳು ಸಂಪೂರ್ಣ ನಿಷ್ಪ್ರಯೋಜಕವಾಗುವ ಮಟ್ಟಿಗೆ ಧ್ವಂಸವಾದವು. ೫,೦೦೦ ಟನ್ನಿನ ಒಂದು ಹಡಗವಂತೂ ಅನಾಮತ್ತಾಗಿ ನೀರಿನಿಂದ ಮೇಲಕ್ಕೆದ್ದು ದೂರ ಹೋಗಿ ಬಿತ್ತು. ಅದರ ನಡುವೇ ಮುರಿದು ಹೋಯಿತು. ಇನ್ನೂ ಒಂಭತ್ತು ಹಡಗಗಳಿಗೆ ವಿಶೇಷ ಪೆಟ್ಟು ಬಿದ್ದಿತು.

ಸ್ಫೋಟವೇ ೯೦೦ ಜನರನ್ನು ಆಹುತಿ ತೆಗೆದುಕೊಂಡಿತು. ಇವರಲ್ಲಿ ನೂರಾರು ಧಕ್ಕೆ ಕೆಲಸಗಾರರಾಗಿದ್ದರು. ಅವರೆಲ್ಲ ಓಡಿಹೋಗಲು ಯತ್ನಿಸಿದಾಗ ನಿಷ್ಠುರ ಕರ್ತವ್ಯವಾದಿಯಾದ ಒಬ್ಬ ಪೋಲೀಸನು ಅವರೆಲ್ಲರೂ ಪಾಸು ತೋರಿಸಿಯೇ ಹೋಗಬೇಕೆಂದು ಹಟ ತೊಟ್ಟಿದ್ದರಿಂದ ಪಾರಾಗಲಾರದೆ ಹೋದರು. ನೂರಾರು ಸೈನಿಕರು, ನಾವಿಕರು, ನಾಗರಿಕರು ನಾಪತ್ತೆಯಾದರು. ೩,೦೦೦ ಜನ ಗಾಯಗೊಂಡರು

ಆದರೆ ಮುಂಬಯಿಯ ಅಗ್ನಿಪರೀಕ್ಷೆ ಇನೂ ಪ್ರಾರಂಭವಾಗಿತ್ತು ಮಾತ್ರ. ಸ್ಫೋಟದ ಬೆಂಕಿ ನೂರಾರು ಮನೆಗಳಿಗೆ ಕಿಡಿ ಹೊತ್ತಿಸಿತು. ಬೇಗನೆ ಅವೆಲ್ಲ ಕೂಡಿಕೊಂಡು ಒಂದು ದೊಡ್ಡ ಉರಿಯೇ ಎದ್ದಿತು. ಉತ್ತರ ದಿಕ್ಕಿಗೆ ಬೆಂಕಿ ಹಬ್ಬತೊಡಗಿತು. ಮರುದಿನ ಮುಂಬಯಿಯ ದೊಡ್ಡ ಭಾಗವೇ ಉರಿದು ಹೋಗುವ ಅಂಜಿಕೆಯುಂಟಾಯಿತು. ಅಗ್ನಿಶಾಮಕ ದಲಗಳು ನಿರ್ನಾಮವಾದ್ದರಿಂದ ನಗರವನ್ನುಳಿಸಲು ಒಂದೇ ಒಂದು ಮಾರ್ಗ ಮಾತ್ರ ಉಳಿದಿತ್ತು. ಉರಿಯುವ ಮನೆಗಳಿಗೂ ಇನ್ನೂ ಸುರಕ್ಷಿತವಾಗಿದ್ದ ಮನೆಗಳಿಗೂ ನಡುವೆ ಬೆಂಕಿ ಹಾಯ್ದು ಬರಲಾರದಷ್ಟು ಅಗಲವಾದ ಖಾಲಿ ಪ್ರದೇಶವನ್ನು ಉಂಟುಮಾಡಬೇಕಾಗಿತ್ತು.

ಇದಕ್ಕಾಗಿ ಆರಿಸಿದ ಸ್ಥಳವನ್ನು ಸೈನಿಕರು ಆಕ್ರಮಿಸಿದರು. ಅಲ್ಲಿ ಇದ್ದವರಿಗೆ ಮನೆಬಿಟ್ಟು ಹೊರಡಲು ಆಜ್ಞೆಯಾಯಿತು. ಒಂದು ಇಡಿ ರಾತ್ರಿ ಮತ್ತು ಒಂದು ಇಡಿ ಹಗಲು ಸೈನಿಕರು ಸಿಡಿಮದ್ದಿನಿಂದ ಕಟ್ಟಡಗಳನ್ನು ಹಾರಿಸಿ ನೆಲಸಮ ಮಾಡಿದರು. ಬೆಂಕಿಗೆ ಈ ಜಾಗೆಯನ್ನಾಕ್ರಮಿಸಿ ಮುಂದೆ ಬರುವದಸಾಧ್ಯವಾಯಿತು. ತನ್ನ ಅಳವಿಗೆ ಬಂದದ್ದನ್ನು ಭಸ್ಮ ಮಾಡಿದ ಭೀಕರ ಜ್ವಾಲೆಯ ಕೊನೆಯ ಕಿಡಿಗಳನ್ನು ಆರಿಸಬೇಕಾದರೆ ೧೫ ದಿನ ಹಿಡಿಯಿತು. ಅಮೇರಿಕನ್ ತಜ್ಞರು ಈ ಅನಾಹುತದಿಂದ ನೂರುಕೋಟಿ ರೂಪಾಯಿಗಳಷ್ಟು ಹಾನಿಯಾಯಿತು ಎಂದು ಲೆಕ್ಕ ಹಾಕಿದ್ದಾರೆ.

ಹಡಗದಲ್ಲಿದ್ದ ಬಂಗಾರದಲ್ಲಿ ಎಷ್ಟು ಕೈಗೆ ಹತ್ತಿತು ಎಂಬುದು ಬಹಿರಂಗವಾಗಿಲ್ಲ. ಫೋರ್ಟ ಸ್ಟಿಕೇನ್ ಹಡಗವನ್ನು ಸಮುದ್ರಕ್ಕೆ ಕಳಿಸಿದ್ದರೆ ಕರ್ನಲ್ ಸಾಡ್ಲರರು ನಗರವನ್ನುಳಿಸಬಹುದಾಗಿತ್ತೋ ಏನೋ ! ಯಾರೂ ಧೈರ್ಯದಿಂದ ಹೇಳಲು ಸಾಧ್ಯವಿಲ್ಲ.

ಮುಂದೆ ನಡೆದ ಅಧಿಕೃತ ವಿಚಾರಣೆಯಲ್ಲಿ ಕರ್ನಲ್ ಸ್ಲಾಡರರು ಹಡಗವನ್ನು ಸಮುದ್ರಕ್ಕೆ ಸಾಗಿಸಬೇಕಿತ್ತು ಎಂದು ಹೇಳಲಾಯಿತು.

# ಜಿರಾಫೆ

ನಿಸರ್ಗದ
ಜೀವಂತ
ಗಗನಚುಂಬಿ



ಜಿರಾಫೆಯಂಥ ಪ್ರಾಣಿ ಲೋಕದಲ್ಲಿ ಜಿರಾಫೆಯೆ. ಅದನ್ನು ಸ್ವಲ್ಪವಾದರೂ ಹೋಲುವ ಮೃಗ ಬೇರೊಂದಿಲ್ಲ. ಬ್ರಹ್ಮ ಅದನ್ನು ಸೃಷ್ಟಿಸುವಾಗ ತೂಕಡಿಸುತ್ತಿರಬೇಕು. ಇಲ್ಲದಿದ್ದರೆ ಇಷ್ಟು ವಿಲಕ್ಷಣ ಪ್ರಾಣಿ ಸೃಷ್ಟಿಯಾಗುತ್ತಿರಲಿಲ್ಲ. ಅದಕ್ಕೆ ಅದನ್ನು "ನಿಸರ್ಗದ ಭವ್ಯ ಪ್ರಮಾದ" ಎಂದು ಕರೆಯುತ್ತಾರೆ.

ಜಿರಾಫೆ ಆಫ್ರಿಕದ ಅರಣ್ಯನಿವಾಸಿ. ಅದು ಜಗತ್ತಿನಲ್ಲೆಲ್ಲ ಅತಿ ಎತ್ತರವಾದ ಪ್ರಾಣಿ, ಪ್ರೌಢಾವಸ್ಥೆಗೆ ಬಂದ ಜಿರಾಫೆ ೧೯ ಅಡಿ ಎತ್ತರವಾಗಿರುತ್ತದೆ. ಕೆಲ ಗಂಡು ಜಿರಾಫೆಗಳು ಅದಕ್ಕಿಂತಲೂ ಎತ್ತರವಾಗಿರುವುದುಂಟು. ಅದು ಪ್ರಪಂಚದ ನಾಲ್ಕು ಅತಿ ದೊಡ್ಡ ಪ್ರಾಣಿಗಳಲ್ಲೊಂದು. ಗಂಡ

ಜಿರಾಫೆ ಒಂದೂವರೆ-ಎರಡು ಟನ್ ಭಾರವಾಗಿರಬಹುದು. ಹೆಣ್ಣು ಗಂಡಿಗಿಂತ ಎರಡು ಮೂರು ಫೂಟು ಚಿಕ್ಕದು. ಅದರ ತೂಕ ಅರ್ಧ ಟನ್ನಿನಷ್ಟು.

ಜಿರಾಫೆಯ ಎತ್ತರದಲ್ಲಿ ದೊಡ್ಡ ಭಾಗ ಅದರ ಕೊರಳೇ. ದೇಹದಿಂದ ಏಳಡಿಗಳಷ್ಟೆತ್ತರಕ್ಕೆ ನೀಡಿದೆ ಅದರ ಕತ್ತು. ಇಷ್ಟುದ್ದ ಕತ್ತಿನಲ್ಲಿ ಇರುವುದು ಏಳೇ ಕಶೇರುಕ ಎಲುಬುಗಳು—ಅಂದರೆ ಮನುಷ್ಯನಿಗಿರುವಷ್ಟೇ. ಕತ್ತಿನ ತುದಿಗಿರುವ ತಲೆಯ ಮೇಲೆ ಎರಡು ಮೊಂಡು ಕೋಡುಗಳು. ಕೆಲವೊಮ್ಮೆ ಹಣೆಯ ನಡುವೆ ಮೂರನೇ ಕೋಡೊಂದು ಮೂಡುವುದುಂಟು. ಅಥವಾ ಮುಖ್ಯ ಕೋಡುಗಳ ಹಿಂದೆ ಮತ್ತೊಂದು ಜತೆ ಚಿಕ್ಕ ಕೋಡುಗಳು ಮೂಡಿ ಒಟ್ಟು ಐದು ಕೋಡುಗಳೂ ಇರಬಹುದು!

ಇಷ್ಟುದ್ದ ಕುತ್ತಿಗೆಯಿದ್ದೂ ನೀರು ಕುಡಿಯಬೇಕಾದರೆ ಈ ಪ್ರಾಣಿಗಾಗುವ ಕಷ್ಟ ಅಷ್ಟಿಷ್ಟಲ್ಲ. ಸರಿಯಾಗಿ ನಿಂತರೆ ಅದರ ಬಾಯಿ ನೀರಿಗೆ ಎಟಕುವುದಿಲ್ಲ. ಇದಕ್ಕಾಗಿ ಅದು ನೀರು ಕುಡಿಯಬೇಕಾದರೆ ಅನೇಕ ಚಿಕ್ಕಚಿಕ್ಕ ನೆಗೆತಗಳಿಂದ ಮುಂಗಾಲುಗಳನ್ನು ಅಗಲಿಸಿಟ್ಟುಕೊಂಡು, ಬಲು ಶ್ರಮದಿಂದ ಬಗ್ಗಿ ನೀರು ಕುಡಿಯಬೇಕಾಗುತ್ತದೆ. ನೀರಡಿಕೆ ತಣಿದ ಮೇಲೆ ದಬಕ್ಕನೆ ಮೇಲೆ ಜಿಗಿದು ಅದು ಮುಂಗಾಲುಗಳನ್ನು ಹತ್ತಿರ ತಂದು ನೆಲಕ್ಕಪ್ಪಳಿಸುತ್ತದೆ—ಸೈನಿಕರು ಕವಾಯತ್ತಿನಲ್ಲಿ "ಹೋಶಿಯಾರ್" ಭಂಗಿಯಲ್ಲಿ ನಿಲ್ಲುವ ಹಾಗೆ.

ಸುದೈವದಿಂದ ಜಿರಾಫೆಗೆ ನೀರಡಿಕೆ ಕಡಿಮೆ. ನೀರು ಸಿಗುವಲ್ಲಿ ಅದು ವಾರಕ್ಕೆ ಎರಡು ಗ್ಯಾಲನ್ನಿನಷ್ಟು ಕುಡಿಯಬಹುದಾದರೂ ಒಣ ಪ್ರದೇಶಗಳಲ್ಲಿ ಅನೇಕ ವಾರಗಳ ವರೆಗೆ ನೀರಿಲ್ಲದೆ ಉಳಿಯಬಲ್ಲದು. ಈ ವಿಷಯದಲ್ಲಿ ಅದು ಒಂಟೆಗಿಂತಲೂ ಗಟ್ಟಿ.

ಜಿರಾಫೆಗೆ ಬೇಕಾದ ಜಲಾಂಶ ಅದಕ್ಕೆ ಅದರ ಮುಖ್ಯ ಆಹಾರದಲ್ಲೇ ಸಿಗುತ್ತದೆ. ಆಫ್ರಿಕದ ಜಾಲಿಗಿಡಗಳಾದ ಅಕಾಶಿಯಾ ಮತ್ತು ಮಿಮೋಸಾದ ತೊಪ್ಪಲವೇ ಅದರ ಅನ್ನ. ಈ ಆಹಾರ ಜಿರಾಫೆಯ ಮೀಸಲು ನೈವೇದ್ಯ. ಅಷ್ಟೆತ್ತರ ನಿಲುಕಬಲ್ಲ ಬೇರಾವ ಪ್ರಾಣಿಯೂ ಇಲ್ಲವಾದ್ದರಿಂದ ಜಿರಾಫೆಗೆ ಇಲ್ಲಿ ಬೇರೆ ಪ್ರಾಣಿಗಳ ಸ್ಪರ್ಧೆಯಿಲ್ಲ. ಆ ಗಿಡಗಳ ಮುಳ್ಳು ಅದಕ್ಕೊಂದು ಲೆಕ್ಕವಲ್ಲ. ೧೮ ಅಂಗುಲ ಉದ್ದದ ತನ್ನ ನಾಲಗೆಯನ್ನು ಚಾಚಿ ತೊಪ್ಪಲನ್ನು ಹಿಡಿದು ಜಗ್ಗಿ, ದಪ್ಪನ್ನ ರೋಮಮಯ ತುಟಿಗಳಿಂದ ತಿಕ್ಕಿ ಮುಳ್ಳುಗಳನ್ನು ಮುರಿದು, ಅದು ಕವಳವನ್ನು ನುಂಗುತ್ತದೆ.

ಜಿರಾಫೆ ಮೆಲುಕು ಹಾಕುವ ಪ್ರಾಣಿ. ಅದರ ಬಾಯಲ್ಲಿ ಮೇಲು ಸಾಲಿನ ಎದುರು ಹಲ್ಲುಗಳಿಲ್ಲ. ಬೆಳಗಿನ ಹೊತ್ತಿಗೆ ಮೇವು ತಿಂದು ಮಧ್ಯಾಹ್ನದ ಬಿಸಿಲು ಹೊತ್ತಿಗೆ ನಿಂತಲ್ಲೇ ಅಲುಗದೆ ನಿಂತು ಜಾಲಿಯ ಅರಣ್ಯದಲ್ಲಿ ಅದು ವಿಶ್ರಾಂತಿ ತೆಗೆದುಕೊಳ್ಳುತ್ತದೆ.

ಜಿರಾಫೆಯ ಉದ್ದನ್ನ ಬಲಿಷ್ಠ ಕಾಲುಗಳ ತುದಿಗೆ ದನಗಳಂತೆ ಸೀಳುಗೊರಸುಗಳಿವೆ. ಆದರೆ ಜಿರಾಫೆ ಬಹು ಭಾರವಾಗಿರುವುದರಿಂದ ಕೆಸರಿನಲ್ಲಿ ಕಾಲಿಟ್ಟರೆ ಈ ಕವಲುಗೊರಸುಗಳು ದನಗಳಂತೆ ಅದಕ್ಕೆ ಉಪಯೋಗ ಬೀಳದೆ ಹೂತು ಹೋಗುತ್ತವೆ. ನಾಲ್ಕೂ ದಿಕ್ಕಿಗೆ ಜಿರಾಫೆಯ ನಾಲ್ಕು ಕಾಲುಗಳು ತೂರಬಲ್ಲವು. ಅದರ ಒದೆಕೆಗೆ ಅದರ ಏಕಮಾತ್ರ ಶತ್ರುವಾದ ಸಿಂಹವೂ ಎದುರಲ್ಲ. ಒಮ್ಮೆ ಒಂದು ಹೆಣ್ಣು ಸಿಂಹ ಜಿರಾಫೆಯನ್ನು ಹಿಡಿಯಹೋದಾಗ ಅದು ಬಲವಾಗಿ ಒದೆಯಿತು. ಆ ರಭಸಕ್ಕೆ ಸಿಂಹಿಣಿಯ ರುಂಡವೇ ಹಾರಿಹೋಯಿತೆಂದು ದಾಖಲೆಯಿದೆ.

ಜಿರಾಫೆ ತಾಸಿಗೆ ೩೨ ಮೈಲು ವೇಗದಿಂದ ಓಡಬಲ್ಲದಾದ್ದರಿಂದ ಸಿಂಹ ಅದನ್ನು ಬೆನ್ನಟ್ಟಿ ಹಿಡಿಯಲಾರದು.

ಒಂಟಿ ಸಿಂಹಗಳು ಜಿರಾಫೆಗಳ ಮೇಲೆ ಏರಿಹೋಗುವ ಧೈರ್ಯ ಮಾಡುವುದಿಲ್ಲ. ಎರಡು-ಮೂರು ಸಿಂಹಗಳು ಸೇರಿ ಅಡ್ಡಗಟ್ಟಿ ಅದನ್ನು ಹಿಡಿಯಬೇಕಷ್ಟೇ. ಆದರೆ ನೀರು ಕುಡಿಯಲು ಕಾಲು ಅಗಲಿಸಿ ನಿಂತಾಗ ಮಾತ್ರ ಸಿಂಹಕ್ಕೆ ಜಿರಾಫೆ ಸುಲಭ ಕೊಳ್ಳೆಯಾಗುತ್ತದೆ. ಯಾಕಂ-

ದರೆ ಆ ತೊಡಕಿನ ಭಂಗಿಯಿಂದ ಸರಿಯಾದ ನಿಲುವಿಕೆಗೆ ಬರಬೇಕಾದರೆ ಜಿರಾಫೆಗೆ ಬಹಳ ಹೊತ್ತು ಬೇಕಾಗುತ್ತದೆ.

ಜಿರಾಫೆಯ ಚರ್ಮ ಒಂದಿಂಚು ದಪ್ಪವಾಗಿರುತ್ತದೆ. ಅದಕ್ಕೆ ಸಾಮಾನ್ಯ ಗುಂಡು ಹೊಡೆದರೆ ಗುಂಡೇ ಚಪ್ಪಟೆಯಾಗಿ ಹೋಗುವುದು ಹೊರತು ಮೈಗೆ ನಾಟುವುದಿಲ್ಲ! ಆದರೆ ಈ ಚರ್ಮವು ಚಬುಕು, ಜೀನು ಮೊದಲಾದವುಗಳಿಗೆ ಅತಿ ಉಪಯುಕ್ತವಾದುದರಿಂದ ಆಫ್ರಿಕದಲ್ಲಿ ಮೊದಲು ನೆಲಸಿದ ಬಿಳಿಯರು ಅದನ್ನು ಸಿಕ್ಕಾಬಟ್ಟೆ ಕೊಲ್ಲುತ್ತಿದ್ದರು. ಅದರ ಮಾಂಸ ರುಚಿಕರವಾಗಿರುವುದೂ ಅದರ ದುರದೃಷ್ಟವೇ.

ಆಕಾಶದಲ್ಲಿ ತೂರಿರುವ ಜಿರಾಫೆಯ ತಲೆಯಲ್ಲಿರುವ ಸೂಕ್ಷ್ಮವಾದ ಕಣ್ಣುಗಳು ಬಹಳ ದೂರದಿಂದಲೇ ಶತ್ರುವಿನ ಬರವನ್ನು ಗುರುತಿಸಲು ಅನುಕೂಲವಾಗಿವೆ. ಆದರೆ ಈ ಎತ್ತರವೇ ಅದಕ್ಕೆ ಪ್ರಾಣಸಂಕಟವನ್ನೂ ತರುತ್ತದೆ. ನಿದ್ರಿಸುವುದು ಜಿರಾಫೆಗೆ ಒಂದು ಸಮಸ್ಯೆ. ಮಲಗುವುದೂ ಏಳುವುದೂ ಅದಕ್ಕೆ ಸುಲಭವಲ್ಲ. ಹೀಗಾಗಿ ಮಲಗಿರುವ ಜಿರಾಫೆಗಳು ಸಿಂಹಗಳಿಗೆ ಸುಲಭ ಗ್ರಾಸವಾಗುತ್ತವೆ. ಇದಕ್ಕಾಗಿ ಕೆಲ ಪ್ರದೇಶಗಳಲ್ಲಿ ಜಿರಾಫೆಗಳು ನಿಂತೇ ನಿದ್ರಿಸುತ್ತವೆ.

ಕೆನ್ಯಾದಲ್ಲಿ ಮೊದಲು ೬೦೦ ಮೈಲು ಟೆಲಿಗ್ರಾಫ್ ತಂತಿ ಹಾಕಿದಾಗ ಪ್ರಾರಂಭೋತ್ಸವ ಜರಗಿಸಿ ಒಂದು ತಾಸಿನಲ್ಲಿ ಟೆಲಿಗ್ರಾಫ್ ಸಂಪರ್ಕ ಕಟ್ಟಾಗಿ ಹೋಯಿತು. ಕಾರಣ ಶೋಧಿಸಿದಾಗ ರಭಸದಿಂದ ಓಡುತ್ತಿದ್ದ ಜಿರಾಫೆಯೊಂದು ತಂತಿಯ ಮೇಲೆ ಹಾಯ್ದು ಗಂಟಲು ಮುರಿದು ಕೊಂಡದ್ದು ಕಾಣಿಸಿತು. ಕಂಬಗಳನ್ನು ೩೦ ಅಡಿಯಷ್ಟು ಎತ್ತರಿಸಿ ತಂತಿ ಹಾಕಿದ ಮೇಲೆ ಈ ತೊಂದರೆ ತಪ್ಪಿತು.

ಜಿರಾಫೆ ಹಿಂಡಾಗಿ ಜೀವಿಸುವ ಪ್ರಾಣಿ. ಹಿಂಡಿನಲ್ಲಿ ಸಾಮಾನ್ಯವಾಗಿ ಇಪ್ಪತ್ತರ ವರೆಗೂ ಪ್ರಾಣಿಗಳಿರಬಹುದು. ಹಿಂದೆ ೧೩೦ ಜಿರಾಫೆಗಳುಳ್ಳ ಹಿಂಡುಗಳೂ ಇದ್ದವು. ಈಗಿನ ಹಿಂಡುಗಳಲ್ಲಿ ೭೦ಕ್ಕಿಂತ ಹೆಚ್ಚು ಪ್ರಾಣಿಗಳಿರುವುದಿಲ್ಲ. ಹಿಂಡಿಗೆ ಒಂದು ಪ್ರೌಢ ಗಂಡು ಯಜಮಾನನಾಗಿರುತ್ತದೆ. ಉಳಿದವು ಹೆಣ್ಣು ಮತ್ತು ಮರಿಗಳು. ಹಿಂಡಿನ ಸುರಕ್ಷಿತತೆಯ ಮೇಲೆ ಎಚ್ಚರವಾಗಿ ಕಣ್ಣಿಡುವ ಕೆಲಸವನ್ನು ಹೆಣ್ಣೇ ಮಾಡುವುದು.

ಸಾಮಾನ್ಯವಾಗಿ ಚೈತ್ರ ಮಾಸದಲ್ಲಿ ಜಿರಾಫೆಗಳ ಪ್ರಣಯಕೂಟ ನಡೆಯುವುದು. ಆಗ ಒಂದು ಹೆಣ್ಣಿಗಾಗಿ ಎರಡು ಗಂಡುಗಳಲ್ಲಿ ಮೇಲಾಟ ನಡೆದರೆ ಅವುಗಳ ಕಾಳಗ ನೋಡುವಂತಿರುತ್ತದೆ. ಎರಡೂ ಪ್ರಾಣಿಗಳು ಎದುರುಬದುರಾಗಿ ನಿಂತು ಮತ್ಸರ ತುಂಬಿದ ಕಣ್ಣುಗಳಿಂದ ನೋಡುತ್ತ ಗೊರಸಿನಿಂದ ನೆಲ ಕೆರೆಯುತ್ತವೆ. ಆಮೇಲೆ ಮೆಲ್ಲಗೆ ಎರಡೂ ಮುಂದೆ ಬರುತ್ತವೆ. ಕೊನೆಗೆ ತಲೆಯನ್ನು ಬಿರ್ರನೆ ಬೀಸಿ ಟಗರುಗಳಂತೆ ತಲೆಗೆ ತಲೆ ಢಿಕ್ಕಿ ಹೊಡೆಯುತ್ತವೆ. ಒಂದೊಂದು ಸಲ ಹೋರಾಡಲು ಅವು ಹಿಂಗಾಲ ಮೇಲೂ ನಿಲ್ಲುತ್ತವೆ. ಕುಸ್ತಿ ಕೆಲ ಹೊತ್ತು ನಡೆದ ಮೇಲೆ ಎರಡೂ ಬಸವಳಿದು ಒಮ್ಮತದಿಂದೆಂಬಂತೆ ಶಾಂತವಾಗುತ್ತವೆ. ಈ ಕಲಹದಲ್ಲಿ ಅವುಗಳಿಗೆ ಸಣ್ಣ ಪುಟ್ಟ ಗಾಯಗಳಿಗಿಂತ ಹೆಚ್ಚು ಅಪಾಯ ವೇನೂ ಸಂಭವಿಸುವುದಿಲ್ಲ.

ಜಿರಾಫೆಗೆ ಗರ್ಭವಾಸ ೧೪॥ ತಿಂಗಳ ಕಾಲ. ಮರಿ ಹುಟ್ಟುವಾಗ ೫॥ ಯಿಂದ ೬॥ ಅಡಿ ಎತ್ತರವಿರುತ್ತದೆ. ನಾಲ್ಕು ಕಾಲು ಮತ್ತು ಕತ್ತು ಮಾತ್ರ ಇರುವ ಪ್ರಾಣಿಯಂತೆ ಕಂಡರೂ ಎಳೆ ಮರಿ ಬಲು ಮುದ್ದಾಗಿರುತ್ತದೆ. ಮರಿಗಳನ್ನು ರಕ್ಷಿಸಲು ತಾಯಿ-ತಂದೆ ಎರಡೂ ಜೀವದ ಹಂಗುತೊರೆದು ಕಾದುತ್ತವೆ. ಒಂದು ವರ್ಷದೊಳಗೆ ಕರು ೧೧॥ ಅಡಿ ಎತ್ತರಕ್ಕೆ ಬೆಳೆಯುತ್ತದೆ.

ಜಿರಾಫೆಯ ಬಾಯಿಂದ ಸದ್ದೇ ಹೊರಡುವುದಿಲ್ಲ; ಅದು ಅಕ್ಷರಶಃ ಮೂಕ ಪ್ರಾಣಿ ಎಂಬ ಭಾವನೆ ಬಹಳ ಕಾಲ ಇತ್ತು. ಆದರೆ ಅದು ಅಪರೂಪವಾಗಿ ವಿವಿಧ ಶಬ್ದಗಳನ್ನು ಮಾಡಬಲ್ಲುದೆಂದು ಈಗ ಗೊತ್ತಾಗಿದೆ.

"ಉದ್ದವಾಗಿದ್ದವರಿಗೆ ಬುದ್ಧಿ ಕಡಿಮೆ"

ಎಂಬ ಮಾತು ಜಿರಾಫೆಯ ಮಟ್ಟಿಗೆ ನಿಜ. ಅದಕ್ಕಿಂತ ದೊಡ್ಡ ಜಂತುಗಳೆಂದರೆ ಖಡ್ಗಮೃಗದಂಥ ಕೆಲ ಮೃಗಗಳು ಮಾತ್ರ. ಆದರೆ ಜಿರಾಫೆಯ ನಿಷ್ಕಪಟ ದೃಷ್ಟಿ, ನಿರುಪದ್ರವಿ ಸ್ವಭಾವ ಯಾರನ್ನೂ ಮನವೊಲಿಸುತ್ತದೆ. ದೂರದಿಂದಲೇ ಅಪಾಯವನ್ನು ಕಾಣಬಲ್ಲ ಜಿರಾಫೆಯನ್ನು ಆಫ್ರಿಕದ ಅರಣ್ಯದ ಇತರ ಸಸ್ಯಾಹಾರಿ ಪ್ರಾಣಿಗಳು ಪ್ರೀತಿಸುತ್ತವೆ. ಅದಕ್ಕೆ ಗುಂಡು ಹೊಡೆಯಲು ಹೋದ ಬೇಟೆಗಾರರು ಎಷ್ಟೋ ವೇಳೆ ಅದರ ಸುಂದರ ಮುಗ್ಧ ದೃಷ್ಟಿಯ ನೇರವಾದ ಮೃದು ಭಾವದಿಂದ ಮನಕರಗಿ ಬಂದೂಕು ಇಳಿಸಿದ್ದುಂಟು.

ಈಚೆಗೆ ವೈದ್ಯಕೀಯ ಸಂಶೋಧಕರ ದೃಷ್ಟಿ ಜಿರಾಫೆಗಳ ಕಡೆ ತಿರುಗಿದೆ. ಹೃದಯ ಮತ್ತು ರಕ್ತ ಸಂಚಾರದ ವಿಷಯದಲ್ಲಿ ಅಭ್ಯಾಸ ಮಾಡುವ ವಿಜ್ಞಾನಿಗಳು ಜಿರಾಫೆಗಳ ಭೆಟ್ಟಿಗಾಗಿ ಆಫ್ರಿಕಕ್ಕೆ ಯಾತ್ರೆ ಮಾಡುತ್ತಿದ್ದಾರೆ.

ಜಿರಾಫೆಯ ತಲೆ ಅದರ ಹೃದಯದಿಂದ ೧೨ ಅಡಿ ಎತ್ತರಕ್ಕಿರುತ್ತದೆ. ಇಷ್ಟೆತ್ತರಕ್ಕೆ ರಕ್ತವನ್ನು ಸಾಗಿಸಬೇಕಾದರೆ ಅದರ ಹೃದಯವು ಅತ್ಯಂತ ರಭಸದಿಂದ ಹಿಗ್ಗಿ ಕುಗ್ಗಬೇಕಾಗುತ್ತದೆ. ಅದೇ ಪ್ರಾಣಿಯು ನೀರು ಕುಡಿಯುವುದೇ ಮೊದಲಾದ ಕಾರ್ಯಗಳಿಗಾಗಿ ತಲೆಯನ್ನು ಒಮ್ಮೆಲೇ ೧೮ ಅಡಿಗಳಷ್ಟು ಕೆಳಗೆ ಇಳಿಸಿದಾಗ ರಭಸದಿಂದ ಬರುವ ರಕ್ತವು ಅದರ ತಲೆಯಲ್ಲಿ ತುಂಬಿಕೊಂಡು ರಕ್ತನಾಳ ಒಡೆದು ಮೆದುಳಲ್ಲಿ ರಕ್ತಸ್ರಾವವಾಗಬೇಕಿತ್ತು. ಆದರೆ ಹಾಗಾಗುವುದಿಲ್ಲ. ಅದರ ತಲೆಗೆ ಎಲ್ಲ ಅವಸ್ಥೆಗಳಲ್ಲೂ ಏಕಪ್ರಕಾರವಾಗಿ ರಕ್ತ ಪೂರೈಸುವ ಯಾವುದೋ ಉಪಾಯವನ್ನು ನಿಸರ್ಗವು ಯೋಜಿಸಿದೆ.

ಮಾನವ ಹೃದಯಕ್ಕಿಂತ ಇಮ್ಮಡಿ ವೇಗದಿಂದ ಒತ್ತಲ್ಪಟ್ಟ ರಕ್ತವು ತಲೆಯನ್ನು ತಲುಪುವಷ್ಟರಲ್ಲಿ ಸಾಧಾರಣ ವೇಗಕ್ಕೆ ಯಾವಾಗಲೂ ಹೇಗೆ ಮಾರ್ಪಡುತ್ತದೆ? ಇದರ ರಹಸ್ಯ ತಿಳಿದುಬಾದರೆ ಮಾನವನ ಹೃದಯ ಮತ್ತು ರಕ್ತಾಭಿಸರಣಕ್ಕೆ ಸಂಬಂಧಿಸಿದ ಅನೇಕ ಸಮಸ್ಯೆಗಳು ಬಿಡಬಹುದು. ಹೃದಯ ರೋಗಗಳನ್ನೂ ಹಿಡಿತಕ್ಕೆ ತರಲು ಸಾಧ್ಯವಾದೀತು. ಮೇಲಾಗಿ ಜಿರಾಫೆಯ ರಹಸ್ಯ ತಿಳಿದರೆ ಶಬ್ದಕ್ಕಿಂತ ವೇಗವಾಗಿ ಹಾರುವ ವಿಮಾನದಲ್ಲಿ ಕುಳಿತು ಹೋಗುವವರಿಗೆ ರಕ್ತ ಸಂಚಾರ ಹದಗೆಟ್ಟು ಕಣ್ಣು ಕತ್ತಲಿಕ್ಕುವುದಕ್ಕೂ ಪ್ರತೀಕಾರೋಪಾಯ ಯೋಜಿಸಬಹುದು.

ಇತರ ಅನೇಕ ಕಾಡು ಪ್ರಾಣಿಗಳಂತೆ ಜಿರಾಫೆಯ ಸಂತತಿಯೂ ಈಗ ನಷ್ಟವಾಗುತ್ತಿದೆ. ಮನುಷ್ಯನ ಕೊಲೆಗಡಕತನವು ಈ ಅಪೂರ್ವ ಪ್ರಾಣಿಯ ಕುಲಕ್ಷಯಕ್ಕೆ ಕಾರಣವಾಗುವುದನ್ನು ಕಂಡು ನಿಸರ್ಗಪ್ರಿಯರೂ ಈಗ ವೈದ್ಯಕೀಯ ಸಂಶೋಧಕರೂ ಸೇರಿಯೇ ಚಿಂತಿತರಾಗಿದ್ದಾರೆ.

---

"ಮಾತಿನಲ್ಲಿ ತಪ್ಪು ಮಾಡಿದ ರಾಜಕಾರಣಿಗಳು ಪೇಚಿನಿಂದ ಪಾರಾಗಲು ಆಶ್ರಯಿಸುವ ಒಂದು ಸುಲಭೋಪಾಯವೆಂದರೆ ಪತ್ರಿಕೆಗಳು ತಮ್ಮ ಭಾಷಣವನ್ನು ತಪ್ಪಾಗಿ ವರದಿ ಮಾಡಿವೆಯೆಂಬುದು. ಅವರ ಮಾತು ನಿಜವೇ. ಅಂದರೆ ಅವರ ಅಲಂಕಾರ ಭಾಷೆಯನ್ನು ಸರಿಪಡಿಸಿ, ವ್ಯಾಕರಣವನ್ನು ತಿದ್ದಿ, ಪೂರ್ವಾಪರಗಳ ಅಸಂಬದ್ಧತೆಯನ್ನು ನೇರಗೊಳಿಸಿ ಸುದ್ದಿಗಾರರು ವರದಿ ಮಾಡುವುದೇ ಆ ತಪ್ಪು.

"ರಾಜಕಾರಣಿಗಳ ಭಾಷಣಗಳನ್ನು ಸುದ್ದಿಗಾರರು ಇದ್ದಕ್ಕಿದ್ದಂತೆ, ಅವರ ಆಂ, ಊಂ, ಯಾತಕ್ಕಂತಂದರೆ, ನನ್ನ ಕೇಳಿದರೆ... ಇತ್ಯಾದಿ ಸಹಿತವಾಗಿ ವರದಿ ಮಾಡಿದರೆ ರಾಜಕಾರಣಿಗಳಿಗೆ ಆಗ ಬುದ್ಧಿ ಬಂದೀತು."

—ಬಿಲ್ ವಾಹನ್, "ಒಟ ಸ್ಟಾರ್" ಸಂಪಾದಕ

ಪ್ರೊ. ಎಲ್. ಆರ್. ಹೆಗಡೆ

# ಅವರು ಗಂಡನಿಗೆ ಬಾಣಂತಿತನ ಮಾಡಿಸುತ್ತಾರೆ!

**ಹೆಂಡತಿ ಹಡೆದಳೆಂದರೆ ನಲುವತ್ತು ದಿನ**
**ಗಂಡನಿಗೆ ಶಯ್ಯಾಸೇವೆ, ಹೆಂಡತಿಗೆ ಪತಿಸೇವೆ!**

"ಕಾರಜಾನದಿಂದ ಪಶ್ಚಿಮಕ್ಕೆ ಐದು ದಿನ ಪ್ರಯಾಣಮಾಡಿದರೆ ಕಾಕರದಾನ್ ಎಂಬ ಪ್ರಾಂತ ಬರುತ್ತದೆ . . . ಅಲ್ಲಿ ಸಂಸಾರದ ವಹಿವಾಟವನ್ನೆಲ್ಲ ಹೆಂಡಂದಿರು ನೋಡಿಕೊಳ್ಳುತ್ತಾರೆ. . . . ಈ ಜನಗಳಲ್ಲಿ ಒಂದು ವಿಚಿತ್ರ ಪದ್ಧತಿ ಇದೆ. ಹೆಂಡತಿಗೆ ಹೆರಿಗೆ ಸ್ನಾನವಾದ ಮೇಲೆ ಗಂಡನು ಹೆಂಡತಿಯ ಬದಲು ಮಗುವಿನ ಪಕ್ಕದಲ್ಲಿ ಮಲಗಿ ನಲವತ್ತು ದಿನ ಬಾಣಂತಿತನ ಮಾಡಿಸಿಕೊಳ್ಳುತ್ತಾನೆ. ಆ ಕಾಲದಲ್ಲಿ ಅವನ ಸ್ನೇಹಿತರೂ ಸಂಬಂಧಿಕರೂ ಬಂದು ಅವನ ಯೋಗಕ್ಷೇಮ ವಿಚಾರಿಸಿಕೊಂಡು ಹೋಗುತ್ತಾರೆ. ಹೆಂಡತಿ, ಮನೆಗೆಲಸಗಳನ್ನು ಮಾಡಿಕೊಂಡು ಗಂಡನಿಗೆ ಅಡಿಗೆ ಮಾಡಿ ಹಾಕಿ ಉಪಚರಿಸುತ್ತಾಳೆ ಮತ್ತು ಮಗುವಿಗೆ ಮೊಲೆ ಉಣಿಸುತ್ತಾಳೆ."

ಇದು ಮಾರ್ಕೊ ಪೋಲೋ ತನ್ನ ಪ್ರವಾಸ ಕಥನದಲ್ಲಿ ಹದಿಮೂರನೇ ಶತಮಾನದ ಚೀನಿ ಪ್ರಾಂತವೊಂದರಲ್ಲಿದ್ದ ವಿಚಿತ್ರ ಪದ್ಧತಿಯನ್ನು ಕುರಿತು ಬರೆದ ಸಂಗತಿ. ಆ ಕಾಲದಲ್ಲಿ ಪೋಲೋನ ಇತರ ಅನೇಕ ಸತ್ಯ ಹೇಳಿಕೆಗಳನ್ನು ಜನರು ನೀಲಿಕೆಟ್ಟ ಸುದ್ದಿಯೆಂದು ಗೇಲಿ ಮಾಡಿದಂತೆ ಇದನ್ನೂ ಚೇಷ್ಟೆ ಮಾಡಿರಬೇಕು. ಆದರೆ ಪೋಲೋ ಹೇಳಿದ್ದು ಅಕ್ಷರಶಃ ನಿಜವೆಂದು ಮಾನವ ಶಾಸ್ತ್ರಜ್ಞರು ಈಗ ಕಂಡುಕೊಂಡಿದ್ದಾರೆ.

ನಾಗರಿಕ ಜನಾಂಗಗಳಲ್ಲಿ ಪ್ರಸವದ ಸಮಯದಲ್ಲಿ ತಾಯಿಯನ್ನು ಕುರಿತು ಬಹಳ ಲಕ್ಷ್ಯ ಮತ್ತು ಮುತವರ್ಜಿ ತೋರಿಸುತ್ತಾರೆ. ಆದ್ದರಿಂದ ನಮಗೆ ಗಂಡನ ಬಾಣಂತಿತನ ವಿಚಿತ್ರ ಪದ್ಧತಿಯಾಗಿ ಕಾಣುತ್ತದೆ. ಆದರೆ ಅನೇಕ ಕಾಡು ಜನಾಂಗಗಳು ಇದಕ್ಕೆ ವಿರುದ್ಧವಾದ ರೀತಿಯನ್ನು ಅನುಸರಿಸುತ್ತವೆ. ಅವರಲ್ಲಿ ಬೇನೆಯನ್ನು ನಟಿಸುತ್ತ ತಂದೆ ನರಳುತ್ತಿರುತ್ತಾನೆ. ಅವನಿಗೆ ವೈದ್ಯಕೀಯ ಶುಶ್ರೂಷೆ ಕೂಡ ದೊರೆಯುತ್ತದೆ. ಆದರೆ ನಿಜವಾಗಿ ಬೇನೆ ಸಹಿಸುವ ತಾಯಿಯನ್ನು ಅವರು ಅಲಕ್ಷಿಸುತ್ತಾರೆ!

---

ಪ್ರೊ. ಹೆಗಡೆಯವರು ಕುಮಟೆಯ ಕೆನರಾ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದಾರೆ. ಮಾನವ ಶಾಸ್ತ್ರದಲ್ಲಿ ವಿಶೇಷ ಅಭ್ಯಾಸಗಳನ್ನವರು ನಡೆಸಿದ್ದಾರೆ.

ಮಾರ್ಕೋ ಪೋಲೋ ಹೇಳಿದ ಕುಲದವರು ಇಂದಿಗೂ ಆ ಪದ್ಧತಿಯನ್ನು ಆಚರಿಸುತ್ತಿದ್ದಾರೆ. ಆ ಪಂಗಡಕ್ಕೆ "ಮಿಯಾವ್ತ್ಸೆ" ಅಂದರೆ "ಮಣ್ಣಿನ ಮಕ್ಕಳು" ಎಂದು ಹೆಸರು. ಆದರೆ ಇದು ಏಶಿಯಕ್ಕೇ ಮಿತವಾದ ಸಂಪ್ರದಾಯವಲ್ಲ. ಬಾಲ್ಟಿಕ್ ಪ್ರಾಂತದ ರಶಿಯನ್ನರಲ್ಲಿಯೂ ಅದು ಆಚರಣೆಯಲ್ಲಿದೆ. ಬ್ರಿಟಿಶ ಗಿನಿಯ ಇಂಡಿಯನ್ ಕುಲಗಳಲ್ಲಿಯೂ ಗಂಡನ ಬಾಣಂತಿತನ ನಡೆಯುತ್ತದೆ.

ಈ ಜನರು "ಹೆಂಗಸು ಅಬಲೆಯಲ್ಲ" ಎಂಬ ಸಿದ್ಧಾಂತವನ್ನು ಛಲದಿಂದ ಪ್ರಯೋಗಕ್ಕೆ ತರುವಂತೆ ತೋರುತ್ತದೆ. ಹಡೆಯುವುದಕ್ಕೆ ಕೆಲ ತಾಸುಗಳಿರುವ ಪರ್ಯಂತವೂ ಹೆಂಗಸು ಕೆಲಸ ಮಾಡುತ್ತಿರುತ್ತಾಳೆ; ಆದರೆ ತಂದೆಯಾಗುವವನು ಹೆಂಡತಿ ಹಡೆಯುವ ಕೆಲ ದಿನ ಮೊದಲೇ ಹಾಸಿಗೆ ಹಿಡಿದಿರುತ್ತಾನೆ. ಈ ಸಮಯದಲ್ಲಿ ಆತನು ಕೆಲ ವಿಧದ ಆಹಾರಗಳನ್ನು ತಿನ್ನು-ವಂತಿಲ್ಲ. ತಿಂದರೆ ಶಿಶು ಬಹಳ ಸೊರಗಿ ಹೋಗುವುದು ಇಲ್ಲವೆ ಅದರ ಹಲ್ಲುಗಳು ಗೊಗ್ಗರವಾಗಬಹುದು ಎಂದು ಅವರ ನಂಬಿಕೆ. ಹಡೆಯುವ ನೋವು ಪ್ರಾರಂಭವಾಗುತ್ತಲೇ ಬಸುರಿ ಸುಮ್ಮನೆ ಅಡವಿಗೆ ಹೋಗುತ್ತಾಳೆ. ಗಂಡ ಹಾಸಿಗೆಯಲ್ಲಿ ಹೊರಳಾಟ ಚೀರಾಟಗಳನ್ನು ಮಾಡುತ್ತಾನೆ. ಹಡೆದ ನಂತರ ಹತ್ತು ದಿನಗಳ ವರೆಗೆ ಹೆಂಡತಿ ತನ್ನ ಸ್ವಂತದ್ದಲ್ಲದೆ ಮಗುವಿನ ಮತ್ತು ಗಂಡನ ಆರೈಕೆಯನ್ನು ಸಹ ನೋಡಿಕೊಳ್ಳಬೇಕು.

ಈ ಪದ್ಧತಿ ಬಹಳ ಪ್ರಾಚೀನವಾಗಿದೆ. ಕ್ರಿಸ್ತಶಕಾರಂಭದಲ್ಲಿ ಸ್ಟ್ರಾಬೋ ಎಂಬ ಬಹು ಪ್ರಾಮಾಣಿಕ ಭೂಗೋಲ ಶಾಸ್ತ್ರಜ್ಞನು ಉತ್ತರ ಸ್ಪೇನದ ಐಬೀರಿಯನ್ನರಲ್ಲಿ ಶಿಶುಗಳನ್ನು ಹಡೆದ ನಂತರ ಹೆಂಗಸರು ಗಂಡಂದಿರನ್ನು ಹಸೆಯಮೇಲೆ ಮಲಗಿಸಿ ಶುಶ್ರೂಷೆ ಮಾಡುತ್ತಿದ್ದರೆಂದು ತಿಳಿಸಿದ್ದಾನೆ. ಅದೇ ಪ್ರದೇಶದ ಬಾಸ್ಕ್ ಜನಾಂಗದಲ್ಲಿ ಮೊನ್ನೆ ಮೊನ್ನೆಯ ವರೆಗೂ ಈ ಪದ್ಧತಿಯಿತ್ತು. ಕಪ್ಪು ಸಮುದ್ರದ ದಕ್ಷಿಣದಲ್ಲಿ ಟಿಬರೆನೆ ಎಂದು ಕರೆಯಲ್ಪಡುವ ಜನಾಂಗದಲ್ಲಿ ಮಗು ಹುಟ್ಟಿದ ಕೂಡಲೆ ತಂದೆಯ ತಲೆಯನು ಕಟ್ಟಿ ಮಲಗಿಸುತ್ತಿದ್ದರು. ತಾಯಿ ಅವನಿಗೆ ಉಪಚಾರ ಮಾಡಿ ಆಹಾರ ಕೊಟ್ಟು ಅವನ ಸ್ನಾನದ ಏರ್ಪಾಡು ಮಾಡುತ್ತಿದ್ದಳು.

ಗಂಡನ ಬಾಣಂತಿತನಕ್ಕೆ ಕಾರಣವಾದ ವಿಚಾರ ಸರಣಿಯನ್ನು ಟೇಲರನು ವಿವರಿಸಿದ್ದಾನೆ. ನಾಗರಿಕನು ಗಂಡ ಹೆಂಡತಿ ಮಕ್ಕಳ ಶರೀರಗಳ ಪ್ರತ್ಯೇಕತೆಯನ್ನು ಸ್ಪಷ್ಟವಾಗಿ ಒಪ್ಪುತ್ತಾನೆ. ಆದರೆ ಅನಾಗರಿಕರಲ್ಲಿ ತಂದೆ-ಮಕ್ಕಳ ಶರೀರಗಳು ಪ್ರೀತಿ ಮತ್ತು ಕರ್ತವ್ಯಬಂಧಗಳಿಂದ ಮಾತ್ರವಲ್ಲದೆ ದೈಹಿಕ ಬಂಧನದಿಂದಲೂ ಒಂದಾಗಿವೆಯೆಂದು ಭಾವಿಸಲಾಗುತ್ತದೆ. ತಂದೆಗೆ ಏನಾದರೂ ಆದರೆ ಮಗುವಿನ ಮೇಲೂ ಅದರ ಪರಿಣಾಮವಾದೀತೆಂದು ಅವರು ಸಹಜವಾಗಿ ಯೋಚಿಸುತ್ತಾರೆ.

ಬೋರ್ನಿಯೋ ದ್ವೀಪದ "ಡಯಾಕ"ರಲ್ಲಿ ಹೆಂಡತಿ ತುಂಬು ಬಸುರಿಯಿದ್ದಾಗ ಗಂಡ (ಒಕ್ಕಲುತನಕ್ಕೆ ಅನಿವಾರ್ಯವಾದ ಹೊರತು) ಹರಿತವಾದ ಆಯುಧಗಳಿಂದ ಯಾವ ಕೆಲಸವನ್ನೂ ಮಾಡಬಾರದು. ಅವನು ಕೋವಿ ಹೊಡೆಯಕೂಡದು, ಪ್ರಾಣಿಗಳನ್ನು ಹಿಂಸಿಸಲಾಗದು. ಇದಕ್ಕೆ ತಪ್ಪಿದರೆ ಶಿಶುವಿಗೆ ಕೇಡಾದೀತು. ಮಗುವಾದ ಮೇಲಂತೂ ಅನೇಕ ದಿನಗಳ ವರೆಗೆ ಮನೆಯೊಳಗೇ ಪ್ರತ್ಯೇಕವಾಗಿ ಅವನನ್ನಿಡುತ್ತಾರೆ. ಅಕ್ಕಿ ಅನ್ನ, ಹಾಲು ಪಥ್ಯದಿಂದ ಆತ ಕಾಲ ಕಳೆಯಬೇಕು. ಇಲ್ಲದಿದ್ದರೆ ಮಗುವಿನ ಹೊಟ್ಟೆ ಉಬ್ಬರಿಸೀತು!

ಉತ್ತರ ಕನ್ನಡ ಜಿಲ್ಲೆಯಲ್ಲಿ ಬಸುರಿಯ ಗಂಡನು ಯಾವ ಪ್ರಾಣಿಯನ್ನೂ ಹೊಡೆದು ಕೊಲ್ಲಬಾರದು. ಹಾಗೆ ಮಾಡಿದರೆ ಶಿಶುವಿಗಾಗಲಿ ತಾಯಿಗಾಗಲಿ ಪ್ರಾಣಾಪಾಯ ಬರಬಹುದೆಂಬ ನಂಬಿಕೆಯಿದೆ. ಪ್ರಯಾಸದ ಕೆಲಸದ ಮೇಲೆ ಇಂಥ ನಿಷೇಧ ಬೇರೆ ಕಡೆಗಳಲ್ಲಿಯೂ ಇದೆ. ಸೈಬೀರಿಯದಲ್ಲಿ ಬಸುರಿಯ ಗಂಡನು ತನ್ನ ಸ್ಲೆಜ್ ಜಾರುಬಂಡಿಯ ಕಟ್ಟಿಗೆಯ ಪಟ್ಟಿಗಳನ್ನು ಮೊಳಗಾಲಿನಿಂದ ಬಗ್ಗಿಸತಕ್ಕದ್ದಲ್ಲ. ಗ್ರೀನ್‌ಲಂಡಿನಲ್ಲಿ ಶಿಶು ಸಾಯಬಾರದೆಂದು ಹೆಂಡತಿ ಹಡೆಯುವ ಕೆಲ ವಾರಗಳ ಮೊದಲಿಂದಲೇ ಆಹಾರ ಸಂಪಾ

ದನೆಯು ಹೊರತಾಗಿ ಬೇರೆ ಕೆಲಸ ಮಾಡುವಂತಿಲ್ಲ. ಡಯಾಕರಲ್ಲಿರುವಂತೆ ಸುರಿನಾಂ ಪ್ರದೇಶದ "ಅರವಾಕ" ಜನರಲ್ಲಿಯೂ ಗಂಡನ ಮೇಲೆ ನಿರ್ಬಂಧಗಳಿವೆ. ಆದರೆ ಮನೆಯ ಸಮೀಪದಲ್ಲಿ ಬಿಲ್ಲು-ಬಾಣಗಳಿಂದ ಹಕ್ಕಿಗಳನ್ನು ಹೊಡೆಯಬಹುದು, ಗಾಳ ಹಾಕಿ ಸಣ್ಣ ಮೀನುಗಳನ್ನು ಹಿಡಿಯಬಹುದು. ಸುಮ್ಮನೆ ಹೊದ್ದು ಹಾಸಿಗೆಯ ಮೇಲೆ ಮಲಗುವುದು ಉತ್ತಮ ಪಕ್ಷ!

ಮ್ಯಾಕ್ಸ್‌ಮುಲ್ಲರರ ಅಭಿಪ್ರಾಯದಲ್ಲಿ ಈ ಪದ್ಧತಿಯ ಉದ್ದೇಶ ಬಹಳ ಸ್ಪಷ್ಟವಾಗಿದೆ. ಗಂಡಸು ಬೇಟೆಯಾಡುವುದು, ಸೆರೆಕುಡಿಯುವುದೇ ಮೊದಲಾದ ಅಲಕ್ಷ್ಯದ ಕಾರ್ಯಗಳನ್ನು ಮಾಡಿದರೆ ಶಿಶುವಿಗೆ ಅಪಾಯವಿದೆಯೆಂದು ಹೆಂಗಸರು ಹೆದರಿಸುತ್ತಿದ್ದರು. ತಂದೆಯು ಒಂದಿಲ್ಲೊಂದು ತಪ್ಪಿನ ಮೂಲಕವೇ ಶಿಶುವಿನ ಮರಣವಾಯಿತೆಂದು ಆರೋಪಿಸುತ್ತಿದ್ದರು. ಅತ್ತೆ ಹಾಗೂ ಇತರ ಹೆಣ್ಣಿನ ಬಳಗದವರ ಕಾಟದಿಂದ ತಪ್ಪಿಸಿಕೊಳ್ಳಲು ಗಂಡನು ಹಾಸಿಗೆಯಲ್ಲಿ ಮಲಗುವ ರೂಢಿಯನ್ನು ಮಾಡಿಕೊಂಡನೆಂದು ಮುಲ್ಲರರ ಮತ.

ಗಂಡನು ಹೆಂಡತಿಯ ಬಾಣಂತಿತನದ ಕಾಲದಲ್ಲಿ ಇತರ ಹೆಣ್ಣುಗಳನ್ನು ಅರಸುತ್ತ ಹೋಗದಂತೆ ಮಾಡಲು ಇದೊಂದು ಉಪಾಯವಾಗಿರಬಹುದೆಂದು ನನ್ನ ಮಿತ್ರರೊಬ್ಬರು ಊಹಿಸುತ್ತಾರೆ. ಆದರೆ ಲೈಂಗಿಕ ಸಂಬಂಧದಲ್ಲಿ ಹೆಚ್ಚು ಸ್ವಾತಂತ್ರ್ಯವುಳ್ಳ ಅನಾಗರಿಕರಲ್ಲೇ ಈ ರೂಢಿಯಿರುವುದನ್ನು ನೋಡಿದರೆ ಈ ತರ್ಕ ಅಷ್ಟು ಸಮಂಜಸವಾಗಿಲ್ಲ. ತಂದೆಗೂ ಮಗುವಿಗೂ ದೈಹಿಕ ಬಂಧನವಿದೆಯೆಂಬ ಕಲ್ಪನೆಯೇ ಈ ನಿರ್ಬಂಧಗಳಿಗೆ ಕಾರಣವಾಗಿರಬೇಕು.

ಆದರೆ ಬಸುರಿಯ ಗಂಡನ ಮೇಲೆ ಇರುವ ನಿರ್ಬಂಧಗಳಿಗೆ ನಾವು ಅನಾಗರಿಕರಷ್ಟು ದೂರ ಹೋಗಬೇಕಾಗಿಲ್ಲ. ಕರ್ಮಠ ಹಿಂದುಗಳಲ್ಲಿ ಹೆಂಡತಿ ಬಸುರಾದರೆ ಅವಳು ಹಡೆಯುವ ತನಕ ಗಂಡನಿಗೆ ಕ್ಷೌರಕ್ಕೆ ನಿಷೇಧವಿದೆಯಲ್ಲವೆ?

**ಹೆಂಗಸರು ಮೂರ್ಖರೆಂಬುದನ್ನು ನಾನು ನಿರಾಕರಿಸುವುದಿಲ್ಲ. ಸರ್ವಶಕ್ತನಾದ ಪರಮಾತ್ಮನು ಗಂಡಸರಿಗೆ ಅನುರೂಪವಾಗಿ ಹೆಂಗಸರನ್ನು ಸೃಷ್ಟಿಸಿದ್ದಾನೆ.**

—ಜಾರ್ಜ ಈಲಿಯಟ್

**ಪ್ರೇಮರಹಿತವಾದ ವಿವಾಹವಿದ್ದಲ್ಲಿ ವಿವಾಹರಹಿತ ಪ್ರೇಮವೂ ಇರದೆ ನಿರ್ವಾಹವಿಲ್ಲ.**

—ಫ್ರಾಂಕ್ಲಿನ್

ಶ್ರೀಮತಿ ಲಲಿತಾದೇವಿ



# ತುರುಬು ಕಟ್ಟುವ ಲಲಿತಕಲೆ

**ವೇದಕಾಲದಿಂದಲೂ ಭಾರತೀಯರು
ಕೇಶಶೃಂಗಾರ ಕಲೆಯನ್ನು ಬೆಳಸಿಕೊಂಡು ಬಂದಿದ್ದರು**

ಪ್ರಾಚೀನ ಭಾರತದ ಮಹಿಳೆಯರು ಕೇಶ ಶೃಂಗಾರಕ್ಕೆ ಹೆಚ್ಚಿನ ಮಹತ್ವವನ್ನು ಕೊಡುತ್ತಿದ್ದರು. ವೇದಕಾಲದಿಂದಲೂ ಕೇಶ ಶೃಂಗಾರವನ್ನು ಒಂದು ಕಲೆಯೆಂದು ಭಾರತೀಯರು ತಿಳಿಯುತ್ತ ಬಂದಿರುವರೆಂಬುದಕ್ಕೆ ಬೇಕಾದಷ್ಟು ಆಧಾರಗಳು ದೊರೆಯುತ್ತವೆ.

ಅಥರ್ವವೇದದಲ್ಲಿ ಕೇಶವರ್ಧಿನೀ ಔಷಧವೊಂದರ ವರ್ಣನೆಯಿದೆ. ಮಹಾಭಾರತದ ದ್ರೌಪದಿ ವಿರಾಟನ ಅಂತಃಪುರದಲ್ಲಿ "ಸೈರಂಧ್ರಿ" ಅಂದರೆ ಹೆರಳು ಹಾಕುವ ಕೆಲಸ ಮಾಡುತ್ತಿದ್ದಳು. ಕಾಮಸೂತ್ರಕಾರ ವಾತ್ಸ್ಯಾಯನ ಹೇಳುವ ಅರುವತ್ತನಾಲ್ಕು ಕಲೆಗಳಲ್ಲಿ ಕೇಶಶೃಂಗಾರವೂ ಒಂದು. ಸಂಸ್ಕೃತ ವಾಙ್ಮಯದಲ್ಲಿ ಪ್ರಥಿತಯಶರಾದ ಕಾಲಿದಾಸ, ಭವಭೂತಿ, ಮುಂತಾದವರು ಕೇಶಶೃಂಗಾರದ ವರ್ಣನೆಯನ್ನು ಮಾಡಿದ್ದುಂಟು. ಆಯುರ್ವೇದ ಗ್ರಂಥಗಳು ಕೇಶವರ್ಧನೆಗಾಗಿ ಹಲವು ವಿಧದ ತೈಲಗಳನ್ನು ಸೂಚಿಸಿವೆ. ಬೌದ್ಧ ಜೈನ ಗ್ರಂಥಾವಳಿಗಳಲ್ಲಿಯೂ ಸ್ತ್ರೀಯರ ಹೆರಳಿನ ವರ್ಣನೆ ದೊರೆಯುತ್ತದೆ.

ಭಾರತದ ಪ್ರಾಚೀನ ಸಾಹಿತ್ಯದಲ್ಲಿ ದೊರೆವ ಈ ವಿವರಗಳನ್ನು ನಮ್ಮ ವಾಸ್ತುಶಿಲ್ಪದ ಅವಶೇಷಗಳು ಸಮರ್ಥಿಸುತ್ತವೆ. ವೇದಕಾಲಕ್ಕೊ ಹಿಂದಿನ ಮೊಹೆಂಜೆದಾರೊ, ಹರಪ್ಪಾಗಳಲ್ಲಿ ದೊರಕಿದ ಮೂರ್ತಿಗಳಲ್ಲಿ ಹಲವು ವಿಧದ ಹೆರಳು ಹಾಕುವ ಪದ್ಧತಿಗಳನ್ನು ಗುರುತಿಸಬಹುದು. ಬಿಹಾರಿನ ದೀದರಗಂಜಿನಲ್ಲಿ ದೊರೆತ ಒಂದು ಮೂರ್ತಿಯಲ್ಲಿ ಯಕ್ಷಿಣಿಯರ ಕೇಶವಿನ್ಯಾಸವನ್ನು ಕಾಣಬಹುದು. ಅಜಂತಾ, ಸಾಂಚೀ, ಅಮರಾವತೀ ಮುಂತಾದ ಕಡೆಗಳಲ್ಲಿರುವ ಮೂರ್ತಿ ಶಿಲ್ಪಗಳು ಪ್ರಾಚೀನ ಭಾರತೀಯ ಮಹಿಳೆಯರ ಕೇಶಸಂಸ್ಕರಣದ ಕುರಿತು ಹೆಚ್ಚಿನ ಬೆಳಕು

"ಗೌರಿ"ಯ ಆಧಾರದಿಂದ

ಬೀರಬಲ್ಲವು. ಅಜಂತಾ ಭಿತ್ತಿ ಚಿತ್ರಗಳಲ್ಲಿಯೇ ೨೫ ಕ್ಕಿಂತ ಹೆಚ್ಚು ವಿಧದ ರಮಣೀ ಕೇಶವಿನ್ಯಾಸಗಳು ಕಾಣಿಸುತ್ತವೆ. ವಿಜಯ ನಗರದ ಮೂರ್ತಿಶಿಲ್ಪದಲ್ಲಿ ಅನೇಕಾನೇಕ ಪ್ರಾಂತಗಳ ಕೇಶ ಶೃಂಗಾರ ಪದ್ಧತಿಗಳನ್ನು ಒಂದೆಡೆ ನೋಡುತ್ತೇವೆ. ದಕ್ಷಿಣ ಮತ್ತು ಉತ್ತರ ಭಾರತದ ಮೂರ್ತಿಶಿಲ್ಪಗಳಲ್ಲಿ ತೋರುವ ಕೇಶ ಸಂಸ್ಕರಣ ಪದ್ಧತಿಗಳು ಬೇರೆ ಬೇರೆಯಾಗಿವೆ. ದಕ್ಷಿಣ ಭಾರತದಲ್ಲಿ ಹೆರಳು ಹಾಕುವ ಪದ್ಧತಿ ಹೆಚ್ಚು ವಿಕಾಸಗೊಂಡಿತ್ತೆಂದು ಅವುಗಳಿಂದ ತಿಳಿಯುತ್ತದೆ.





ಪ್ರಾಚೀನ ಕಾಲದಲ್ಲಿ ನೀಳವಾದ ಕೂದಲು ಮಹಿಳೆಯರಿಗೆ ಗೌರವವನ್ನು ತರುತ್ತಿತ್ತು. ಗುಂಗುರು ಕೂದಲಿನವಳು "ಕುಂಚಿತಕೇಶಿ"ಯೆನಿಸಿದರೆ ನೀಟಾದ ಕೂದಲನ್ನು "ಪಾಶ"ವೆಂದು ಕರೆಯುತ್ತಿದ್ದರು. ಮೌರ್ಯ ಕಾಲದಲ್ಲಿ ಕೂದಲನ್ನು ಹಿಂದಿನಿಂದ ಗಂಟು ಹಾಕುತ್ತಿದ್ದರು. ತುರುಬು ಕಟ್ಟುವುದರಲ್ಲಿಯೂ ಹಲವು ತರ. ಹೂಗೊಂಚಲು, ಹೂಮಾಲೆ ಮುಂತಾದವುಗಳಿಂದ ಹೆರಳನ್ನು ಅಲಂಕರಿಸುತ್ತಿದ್ದರು.

ಕೋಶಂಬಿಯಲ್ಲಿ ಸಿಕ್ಕಿದ ಒಂದು ಶಿಲ್ಪದಲ್ಲಿ ಎರಡು ಜಡೆಗಳನ್ನು ಹಾಕುವ ಪದ್ಧತಿಯು ಪ್ರಾರಂಭವಿದ್ದಂತೆ ತೋರುತ್ತದೆ. ಕೂದಲನ್ನು ಎರಡು ಭಾಗಮಾಡಿ ಪ್ರತಿಯೊಂದು ಭಾಗವನ್ನು ಕಿವಿಯ ಬದಿಗೆ ತಂದು ಅಲ್ಲಿ ಗಂಟು ಹಾಕಿಕೊಂಡಿರುವುದನ್ನು ಈ ಶಿಲ್ಪದಲ್ಲಿ ಕಾಣುತ್ತೇವೆ. ಈ ಎರಡು ಹೆರಳುಗಳನ್ನು ಮುತ್ತಿನ ಹಾರವೂ ಶೃಂಗಾರ ಪಟ್ಟಿಕೆಯೂ ಅಲಂಕರಿಸಿವೆ.

ಕೇಶಲಾವಣ್ಯವನ್ನು ಹೆಚ್ಚಿಸುವ ಸಲುವಾಗಿ ಅಂದಿನ ಮಹಿಳೆಯರು ಅಳಲೆಕಾಯಿ, ಅಂಟ್ವಾಳಕಾಯಿ, ಸೀಗೆಕಾಯಿ, ಬಾಳೆಯ ನೀರು, ಮೊಸರು ಮುಂತಾದವುಗಳಿಂದ ತೊಳೆದುಕೊಳ್ಳುತ್ತಿದ್ದರು. ಸ್ನಾನವಾದನಂತರ ಕಾಲಾಗುರು, ಅಗರು, ಕಸ್ತೂರಿ, ಕರ್ಪೂರ ಮತ್ತು ಚಂದನ ಮೊದಲಾದವುಗಳ ಹೊಗೆಯಿಂದ ತಮ್ಮ ತುರುಬನ್ನು ಸುವಾಸಿತವಾಗಿಸುವರು. ಅದಾದಮೇಲೆ ಸುಗಂಧ ತೈಲಗಳನ್ನು ಹಚ್ಚಿಕೊಳ್ಳುತ್ತಿದ್ದರು.

ಕಾಮಸೂತ್ರ ಮತ್ತು ಆಯುರ್ವೇದೀಯ ಗ್ರಂಥಗಳಲ್ಲಿ ಹೆರಳನ್ನು ಕಪ್ಪು ಮಾಡಲು ಕೆಲವು ಔಷಧಗಳನ್ನೂ ಉಪಾಯಗಳನ್ನೂ ಹೇಳಿರುವರು. ಭೃಂಗರಾಜ, ಬ್ರಾಹ್ಮೀ, ತ್ರಿಫಲಾ ಚೂರ್ಣ, ಲೋಹ ಚೂರ್ಣ ಇವುಗಳಿಂದ ಕೂದಲಿನ ಕಪ್ಪು ಹೆಚ್ಚುವಂತೆ ಮಾಡಬಹುದೆಂದು ಹೇಳಲಾಗಿದೆ.

''ಯುಗ ಕಲ್ಪತರು'' ವೆಂಬ ಒಂದು ಗ್ರಂಥದಲ್ಲಿ ವಿವಿಧ ಜಾತಿಯ ಬಾಚಣಿಗೆಗಳ ವಿವರವಿದೆ. ತಲೆಗೂದಲಿಗೆ ಬಣ್ಣ ಹಚ್ಚುವ ಪದ್ಧತಿಯೂ ಹಿಂದಿನ ಮಹಿಳೆಯರಲ್ಲಿ ರೂಢಿಯಿತ್ತು. ಪನ್ನೀರಿನಲ್ಲಿ ಕೇಶರ ಅಥವಾ ಹೂಗಳ ಬಣ್ಣವನ್ನು ಬೆರಸಿ ಕೂದಲಿಗೆ ಅರಸಿನ ಬಣ್ಣವನ್ನು ಕೊಡುತ್ತಿದ್ದರು. ಕೂದಲು ಮಿನುಗಲೆಂದು ಮದರಂಗಿ



ಯನ್ನು ಉಪಯೋಗಿಸುತ್ತಿದ್ದರು.

ಬಹುವಿಧದಿಂದ ಜಡೆ ಹಾಕುವುದು ಮತ್ತು ತುರುಬು ಕಟ್ಟುವುದು ಪ್ರಸಿದ್ಧವಾಗಿತ್ತು. ಹೆರಳು ಹಾಕುವ ಪ್ರತಿಯೊಂದು ರೀತಿಗೂ ಪ್ರತ್ಯೇಕ ಹೆಸರಿತ್ತು. "ಕಾಕಪಕ್ಷ" "ಕಾಕಚ್ಛದಿ" ಇವು ತಲೆಯ ಎರಡೂ ಬದಿಯಲ್ಲಿ ಕಟ್ಟುವ ಬೇರೆ ಬೇರೆ ಮಾದರಿಯ ತುರುಬುಗಳ ಹೆಸರುಗಳು. ಹಣೆಯ ಮೇಲೆ ಬೀಳುವ ಉದ್ದ ಮುಂಗುರುಳಿಗೆ "ಭ್ರಮರಕ" ಎನ್ನುತ್ತಿದ್ದರು. ಪ್ರಾಂತೋನ್ಮೀಲಿತಕುಂತಲ, ಅಲಕ, ಲಲಾಟಲುಲಿತ ಕೇಶ ಮುಂತಾದ ಕೇಶವಿನ್ಯಾಸ ಪದ್ಧತಿಗಳು ಕೂದಲಿನ ಉದ್ದ ಮತ್ತು ಗುಂಗುರು ಮುಂತಾದ ಸ್ವಭಾವವನ್ನು ಅನುಸರಿಸುತ್ತಿದ್ದವು. ಅಲಕಾವಲಿಯೆಂಬ ಹೆರಳಿನ ಪದ್ಧತಿಯ ವಿಶೇಷವೆಂದರೆ



ಮುಂಗುರುಳುಗಳನ್ನು ಕೆನ್ನೆಯ ಮೇಲೆ ಜೋಲು ಬಿಡುವುದು. ''ಮಯೂರಪುಚ್ಛ'' ಒಂದು ತರದ ಜೋಲ್ಮುಡಿ. ಅದನ್ನು ಹೂಗಳಿಂದ ಅಲಂಕರಿಸುವರು.

ಸರ್ಪದ ಹೆಡೆಯಂಥ ಜಡೆ ಹೆಣೆಯುವ ಪದ್ಧತಿಯೂ ಅಹಿಚ್ಛತ್ರದಲ್ಲಿ ಬಳಕೆಯಾಗಿತ್ತು. ಕುಂಡಲ, ಕುಂಚಿತ ಪಾಶ ಮುಂತಾದ ಇತರಪ್ರಕಾರಗಳೂ ಬಳಕೆಯಲ್ಲಿದ್ದುವು.



ಮೌರ್ಯ ಕಾಲದಲ್ಲಿ ಕೂದಲನ್ನು ಒಂದುಗೂಡಿಸಿ ಮೇಲುಗಡೆ ಮುಡಿ ಕಟ್ಟುವ ರೂಢಿ ಇತ್ತು. ಅನಂತರ ಸಡಿಲಾದ ಜೋಲ್ಮುಡಿಯ ಪ್ರಚಾರ ಹೆಚ್ಚಾಯಿತು. ಹೆರಳು ಹಾಕುವಾಗ ಹೇಗೆ ಬೈತಲೆ ತೆಗೆಯಬೇಕೆಂದೂ ಸಂಸ್ಕೃತದ ಶೃಂಗಾರ ಸಾಹಿತ್ಯ ಸಲಹೆನೀಡದೆ ಇಲ್ಲ. ದುಂಡು ಮುಖದವರು ಮಧ್ಯ ಬೈತಲೆ ಮಾಡಬೇಕು; ಉದ್ದ ಮುಖವಾದರೆ ಓರೆಯಾಗಿ ಮಾಡಬೇಕು ಮುಂತಾದ ಸಲಹೆಗಳೂ ಹಿಂದಿನ ಸಾಹಿತ್ಯದಲ್ಲಿ ಇವೆ.

ಹಳಗನ್ನಡ ಸಾಹಿತ್ಯದಲ್ಲಿ ಕೂಡ ಅಡ್ಡಮುಡಿ, ಕಟ್ಟುಮುಡಿ, ಜಡೆಮುಡಿ, ಪೆರ್ಮುಡಿ, ಬಲ್ಮುಡಿ ಸೋರ್ಮುಡಿ ಮುಂತಾದ ತುರುಬಿನ ಪ್ರಕಾರಗಳು ದೊರೆಯುತ್ತವೆ. ಕೂದಲು ಕತ್ತರಿಸಿ ರಚಿಸುವ ಕೇಶವಿನ್ಯಾಸವೊಂದು ಮಾತ್ರ ಹೊರತು ಮತ್ತಾವ ಮೋಡಿಯೂ ಭಾರತೀಯ ನಾರಿಯರ ಕಲ್ಪನಾಶಕ್ತಿಯ ಹೊರಗೆ ಉಳಿದಂತಿಲ್ಲ. ವಯಸ್ಸಿಗೆ ಸರಿಯಾದ ತುರುಬು, ತುರುಬಿಗೆ ಒಪ್ಪುವಂತೆ ಹೂವನ್ನುಹೆಣೆಯುವ ಕಲೆ, ಹೂವಿನ ಸ್ವಭಾವಕ್ಕೆ ಸರಿಯಾದ ತುರುಬಿನ ವಿನ್ಯಾಸ ಇವು ಇಂದಿಗೂ ನಮ್ಮ ಹಳ್ಳಿಗಳಲ್ಲಿ ಸಹಜವಾದ ಸ್ತ್ರೀವಿದ್ಯೆಗಳಾಗಿವೆ. ಪೇಟೆಯ ರಮಣಿಯರು ಅವರಿಂದ ಕಲಿಯಬೇಕಾದದ್ದು ಬಹಳ ಇದೆ.

**ಚಿತ್ರಗಳು :** ಪುಟ ೩೨ರಲ್ಲಿದ್ದುದು ಅಜಂತಾದ ಒಂದು ಚಿತ್ರದ ಕೇಶಕಲಾಪ; ಪುಟ ೩೩ ರಲ್ಲಿ ಒಂದನೇ ಮತ್ತು ಮೂರನೇ ಚಿತ್ರಗಳು ೬ನೇ ಶತಮಾನದ ಕೇಶವಿಧಾನಗಳು; ಪುಟ ೩೩ ಮಧ್ಯದ್ದು ಓಡಿಸಾದಲ್ಲಿ ದೊರೆತ ಒಂದು ಪುರಾತನ ಶಿಲ್ಪದ ಪ್ರತಿಕೃತಿ; ಪುಟ ೩೪ರಲ್ಲಿ ಮೇಲ್ಭಾಗದ್ದು ಗುಪ್ತ ಕಾಲದ ಒಂದು ಕೇಶವಿನ್ಯಾಸದ ಮಾದರಿ; ಕೆಳಭಾಗದ್ದು ೫ನೆ ಶತಮಾನದ ಒಂದು ಮಣ್ಣಿನ ಪಾರ್ವತಿ ಪ್ರತಿಮೆಯ ಪ್ರತಿಕೃತಿ.

# ವಿವಾಹ ವಿಚ್ಛೇದ ಬೇಕೆ?— ಸಾನ್ ಮೆರಿನೋಕ್ಕೆ ಹೋಗಿ!

**ಪ್ರಪಂಚದ ಅತಿ ಪುರಾತನ ಪ್ರಜಾರಾಜ್ಯ ಕೇವಲ ೩೮ ಚದರ ಮೈಲು ವಿಸ್ತಾರವಾಗಿದೆ**

ಸಾನ್ ಮೆರಿನೋ ಇಟಲಿಯ ಗಡಿಯಲ್ಲಿಯ ಒಂದು ಸ್ವತಂತ್ರ ರಾಷ್ಟ್ರ. ಯಾರು ಬೇಕಾದರೂ ಅಲ್ಲಿಗೆ ಹೋಗಬಹುದು. ಪಾಸ್‌ಪೋರ್ಟ್ ಪಡೆಯುವ ಅಗತ್ಯವಿಲ್ಲ. ಗಡಿಯಲ್ಲಿ ನಿಮ್ಮನ್ನು ತಡೆದು ನೂರೆಂಟು ಪ್ರಶ್ನೆ ಕೇಳುವ ಕಾವಲುಗಾರರು, ಸುಂಕ ವಸೂಲಮಾಡುವ ಅಧಿಕಾರಿಗಳು ಇಲ್ಲ. ಗಡಿಯಲ್ಲಿ ಕಾಲಿಟ್ಟೊಡನೆ ''ಸ್ವಾತಂತ್ರ್ಯದ ಪುರಾತನ ದೇಶ'' ಎಂಬ ದೊಡ್ಡ ಹಲಗೆ ನಿಮ್ಮನ್ನು ಸ್ವಾಗತಿಸುತ್ತದೆ.

ಜಗತ್ತಿನಲ್ಲಿ ಅತಿ ಚಿಕ್ಕ ಮತ್ತು ಪ್ರಾಚೀನ ರಾಜ್ಯ ಎಂದು ಸಾನ್ ಮೆರಿನೋ ಪ್ರಖ್ಯಾತವಾಗಿದೆ. ೧೬೦೦ ವರ್ಷಗಳಿಂದಲೂ ಅಸ್ತಿತ್ವದಲ್ಲಿರುವದರಿಂದ ಇದು ತೀರ ಹಳೆಯ ರಾಜ್ಯ ಎನ್ನುವುದರಲ್ಲೇನೂ ತಪ್ಪಿಲ್ಲ. ಆದರೆ ಅತಿ ಚಿಕ್ಕದು ಎನ್ನುವದು ಸರಿಯಲ್ಲ. ಆಂಡೋರಾ ರಾಜ್ಯಕ್ಕಿಂತ ಇಲ್ಲಿ ಇಮ್ಮಡಿ ಜನಸಂಖ್ಯೆ ಇದೆ. ವಿಸ್ತಾರ ನೋಡಿದರೆ ೩೬೦ ಎಕರೆ ಪ್ರದೇಶದ ರಾಜ್ಯವಾಗಿರುವ "ಮೊನಾಕೊ"ದ ಎದುರು ೩೮ ಚದರ ಮೈಲು ವಿಸ್ತೀರ್ಣವಾಗಿರುವ ಸಾನ್ ಮೆರಿನೋ ಖಂಡಿತವಾಗಿಯೂ ಮಹಾರಾಷ್ಟ್ರವೆನ್ನಬೇಕು.

ಇತಿಹಾಸ ಮತ್ತು ದಂತಕಥೆಗಳು ಮಾರಿನಸ್ ಎಂಬಾತ ಮರಣ ದಂಡನೆ ತಪ್ಪಿಸಿಕೊಳ್ಳಲೆಂದು ಮೌಂಟ ಟಿಟಾನೊಕ್ಕೆ ಬಂದನೆಂದೂ ಅವನೇ ಈ ಪ್ರಜಾರಾಜ್ಯವನ್ನು ಸ್ಥಾಪಿಸಿದನೆಂದೂ ಹೇಳುತ್ತವೆ. ೧೩ ನೆಯ ಶತಮಾನದಿಂದಲೂ ಇರುವ ಲಿಖಿತ ಶಾಸನಗಳಿಗನುಗುಣವಾಗಿ ಈ ಪ್ರಜಾರಾಜ್ಯದ ಆಡಳಿತ ನಡೆಯುತ್ತದೆ. ಅಲ್ಲಿ ಪ್ರಕಟವಾಗುವ ಎಲ್ಲ ಹಸ್ತ ಪತ್ರಿಕೆಗಳು, ಪ್ರವಾಸ ಗೈಡುಗಳು ಮುಂತಾದವುಗಳಲ್ಲೆಲ್ಲ "ಸಾನ್ ಮೆರಿನೋ ಆಂತರಿಕ ಹಾಗೂ ವಿದೇಶ ವ್ಯವಹಾರಗಳಲ್ಲಿ ಸಾರ್ವಭೌಮಾಧಿಕಾರವಿರುವ ರಾಜ್ಯ, ಅದಕ್ಕೆ ಅಮೇರಿಕೆ ಅಥವಾ ಚೀನದಷ್ಟೆ ಅಂತಾರಾಷ್ಟ್ರೀಯ ಹಕ್ಕುಗಳಿವೆ" ಎಂದು ಹೇಳಲಾಗುತ್ತಿದೆ. ಸಾನ್ ಮೆರಿನೋ ರಾಜ್ಯದ ಪ್ರಜಾಸಂಖ್ಯೆ ೧೩,೫೦೦. ಇದಕ್ಕೆ ಹತ್ತು, ನೂರು ಪಟ್ಟು ಅಧಿಕ ಜನಸಂಖ್ಯೆಯಿರುವ ಪಟ್ಟಣಗಳು ಎಷ್ಟೋ ಇವೆ. ಆದರೆ ಅವು ಕನಸಿನಲ್ಲಿಯೂ ವಿದೇಶಗಳಿಗೆ ತಮ್ಮ ರಾಯಭಾರಿಯನ್ನು ಕಳಿಸುವ ಯೋಚನೆ ಮಾಡಲಾರವು. ಆದರೆ, ಹಣವೊಂದು ಒದಗಿದರೆ ಸಾನ್ ಮೆರಿನೋ ತನ್ನ ರಾಯಭಾರಿಯನ್ನು ಯಾವ ದೇಶಕ್ಕೆ ಬೇಕೆಂದರೆ ಆ ದೇಶಕ್ಕೆ ಕಳಿಸಬಲ್ಲದು. ಹಣ ಒದಗದ್ದೇ ಒಂದು ಅಡಚಣೆ ಈ ವರೆಗೆ.

ಮದ್ಯ, ಬೇಳೆಕಾಳು, ಗಿಣ್ಣ, ದನಕರು, ಓಲಿವ್ ಎಣ್ಣೆ, ಸುಣ್ಣ—ಇವು ಸಾನ್ ಮೆರಿನೋದ

ವಿವಿಧ ಮೂಲಗಳಿಂದ

ಮುಖ್ಯ ಉದ್ದಿಮೆಗಳು ಎಂದು ರಾಜ್ಯಪರಿಚಯದ ಪುಸ್ತಕದಲ್ಲಿದ್ದರೂ ಅಂಚೆ ತಿಕೀಟುಗಳು, ವಿವಾಹ ವಿಚ್ಛೇದ, ಜೂಜು ಮತ್ತು ವಿದೇಶೀ ಪ್ರವಾಸಿಕರು ಇವೇ ಅದರ ಮುಖ್ಯ ಉದ್ದಿಮೆಗಳಾಗಿವೆಯೆಂದರೆ ಸತ್ಯಕ್ಕೆ ಹತ್ತಿರವಾಗುತ್ತದೆ.

ವಿದೇಶೀ ಪ್ರವಾಸಿಕರ ಆಗಮನ ಒಂದು ಉದ್ದಿಮೆಯ ಸ್ವರೂಪ ತಾಳಿದ್ದು ದ್ವಿತೀಯ ಮಹಾಯುದ್ಧದ ನಂತರವೇ. ೧೯೩೮ರ ಮೊದಲು ಸಾನ್ ಮೆರಿನೋಕ್ಕೆ ಬರುವ ವಿಚಾರವನ್ನು ಸಾಮಾನ್ಯವಾಗಿ ಯಾರೂ ಮಾಡುತ್ತಿರಲಿಲ್ಲ. ಮಹಾಯುದ್ಧದ ನಂತರ ವಿದೇಶೀ ಪ್ರವಾಸಿಕರ ಸಂಖ್ಯೆ ಕಲ್ಪನಾತೀತವಾಗಿ ಹೆಚ್ಚಿತು. ಸಾನ್ ಮೆರಿನೋದ ಒಬ್ಬ ಅಧಿಕಾರಿ ಈ ವಿಷಯದಲ್ಲಿ "೧೯೪೯ ರಲ್ಲಿ ೭೪,೫೦೦ ಜನ ಪ್ರವಾಸಿಕರು ನಮ್ಮ ದೇಶಕ್ಕೆ ಬಂದರು. ೧೯೫೦ ರಲ್ಲಿ ೬೧,೦೦೦ ಜನ ಮಾತ್ರ ಬಂದರು. ೧೯೫೧ ರಲ್ಲಿ ದಿಗ್ಬಂಧನವು ಅತಿ ಬಿಗಿಯಾಗಿದ್ದರಿಂದ ಕೆಲವೇ ಜನ ಮಾತ್ರ ಬಂದರು. ಆದರೆ ೧೯೫೨ ರಲ್ಲಿ ೧,೬೬,೦೦೦, ೫೩ ರಲ್ಲಿ ೩,೧೫,೦೦೦, ೫೪ ರಲ್ಲಿ ೬,೦೦,೦೦೦ ಕಿಂತ ಹೆಚ್ಚು ಜನ ಬಂದರು. ಒಂದೇ ಒಂದು ರಾತ್ರಿಯನ್ನಾದರೂ ಇಲ್ಲಿ ಕಳೆಯುವ ಜನರ ಹೆಸರುಗಳಷ್ಟೇ ದಾಖಲೆಯಲ್ಲಿ ಸಿಗುವವು. ಮುಂಜಾನೆ ಬಂದು ಸಂಜೆಗೆ ಮರಳುವವರ ಸಂಖ್ಯೆ ೨,೦೦,೦೦೦ ದಷ್ಟಾದರೂ ಇರಬೇಕು. ಅಂದರೆ ೧೯೫೪ ರಲ್ಲಿ ೮,೦೦,೦೦೦ ದಷ್ಟು ಜನ ಬಂದಿರಬೇಕು. ಈ ವರ್ಷ ೧೦ ಲಕ್ಷ ಪ್ರವಾಸಿಕರಾದರೂ ಬರುತ್ತಾರೆ ಎಂದು ಅಂದಾಜಿದೆ" ಎಂದು ಹೇಳಿದ್ದನು.

ಸಾನ್ ಮೆರಿನೋಕ್ಕೆ ಬರುವವರಲ್ಲಿ ಹೆಚ್ಚಿನವರು ಇಟಾಲಿಯನ್ನರು. ಜರ್ಮನಿ, ಸ್ವಿಝರ್ಲಂಡ, ಆಸ್ಟ್ರಿಯಾಗಳಿಂದಲೂ ಬಹಳ ಜನ ಬರುತ್ತಾರೆ. ಇಂಗ್ಲಂಡ್ ಮತ್ತು ಅಮೇರಿಕೆಯ ಜನ ಹೇಳಿಕೊಳ್ಳುವಷ್ಟು ಬರುತ್ತಿಲ್ಲ.

೧೯೫೧ ರಲ್ಲಿ ದಿಗ್ಬಂಧನ ಬಿಗಿಯಾಗಿತ್ತು ಎಂದರೆ ಏನು? ಎಂಬ ವಿಚಾರ ಓದುಗರಿಗೆ ಬರುವದು ಸಹಜ. ೧೯೪೯ ರಲ್ಲಿ ತನ್ನ ಉತ್ಪನ್ನವನ್ನು ಹೆಚ್ಚಿಸಿಕೊಳ್ಳುವದಕ್ಕಾಗಿ ಸಾನ್ ಮೆರಿನೋ ಸರಕಾರವು ಒಂದು "ದ್ಯೂತಗೃಹ" ಪ್ರಾರಂಭಿಸಿತು. ಇಟಲಿಯ ರಿಮಿನಿ, ರೆವೆನ್ನಾ ಮೊದಲಾದ ನಗರಗಳಿಂದ ಅಸಂಖ್ಯ ಜನರು ಬಂದು ಇಲ್ಲಿ ಜೂಜಾಡಿ ಹಣ ಕಳೆದುಕೊಳ್ಳತೊಡಗಿದರು. ತಮ್ಮ ಜನರ ಕಷ್ಟಾರ್ಜಿತ ಸಂಪಾದನೆಯು ಈ ರೀತಿ ಸುಲಿಯಲ್ಪಡುವದನ್ನು ಸಹಿಸದೆ ಇಟಲಿ ಸರಕಾರ ಈ ದ್ಯೂತಗೃಹ ಮುಚ್ಚಲು ಸಾನ್ ಮೆರಿನೋ ಸರಕಾರವನ್ನು ಕೇಳಿಕೊಂಡಿತು. ಪುರಾತನ ಸ್ವತಂತ್ರ ರಾಜ್ಯವಾದ ಸಾನ್ ಮೆರಿನೋ ಇಟಲಿ ಸರಕಾರದ ಬೇಡಿಕೆಯನ್ನು ನಿರಾಕರಿಸಿದ್ದರಿಂದ ಇಟಲಿಯ ಪೋಲೀಸರು ಸಾನ್ ಮೆರಿನೋ ಗಡಿಯಲ್ಲಿ ಕಾವಲು ನಿಂತು ತಮ್ಮವರಾರೂ ಅಲ್ಲಿಗೆ ಹೋಗದಂತೆ ಪ್ರತಿಬಂಧಿಸಿದರು. ಸಾನ್ ಮೆರಿನೋ ಪ್ರಜಾರಾಜ್ಯವು ನಿರುಪಾಯವಾಗಿ ಜೂಜಿನ ಕಟ್ಟೆಯನ್ನು ಮುಚ್ಚಬೇಕಾಯಿತು.

ಆದರೆ ಈ ದ್ಯೂತಗೃಹವೇ ವಿದೇಶೀ ಪ್ರವಾಸಿಕರು ಸಾನ್ ಮೆರಿನೋಕ್ಕೆ ಬರುವಂತೆ ಮೊದಲು ಪ್ರೇರಿಸಿದ್ದು.

ಪ್ರವಾಸಿಕರನ್ನು ಆಕರ್ಷಿಸಲು ಮತ್ತೊಂದು ಗತ್ತು ಹೂಡಲಾಯಿತು. ಸಾನ್ ಮೆರಿನೋ ತನ್ನ ನ್ಯಾಯಾಲಯಗಳಲ್ಲಿ ಸುಲಭದಲ್ಲಿ ವಿವಾಹ ವಿಚ್ಛೇದ ಪಡೆಯಬಹುದು ಎಂಬ ಪ್ರಚಾರ ಮಾಡತೊಡಗಿತು. ಒಂದಿಷ್ಟು ಹಣ ಕೊಟ್ಟರೆ ಇಲ್ಲಿ ವಿವಾಹ ವಿಚ್ಛೇದ ಪಡೆಯುವದು ಅತಿ ಸುಲಭವಾಗಿತ್ತು. ಇಟಲಿಯಲ್ಲಿ ವಿವಾಹ ವಿಚ್ಛೇದಕ್ಕೆ ಅನುಮತಿ ಇಲ್ಲವಾದ್ದರಿಂದ ಇಟಾಲಿಯನ್ನರಿಗೆ ಸಾನ ಮೆರಿನೋದ ಈ ಉದ್ದಿಮೆ ಕೂಡ ಆಕರ್ಷಕವೆನಿಸಿತು.

ವಿವಾಹ ವಿಚ್ಛೇದ ಪಡೆಯುವದು ಸಾನ್ ಮೆರಿನೋದ ಪ್ರಜೆಗಳಿಗೆ ಮಾತ್ರ ಸಾಧ್ಯವಿತ್ತು ಎಂದು ಕಾಯ್ದೆಯಿದೆ ನಿಜ. ಆದರೆ ಒಂದು ತಿಂಗಳ ಕಾಲ ವಾಸ ಮಾಡಿದವರೆಲ್ಲರೂ ಸಾನ್ ಮೆರಿನೋದ ನಾಗರಿಕರೆನಿಸಿಕೊಳ್ಳಬಹುದಾಗಿತ್ತು. ಇಟಲಿಯ ಸರಕಾರ ಈ ವಿಚಾರದಲ್ಲೂ ಕೈಹಾಕಿತು. ಸಾನ್ ಮೆರಿನೋದಲ್ಲಿ ಪಡೆದ ವಿವಾಹ ವಿಚ್ಛೇದಕ್ಕೆ ಇಟಲಿಯಲ್ಲಿ ಈಗಲೂ ಮನ್ನಣೆ ಸಿಗುತ್ತದೆ. ಆದರೆ

ಸಾನ್ ಮೆರಿನೋ ನಾಗರಿಕತ್ವ ಪಡೆಯಲು ಈಗ ಅಲ್ಲಿ ಒಂದು ವರ್ಷವಾದರೂ ವಾಸಿಸಬೇಕಾಗುತ್ತದೆ.

ಇಟಲಿಗೂ ಸಾನ್ ಮೆರಿನೋಕ್ಕೂ ಆದ ಒಂದು ಒಪ್ಪಂದದ ಪ್ರಕಾರ ಇಟಲಿ ಪ್ರತಿ ವರ್ಷ ಸಾನ್ ಮೆರಿನೋಕ್ಕೆ ೯೦,೦೦೦ ಪೌಂಡುಗಳನ್ನು ಕೊಡುತ್ತದೆ. ಇದಕ್ಕೆ ಪ್ರತಿಯಾಗಿ ಸಾನ್ ಮೆರಿನೋ ತನ್ನ ಸ್ವಂತ ಹಣವನ್ನು ಮುದ್ರಿಸುವ, ತಂಬಾಕು ಬೆಳೆಯುವ, ಮದ್ಯ ತಯಾರಿಸುವ ಮತ್ತು ಯಾವದೇ ಬಗೆಯ ಕರಹಾಕುವ ಅಧಿಕಾರವನ್ನು ಬಿಟ್ಟುಕೊಟ್ಟಿದೆ. ಆದರೆ ಅದಕ್ಕೆ ತನ್ನದೇ ಆದ ಅಂಚೆ ತಿಕೀಟುಗಳನ್ನು ಮುದ್ರಿಸುವ ಹಕ್ಕಿದೆ. ಪ್ರತಿ ತಿಂಗಳೂ ಸುಂದರವಾದ ಅಂಚೆ ತಿಕೀಟುಗಳು ಮುದ್ರಿಸಲ್ಪಡುತ್ತವೆ. ಅಂಚೆ ತಿಕೀಟುಗಳನ್ನು ಸಂಗ್ರಹಿಸುವವರು ಇವುಗಳಿಗಾಗಿ ಮುಗಿಬೀಳುತ್ತಾರೆ.

ಸಾನ್ ಮೆರಿನೋ ರಾಜ್ಯದಲ್ಲಿ ೭೦ ಅಂಗಡಿಗಳೂ ೧೧ ಫಲಾಹಾರ ಮಂದಿರಗಳೂ ಇವೆ. ೧೮೬೧ ರಲ್ಲಿ ಅಮೇರಿಕೆಯ ಅಧ್ಯಕ್ಷ ಲಿಂಕನ್ನರು "ನಿಮ್ಮ ರಾಜ್ಯ ಚಿಕ್ಕದಾಗಿದ್ದರೂ ಇತಿಹಾಸದಲ್ಲಿ ಗೌರವದಿಂದ ಉಲ್ಲೇಖಿಸಲ್ಪಡುವ ರಾಷ್ಟ್ರಗಳಲ್ಲಿ ಅದೊಂದಾಗಿದೆ" ಎಂದು ಸಾನ್ ಮೆರಿನೋದ ಸರಕಾರಕ್ಕೆ ತಿಳಿಸಿದ್ದರು. ಅಧ್ಯಕ್ಷ ರೂಜವೆಲ್ಟರೂ ಸಾನ್ ಮೆರಿನೋದ ಬಗ್ಗೆ ಗೌರವದ ಮಾತುಗಳನ್ನಾಡಿರುವರು. ರಾಜಕೀಯ ನಿರ್ವಾಸಿತರಿಗೆ ಆಶ್ರಯ ವೀಯುವದರಲ್ಲಿ ಸಾನ್ ಮೆರಿನೋ ಹೆಸರುವಾಸಿಯಾಗಿದೆ. ಕಳೆದ ಮಹಾಯುದ್ಧ ಕಾಲದಲ್ಲಿ ಮತ್ತು ಅದು ಮುಗಿದ ನಂತರ ಒಟ್ಟು ಏನಿಲ್ಲೆಂದರೂ ಒಂದು ಲಕ್ಷ ರಾಜಕೀಯ ನಿರ್ವಾಸಿತರು ಈ ರಾಜ್ಯದಲ್ಲಿ ಹಾಯ್ದು ಹೋದರು.

ಸಾನ್ ಮೆರಿನೋದಲ್ಲಿ ಒಂದೂ ದಿನಪತ್ರಿಕೆಯಿಲ್ಲ; ಮೂರೋ ನಾಲ್ಕೋ ವಾರಪತ್ರಿಕೆಗಳಿವೆ. ೨೦೦ ಸೈನಿಕರಿರುವ ಸೈನ್ಯವಿದೆ. ಇವರೂ ಅರೆಹೊತ್ತಿನ ಸೈನಿಕರು. ೧೬ ರಿಂದ ೫೫ ವರ್ಷದೊಳಗಿನ ಪ್ರತಿಯೊಬ್ಬ ಗಂಡಸೂ ಸೈನ್ಯದಲ್ಲಿ ಕೆಲಸ ಮಾಡಬೇಕು ಎಂಬ ನಿರ್ಬಂಧವಿದೆ. ಎಲ್ಲ ಉದ್ಯೋಗಗಳನ್ನು ಬಿಟ್ಟು ಸೈನಿಕ ವೃತ್ತಿಯನ್ನು ಮಾತ್ರ ಕೈಕೊಳ್ಳಬೇಕೆಂಬ ಕರೆ ಬರುವದು ತೀರ ಅಪರೂಪ. ೧೯೪೪ರಲ್ಲಿ ಜಾಗತಿಕ ಯುದ್ಧ ಅತ್ಯಂತ ಪ್ರಬಲವಾಗಿದ್ದಾಗ ಸಾನ್ ಮೆರಿನೋ ತನ್ನ ಸೈನ್ಯ ಬಲವನ್ನು ಹೆಚ್ಚಿಸಿತು. ಅಂದರೆ ಆಗ ೨೦೦ ಬದಲು ೨೮೦ ಜನರು ಅದರ ಸೈನ್ಯದಲ್ಲಿದ್ದರು !

ಇಲ್ಲಿ ೧೪ ಜನ ಪೋಲೀಸರಿದ್ದಾರೆ. ೬ ಜನ ಗುಪ್ತ ಪೋಲೀಸರಿದ್ದಾರೆ. ಈ ಗುಪ್ತ ಪೋಲೀಸರ ಪರಿಚಯ ರಾಜ್ಯದ ಪ್ರತಿಯೊಬ್ಬರಿಗೂ ಇದೆ. ಆದರೂ ಅವರು ಜನಪ್ರಿಯರೇ ಆಗಿದ್ದಾರೆ.

೧೯೫೬ರಲ್ಲಿ ಸಾನ್ ಮೆರಿನೋದಲ್ಲಿ ಸೊಶಾಲಿಸ್ಟ-ಕಮ್ಯುನಿಸ್ಟ ಸಮ್ಮಿಶ್ರ ಸರಕಾರ ಅಧಿಕಾರಕ್ಕೆ ಬಂತು. ದ್ಯೂತಗೃಹವನ್ನು ಹಿಂದೆ ಇಟಲಿ ಮುಚ್ಚಿಸಿದಾಗ ಕ್ರಿಶ್ಚನ್ ಡೆಮೊಕ್ರಾಟ್ ಪಕ್ಷದವರು ಇಟಲಿಯನ್ನು ಬೆಂಬಲಿಸಿ ಸಾನ್ ಮೆರಿನೋ ಸರಕಾರಕ್ಕೆ ದ್ರೋಹ ಮಾಡಿದರು ಎಂದು ಜನ ತಿಳಿದುಕೊಂಡಿರುವದೇ ಈ ಸರಕಾರ ಅಧಿಕಾರಕ್ಕೆ ಬರಲು ಕಾರಣವಾಯಿತು. ೧೯೫೫ ರಲ್ಲಿ ಚುನಾವಣೆ ನಡೆದಾಗ ಕಮ್ಯುನಿಸ್ಟರನ್ನು ಸೋಲಿಸಲು ಅಮೇರಿಕೆ ಮತ್ತು ಬೆಲ್ಜಿಯಂಗಳಲ್ಲಿರುವ ಸಾನ್ ಮೆರಿನೋ ಜನರನ್ನು ಮತದಾನಕ್ಕಾಗಿ ಕರೆಸಿಕೊಳ್ಳುವ ವಿಚಾರವನ್ನು ಕ್ರಿಶ್ಚನ್ ಡೆಮೊಕ್ರಾಟ್ ಪಕ್ಷದಲ್ಲಿ ಒಬ್ಬರು ಮಾಡಿದರು. ಫ್ರಾನ್ಸ ಮತ್ತು ಬೆಲ್ಜಿಯಂಗಳಿಂದ ೩೦ ಮತ್ತು ಡಿಟ್ರಾಯಿಟ್‌ದಿಂದ ೬೦ ಜನರು ಮತದಾನಕ್ಕಾಗಿ ಬಂದರು. ಆದರೆ ಅವರೆಲ್ಲ ವಿರುದ್ಧ ಮತವಿತ್ತದ್ದರಿಂದ ಸಮಾಜವಾದಿ-ಕಮ್ಯುನಿಸ್ಟರಿಗೆ ಮತ್ತಷ್ಟು ಸ್ಥಳಗಳು ದೊರೆತವು. ಕ್ರಿಶ್ಚನ್ ಡೆಮೊಕ್ರಾಟರಿಗಿಂತಲೂ ಸೋಶಾಲಿಸ್ಟರು ಮತ್ತು ಕಮ್ಯುನಿಸ್ಟರು ಹೆಚ್ಚು ದಕ್ಷತೆಯಿಂದ ತಮ್ಮ ಪ್ರಾಚೀನ ಸಂವಿಧಾನ ಮತ್ತು ಹಕ್ಕುಬಾಧ್ಯತೆಗಳ ರಕ್ಷಣೆ ಮಾಡಬಹುದು, ಎಂದು ಜನ ಭಾವಿಸಿದೆ.

ಸಾನ್ ಮೆರಿನೋದ ಇಂದಿನ ಸ್ವಾತಂತ್ರ್ಯವು ೧೯೫೩,ಎಪ್ರಿಲ್ ೨೯ ರಂದು ಇಟಲಿಯೊಡನೆ

ಮಾಡಿಕೊಂಡ ಒಂದು ಒಪ್ಪಂದದಿಂದ ಭದ್ರವಾಗಿದೆ.

ಜನರಿಂದ ಚುನಾಯಿತರಾದ ೬೦ ಸದಸ್ಯರ ಮಂಡಳವೊಂದು ಸಾನ್ ಮೆರಿನೋವನ್ನು ಆಳುತ್ತದೆ. ಇವರಲ್ಲಿ ಇಬ್ಬರು ಆರು ತಿಂಗಳಗಳ ವರೆಗೆ ರೀಜಂಟರೆಂದು ಆಯ್ಕೆಹೊಂದುತ್ತಾರೆ. ಮುಂದೆ ಇವರು ಮೂರು ವರ್ಷಗಳ ವರೆಗೆ ಅಧಿಕಾರ ಸ್ಥಾನಕ್ಕೆ ಬರುವಂತಿಲ್ಲ.

ಚುನಾವಣೆ ಪ್ರತಿ ನಾಲ್ಕು ವರ್ಷಕ್ಕೊಮ್ಮೆ ನಡೆಯುತ್ತದೆ. ವಯಸ್ಕ ಗಂಡಸರೆಲ್ಲರಿಗೆ ಮತಾಧಿಕಾರವಿದೆ. ಸ್ತ್ರೀಯರಿಗೆ ಮತಾಧಿಕಾರ ಬೇಕೆಂದು ಕ್ಯಾಥೋಲಿಕರು ಹೇಳುತ್ತಾರೆ. ವಿಚಿತ್ರವೆಂದರೆ, ಕಮ್ಯುನಿಸ್ಟರು ಮತ್ತು ಸೋಶಾಲಿಸ್ಟರು ಅದನ್ನು ವಿರೋಧಿಸುತ್ತಿದ್ದಾರೆ! ಮತದಾರರಲ್ಲಿ ಅರ್ಧಕ್ಕರ್ಧ ಜನ ರಾಜ್ಯದ ಹೊರಗೆ ದುಡಿಯಲು ಹೋಗಿರುತ್ತಾರಾದರೂ ಅವರಲ್ಲಿ ಬಹಳಷ್ಟು ಜನ ಚುನಾವಣೆಗಾಗಿ ಮರಳಿ ಬರುತ್ತಾರೆ.

ನೀವು ಬ್ರಿಟಿಶರಾಗಿದ್ದು ಸಾನ್ ಮೆರಿನೋಕ್ಕೆ ಹೋದರೆ ಅಲ್ಲಿಯ ಜನರು ಮೊದಲು "ನೀವು ಕೊಡಬೇಕಾಗಿರುವ ೪ ಲಕ್ಷ ಪೌಂಡುಗಳ ಸಾಲದ ವಿಚಾರ ಏನಾಯಿತು"? ಎಂದು ಕೇಳಿಯೇ ತೀರುತ್ತಾರೆ. ೧೯೪೪ರಲ್ಲಿ ಹಿಂದಕ್ಕೆ ಸರಿಯುತ್ತಿದ್ದ ಜರ್ಮನ್ ಸೈನಿಕರು ಸಾನ್ ಮೆರಿನೋದಲ್ಲಿ ಆಶ್ರಯ ಪಡೆದಾಗ ಬ್ರಿಟಿಶರು ಅವರ ಮೇಲೆ ಬಾಂಬ ದಾಳಿಯನ್ನು ಮಾಡಬೇಕಾಯಿತು. ಆಗ ಸಾನ್ ಮೆರಿನೋದ ಬಹಳಷ್ಟು ಆಸ್ತಿ-ಪಾಸ್ತಿಯೂ ನಷ್ಟವಾಯಿತು. ಸಾನ್ ಮೆರಿನೋ ಇದಕ್ಕಾಗಿ ೪ ಲಕ್ಷ ಪೌಂಡುಗಳನ್ನು ಪರಿಹಾರವಾಗಿ ಕೊಡಬೇಕೆಂದು ಕೇಳಿತು.






ಬ್ರಿಟಿಶರು ತಮ್ಮ ಮೇಲೆ ಯಾವ ಹೊಣೆಯೂ ಇಲ್ಲವೆಂದು ಈ ಬೇಡಿಕೆಯನ್ನು ನಿರಾಕರಿಸಿದರೂ ೨೬,೦೦೦ ಪೌಂಡುಗಳನ್ನು ಕೊಡಲು ಒಪ್ಪಿಕೊಂಡರು. ಸಾನ್ ಮೆರಿನೋ ಇದಕ್ಕೊಪ್ಪಲಿಲ್ಲ.

ಈ ಪ್ರಶ್ನೆ ಇನ್ನೂ ಬಗೆಹರಿದಿಲ್ಲವಾದ್ದರಿಂದ ಸಾನ್ ಮೆರಿನೋದ ಪ್ರತಿಯೊಬ್ಬನೂ ಬ್ರಿಟಿಶರನ್ನು ಕಂಡೊಡನೆ "ನೀವು ನಮಗೆ ೪ ಲಕ್ಷ ಪೌಂಡುಗಳನ್ನು ಕೊಡಬೇಕಾಗಿದೆಯೆಂಬುದು ನಿಮಗೆ ಗೊತ್ತಿದೆಯಷ್ಟೇ?" ಎನ್ನುತ್ತಾನೆ.

## ನನಗೂ ತಂಗಿಯೆ

ಒಬ್ಬ ಸೈನಿಕ ತನ್ನ ಗೆಳತಿಯೊಡನೆ ಅಡ್ಡಾಡುತ್ತಿದ್ದಾಗ ಅಕಸ್ಮಾತ್ತಾಗಿ ಸಾರ್ಜೆಂಟನು ನೋಡಿಬಿಟ್ಟನು.

"ಇವಳು ನನ್ನ ತಂಗಿ" ಎಂದು ಸೈನಿಕ ನಮ್ರವಾಗಿ ಹೇಳಿದ.

"ನಿಜ, ನಿಜ, ಹಿಂದೊಮ್ಮೆ ಇವಳು ನನ್ನ ತಂಗಿಯೂ ಆಗಿದ್ದಳು" ಎಂದ ಆ ಸಾರ್ಜೆಂಟ್ ಮಹಾಶಯ.

—ಸುಪ್ರಭಾತ

ಡಾ. ಎಸ್. ಬಿ. ಕೊಡಗಲಿ



# ದನಗಳಲ್ಲಿ ಕೃತ್ರಿಮ ಗರ್ಭಧಾರಣೆ

**ಪಶುಪಾಲನೆಯಲ್ಲಿ
ಕ್ರಾಂತಿ ಮಾಡಿದ ಶೋಧ**

ಭಾರತದಲ್ಲೆಲ್ಲ ಇಂದು ಪ್ರತಿ ವರ್ಷ ಸಾವಿರ ಗಟ್ಟಲೆ ದನಗಳು ಹೋರಿಯ ಪ್ರತ್ಯಕ್ಷ ಸಂಪರ್ಕವಿಲ್ಲದೆ ಗರ್ಭಧರಿಸಿ ಉತ್ತಮ ಜಾತಿಯ ಕರುಗಳನ್ನು ಈಯುತ್ತವೆ. "ಕೃತಕ ಗರ್ಭಧಾರಣ ಪದ್ಧತಿ"ಯು ಇದನ್ನು ಸಾಧ್ಯವಾಗಿ ಮಾಡಿಕೊಟ್ಟಿದೆ. ದನಗಳನ್ನು ಸಾಕುವವರೆಲ್ಲ ಹೋರಿಯನ್ನೂ ಸಾಕಬೇಕಾದ ದಿನಗಳು ಇಂದು ಉಳಿದಿಲ್ಲ. ನಿಮ್ಮ ಊರಿನಲ್ಲಿ ಇಲ್ಲದಿರುವ ಜಾತಿ ಹೋರಿಗಳ ಬೀಜಗಳಿಂದ ಕೂಡ ನಿಮ್ಮ ದನಕ್ಕೆ ಗರ್ಭನಿಂತು ಉತ್ತಮ ಕರುಗಳು ಹುಟ್ಟುವದು ಶಕ್ಯವಾಗಿದೆ.

ಪಶುಪಾಲನ ವ್ಯವಸಾಯದಲ್ಲಿ ಒಂದು ಚಿಕ್ಕ ಕ್ರಾಂತಿಯನ್ನೇ ಮಾಡಿದ "ಕೃತಕ ಗರ್ಭಧಾರಣ ಪದ್ಧತಿ" ಎಂದರೆ, ಹೋರಿಯ ವೀರ್ಯವನ್ನು ತೆಗೆದು ಕಾದಿಟ್ಟು, ಅವಶ್ಯವೆನಿಸಿದಾಗ, ಅವಶ್ಯವೆನಿಸಿದಲ್ಲಿ, ಬೆದೆಗೆ ಬಂದ ದನಗಳ ಗರ್ಭದಲ್ಲಿ ಅದನ್ನು ಸ್ಥಾಪಿಸಿ ಗರ್ಭೋತ್ಪತ್ತಿ ಮಾಡಿಸುವುದು. ತೆಗೆದಿಟ್ಟ ವೀರ್ಯದೊಳಗಿನ ಶುಕ್ರಬೀಜಗಳು ಸಾಯದಂತೆ ಕಾಪಾಡುವುದೂ ಅದನ್ನು ದನದ ಗರ್ಭದಲ್ಲಿ ಸ್ಥಾಪಿಸುವುದೂ ಜಟಿಲ ತಾಂತ್ರಿಕ ಕ್ರಮಗಳಾಗಿರುವುದರಿಂದ ತಜ್ಞರು ಮಾತ್ರವೇ ಅದನ್ನು ಯಶಸ್ವಿಯಾಗಿ ನೆರವೇರಿಸ

---

ಡಾ. ಕೊಡಗಲಿಯವರು ಮುಂಬಯಿ ಸರಕಾರದ ಪಶುವೈದ್ಯ ವಿಭಾಗದಲ್ಲಿದ್ದು ಪುಣೆಯಲ್ಲಿ ಅಸಿ. ಕೃತಿಮ ಗರ್ಭಧಾರಣ ಅಧಿಕಾರಿಗಳಾಗಿದ್ದಾರೆ. ಅವರು ಕನ್ನಡಿಗರ ಅವಗಾಹನೆಗಾಗಿ ಬರೆದು ಕಳಿಸಿದ ವಿಶೇಷ ಲೇಖನವಿದು.

ಬಲ್ಲರು. ಅದಕ್ಕಾಗಿ ದೇಶದಲ್ಲಿ ಅಲ್ಲಲ್ಲಿ ತಜ್ಞರುಳ್ಳ "ಕೃತಕ ಗರ್ಭಧಾರಣ" ಕೇಂದ್ರಗಳನ್ನು ಸರಕಾರ ಸ್ಥಾಪಿಸುತ್ತಿದೆ. ಹಿಂದೆ ಮುಂಬಯಿಯ ಭಾಗವಾಗಿದ್ದ ಕರ್ನಾಟಕ ಜಿಲ್ಲೆಗಳಲ್ಲಿ (ಗೋಕಾಕ ಮತ್ತು ದೇವೀಹೊಸೂರಲ್ಲಿ) ಇಂಥ ಎರಡು ಕೇಂದ್ರಗಳಿವೆ.

ಪ್ರಾಣಿಗಳಲ್ಲಿ ಕೃತಕ ಗರ್ಭಾಧಾನದ ಮೊದಲನೇ ಸಾಹಸ ಮಾಡಿ ಯಶಸ್ವಿಯಾದಾತ ಒಬ್ಬ ಅರಬ. ಕ್ರಿ. ಶ. ೧೩೨೨ ರಲ್ಲಿ ಆತ ತನ್ನ ಶತ್ರುವಿನಲ್ಲಿದ್ದ ಜಾತಿ ಗಂಡು ಕುದುರೆಯ ವೀರ್ಯವನ್ನು ಹೇಗೋ ಕದ್ದು ತಂದು ತನ್ನ ಉತ್ಕೃಷ್ಟ ಹೆಣ್ಣು ಕುದುರೆಯ ಗರ್ಭದಲ್ಲಿ ಅದನ್ನು ಕೃತ್ರಿಮ ಸಂಯೋಗದಿಂದ ಸ್ಥಾಪಿಸಿ ಗರ್ಭವುಂಟಾಗುವಂತೆ ಮಾಡಿದನು. ದ್ರೋಣಾಚಾರ್ಯರ ಜನನದ ಪುರಾಣ ಕಥೆಯಂತಿರುವ ಈ ಅತ್ಯಾಶ್ಚರ್ಯಕರ ವಾರ್ತೆ ಬಲು ಬೇಗನೆ ಹಬ್ಬಿ ವಿಜ್ಞಾನಿಗಳು ಪ್ರಯೋಗಗಳನ್ನು ನಡೆಸಿದರು. ಆದರೆ ಯಶ ದೊರೆಯಬೇಕಾದರೆ ಅವರು ೪೫೦ ಕ್ಕಿಂತಲೂ ಹೆಚ್ಚು ವರ್ಷ ಕಾಯಬೇಕಾಯಿತು. ೧೭ ನೇ ಶತಕದಲ್ಲಿ ಸೂಕ್ಷ್ಮದರ್ಶಕ ಯಂತ್ರ ಸೃಷ್ಟಿಯಾದ ಮೇಲೆ, ಪುರುಷ ವೀರ್ಯದಲ್ಲಿ ಅಸಂಖ್ಯ ಶುಕ್ರ ಬೀಜಾಣುಗಳಿವೆ ಮತ್ತು ಅವುಗಳೇ ಸಂತಾನೋತ್ಪತ್ತಿಗೆ ಕಾರಣವೆಂದು ಸಿದ್ಧವಾಯಿತು. ಅನಂತರ ೧೭೮೦ ರಲ್ಲಿ ಇಟಾಲಿಯನ್ ವಿಜ್ಞಾನಿ ಅಬಟ್ ಸ್ಪಾಲಂಝಾನಿಯು ಶಾಸ್ತ್ರೀಯ ವಿಧಾನದಿಂದ ಭೂ-ಜಲ ಪ್ರಾಣಿಗಳಲ್ಲಿ, ನಾಯಿಗಳಲ್ಲಿ ಕೃತಕ ಗರ್ಭಧಾರಣೆ ಮಾಡಿಸಲು ಶಕ್ತನಾದನು. ೧೮೯೯ ರಲ್ಲಿ ರಶಿಯನ್ ವಿಜ್ಞಾನಿ ಇವನೋವ್ಹನು ದನಗಳಲ್ಲಿಯೂ ಇಂಥ ಪ್ರಯೋಗಗಳನ್ನು ಮಾಡಿ ಯಶಸ್ವಿಯಾದನು.

ದನಗಳಲ್ಲಿ ಕೃತಕ ಗರ್ಭಧಾರಣೆ ಮಾಡಿಸುವ ವಿಧಾನವು ಕೂಡಲೆ ಪಶುಪಾಲನ ವ್ಯವಸಾಯದವರ ಗಮನ ಸೆಳೆದು ಅದರಿಂದಾಗುವ ಲಾಭಗಳನ್ನು ಅವರು ಮನಗಂಡರು. ರಶಿಯದಲ್ಲಿ ದನಗಳ ಕೃತ್ರಿಮ ಗರ್ಭಧಾರಣ ಕೇಂದ್ರಗಳು ಪ್ರಾರಂಭವಾದವು. ೧೯೩೬ರೊಳಗೆ ಇಂಥ ೮,೦೦೦ ಕೇಂದ್ರಗಳು ರಶಿಯದಲ್ಲಿದ್ದವು. ಡೆನ್ಮಾರ್ಕ್, ನ್ಯೂಝೀಲಂಡ್, ಇಂಗ್ಲಂಡ್ ಮೊದಲಾದ ದೇಶಗಳೂ ಇದನ್ನನುಸರಿಸಿದವು. ಭಾರತದಲ್ಲಿಯೂ ಈಚೆಗೆ ಇಂಥ ಕೇಂದ್ರಗಳನ್ನು ಹೆಚ್ಚು ಹೆಚ್ಚಾಗಿ ಪ್ರಾರಂಭಿಸಲಾಗುತ್ತಿದೆ.

ನೈಸರ್ಗಿಕವಾಗಿ ಪಶುಗಳು ಗರ್ಭಧರಿಸುವುದಿಲ್ಲವೆ? ಮತ್ತೇಕೆ ಕೃತ್ರಿಮ ಗರ್ಭಧಾರಣೆ? ಎಂಬ ಪ್ರಶ್ನೆ ಉದ್ಭವಿಸುತ್ತದೆ. ನಮ್ಮ ದೇಶದಲ್ಲಿ ಪಶುಗಳೇನೋ ಧಾರಾಳವಾಗಿವೆ. ಸುಮಾರು ೧೨.೫೦ ಕೋಟಿ ದನಗಳು, ೪ ಕೋಟಿ ಎಮ್ಮೆಗಳು ಇವೆ. ಪ್ರಪಂಚದ ಯಾವ ದೇಶದಲ್ಲಿಯೂ ಇಷ್ಟು "ಪಶು ಸಂಪತ್ತು" ಇಲ್ಲ. ಆದರೆ ಇದನ್ನು ಸಂಪತ್ತೆಂದು ಹೇಳಲು ಸಾಧ್ಯವಿಲ್ಲ. ನಮ್ಮ ಪಶು ಸಂಪತ್ತಿಯಲ್ಲಿ ತೊಂಭತ್ತು ಪಾಲು ನಿರುಪಯೋಗಿ ಎಲುಬಿನ ಹಂದರಗಳೇ. ಕೆಲಸಕ್ಕೂ ಹಾಲಿಗೂ ಅವು ಅಷ್ಟಕ್ಕಷ್ಟೇ; ಮೇವಿಗೆ ಮಾತ್ರ ಭಾರವಾಗಿವೆ. ನಮ್ಮ ೧೬.೫೦ ಕೋಟಿ ಪಶುಗಳು ವರ್ಷಕ್ಕೆ ೪೫ ಕೋಟಿ ಮಣ ಹಾಲು ಕೊಟ್ಟರೆ ಅಮೇರಿಕದ ಬರಿ ೮ ಕೋಟಿ ದನಗಳು ೧೫೫ ಕೋಟಿ ಮಣ ಹಾಲು ಕೊಡುತ್ತವೆ.

ಈ ದುಃಸ್ಥಿತಿಗೆ ಕಾರಣವೇನು? ಒಂದು, ನಮ್ಮ ಸಾಕಣೆ ಸಮರ್ಪಕವಿಲ್ಲದೆ ಪಶುಗಳು ಕೃಶವಾಗಿ ನಿರುಪಯೋಗಿಯಾಗುತ್ತವೆ. ಪಶುಗಳ ಸಂಖ್ಯೆ ಮಿತಿ ಮೀರಿ ಇರುವುದರಿಂದ ಅವುಗಳ ಆರೈಕೆ ಸರಿಯಾಗಿ ಆಗುವುದಿಲ್ಲ. ಎರಡು, ಅಶಕ್ತ, ಕೀಳು ವರ್ಗದ ಹೋರಿಗಳು ಅಶಕ್ತ ಸಂತಾನವನ್ನೇ ಉಂಟುಮಾಡುವುದರಿಂದ ಬರಬರುತ್ತ ಪಶುಗಳ ಪೀಳಿಗೆ ಕೆಡುತ್ತಲೇ ಇದೆ.

ನಮ್ಮ ಪಶುಗಳು ನಿಜವಾಗಿ ಹೈನಕ್ಕೂ ಕೆಲಸಕ್ಕೂ ಸಮರ್ಥವಾದ ಪ್ರಾಣಿಗಳಾಗಬೇಕಾದರೆ ಅವುಗಳ ತಳಿ ಸುಧಾರಿಸಬೇಕು. ಸಿಕ್ಕ ಸಿಕ್ಕ ಹೋರಿಗಳನ್ನು ದನಗಳಿಗೆ ಕಟ್ಟಿಸುವುದು ನಿಂತು ಜಾತಿಹೋರಿಗಳ ಸಂಯೋಗ ಮಾಡಿಸಬೇಕು. ಅಂದರೆ ಅವುಗಳ ಸಂತಾನವೂ ಉತ್ತಮ ಜಾತಿಯದಾಗುವುದು. ಆದರೆ ದುರ್ದೈವದಿಂದ ನಮ್ಮ ದೇಶದಲ್ಲಿ ಇಂಥ ಉತ್ತಮ ಹೋರಿಗಳು ಸಾಕಷ್ಟು

ಇಲ್ಲ. ಆಕಳು ಎಮ್ಮೆಗಳು ಬೆದೆಗೆ ಬಂದಾಗ ಉತ್ತಮ ಗುಣಗಳುಳ್ಳ ಜಾತಿ ಹೋರಿ ಮತ್ತು ಕೋಣಗಳನ್ನು ಹುಡುಕುತ್ತ ಹೋಗುವುದೂ ಕಷ್ಟಸಾಧ್ಯ; ಕೆಲವೆಡೆಗಳಲ್ಲಿ ಇದು ಅಸಾಧ್ಯವೂ ಹೌದು. ಯಾಕಂದರೆ ಇಂಥ ೫೦೦ ಹೋರಿಗಳು ಬೇಕಾಗುವಲ್ಲಿ ನಮ್ಮ ದೇಶದಲ್ಲಿ ಒಂದು ಮಾತ್ರ ದೊರಕುವಷ್ಟು ತೀವ್ರ ಕೊರತೆ ಇದೆ.

ಕೃತ್ರಿಮ ಗರ್ಭಧಾರಣ ಪದ್ಧತಿ ನಮಗೆ ಈ ಕೊರತೆಯ ಪರಿಹಾರದಲ್ಲಿ ತುಂಬ ನೆರವಾಗುತ್ತದೆ. ಒಂದು ಉತ್ತಮ ಸುದೃಢ ಹೋರಿಯು ತನ್ನ ಆರೋಗ್ಯಕ್ಕೆ ಬಾಧೆ ಬಾರದಂತೆ ಒಂದು ವರ್ಷದಲ್ಲಿ ನೈಸರ್ಗಿಕ ಸಂಯೋಗದಿಂದ ೫೦-೬೦ ಆಕಳುಗಳನ್ನು ಕಟ್ಟಬಲ್ಲದು. ಆದರೆ ಅದೇ ಹೋರಿಯ ವೀರ್ಯವನ್ನು ತೆಗೆದು ಕೃತ್ರಿಮ ರೀತಿಯಿಂದ ಒಂದು ವರ್ಷದಲ್ಲಿ ೧೫೦೦-೧೬೦೦ ದನಗಳಿಗೆ ಗರ್ಭವುಂಟುಮಾಡಲು ಸಾಧ್ಯವಿದೆ. ಈ ಪ್ರಕಾರ ಕಡಿಮೆ ಹೋರಿಗಳು ಹೆಚ್ಚು ಉತ್ತಮ ಸಂತಾನವನ್ನುಂಟುಮಾಡಲು ಈ ಪದ್ಧತಿ ನೆರವಾಗುತ್ತದೆ.

ಇದು ಹೇಗಾಗುತ್ತದೆಂದು ನೋಡುವಾ. ಬೀಜದ ಹೋರಿಯು ದನದೊಡನೆ ಸಂಯೋಗ ಮಾಡಿದಾಗ ಆಗುವ ವೀರ್ಯ ಸ್ಖಲನದಲ್ಲಿ ಲಕ್ಷಾಂತರ ಶುಕ್ರ ಬೀಜಾಣುಗಳು ಆಕಳ ಯೋನಿಯಲ್ಲಿ ಬೀಳುತ್ತವೆ. ಈ ಲಕ್ಷಾಂತರ ಬೀಜಗಳಲ್ಲಿ ಒಂದು ಮಾತ್ರ ಗರ್ಭವಾಗಿ ಬೆಳೆದು ಉಳಿದವುಗಳೆಲ್ಲ ವ್ಯರ್ಥವಾಗಿ ನಷ್ಟವಾಗುತ್ತವೆ. ಕೃತ್ರಿಮ ಗರ್ಭಧಾರಣೆಯಲ್ಲಿ ಇಷ್ಟು ಬೀಜಗಳು ವ್ಯರ್ಥನಾಶವಾಗುವುದಿಲ್ಲ. ಹೋರಿಯ ವೀರ್ಯವನ್ನು ತೆಗೆದು ಕಾದಿಟ್ಟು, ಅದರಲ್ಲಿ ಸ್ವಲ್ಪಾಂಶವನ್ನು ಮಾತ್ರ ಒಂದೊಂದು ಆಕಳಿಗೆ ಉಪಯೋಗಿಸಲಾಗುತ್ತದೆ.

ಕೃತ್ರಿಮ ಗರ್ಭಧಾರಣದ ವಿಧಾನ ಸ್ಥೂಲವಾಗಿ ಹೀಗಿದೆ: ಮೊದಲು ಶ್ರೇಷ್ಠ ಜಾತಿಯ ಹೋರಿ ಅಥವಾ ಕೋಣವನ್ನು ಚೆನ್ನಾಗಿ ಪರೀಕ್ಷಿಸಿ ಅದಕ್ಕೆ ಯಾವ ಸಾಂಸರ್ಗಿಕ ಜನನೇಂದ್ರಿಯ ರೋಗಗಳೂ ಇಲ್ಲೆಂದು ಖಚಿತ ಮಾಡಿಕೊಳ್ಳುತ್ತಾರೆ. ಅನಂತರ ಹೋರಿಯನ್ನು ಯಾವುದೊಂದು ಜೀವಂತ ಆಕಳ ಸಾನ್ನಿಧ್ಯದಲ್ಲಿ ನಿಲ್ಲಿಸಿ ಅಥವಾ ಆಕಳಿನ ಚರ್ಮದಿಂದ ರಚಿಸಿದ ಆಕಳಿನಂತೆ ಕಾಣುವ ಆಕೃತಿಯ ಸಮೀಪದಲ್ಲಿ ನಿಲ್ಲಿಸಿ, ಕೃತ್ರಿಮ ರೀತಿಯಿಂದ ತಯಾರಿಸಿದ ಆಕಳ ಯೋನಿಯಲ್ಲಿ ಹೋರಿಯ ವೀರ್ಯವನ್ನು ಹಿಡಿದಿಡುತ್ತಾರೆ. ಅದರಲ್ಲಿ ಸ್ವಲ್ಪ ಭಾಗವನ್ನು ತೆಗೆದುಕೊಂಡು ಶಾಸ್ತ್ರೀಯ ವಿಧಾನಗಳಿಂದ ಸೂಕ್ಷ್ಮವಾಗಿ ಪರೀಕ್ಷಿಸಿ ಅದು ಉಪಯೋಗಿಸಲು ಶ್ರೇಷ್ಠವಾಗಿದೆಯೆಂದು ಮನವರಿಕೆಮಾಡಿಕೊಳ್ಳುತ್ತಾರೆ.

ಇನ್ನು ಅದನ್ನು ಕಾದಿಡುವ ಪ್ರಶ್ನೆ. ಈ ವೀರ್ಯದೊಡನೆ ತತ್ತಿಯ ಹಳದಿ ಭಾಗವನ್ನೂ ಇತರ ಕೆಲ ರಾಸಾಯನಿಕ ದ್ರವ್ಯಗಳನ್ನೂ ಬೆರಸಿ ಅದರ ಪರಿಮಾಣ ಹೆಚ್ಚಿಸುತ್ತಾರೆ. ಇದರಿಂದ ನಾಲ್ಕೈದು ದಿನ ಇಟ್ಟರೂ ವೀರ್ಯದಲ್ಲಿದ್ದ ಶುಕ್ರಬೀಜಾಣುಗಳು ಸಾಯುವುದಿಲ್ಲ. ಅಲ್ಲದೆ ಹೀಗೆ "ಅಳಕು" ಮಾಡಲಾದ ವೀರ್ಯವನ್ನು ಹೆಚ್ಚು ದನಗಳಿಗೆ ಉಪಯೋಗಿಸಲು ಬರುತ್ತದೆ. ಈ ವಿರಳೀಕೃತ ವೀರ್ಯ ಮಿಶ್ರಣವನ್ನು ತಂಪುಗೊಳಿಸಿ ರೆಫ್ರಿಜಿರೇಟರಿನಲ್ಲಿ ಕಾಯ್ದಿರಿಸಿದರೆ ಅದು ಬೇಗನೆ ಕೆಡುವುದಿಲ್ಲ. (ವೀರ್ಯ ಸ್ಖಲನವಾದಾಗ ಅದರ ಉಷ್ಣತೆ ३೦ ಡಿಗ್ರಿ ಸೆಂಟಿಗ್ರೇಡ್ ಇರುತ್ತದೆ. ಅದನ್ನು ೫ ಡಿಗ್ರಿಗೆ ಇಳಿಸಿ ಅದೇ ಉಷ್ಣತಾಮಾನದಲ್ಲಿ ಇರಿಸುವರು. ಹೀಗೆ ಸಂಸ್ಕರಿಸಿದ ವೀರ್ಯವನ್ನು ದೂರದೂರುಗಳಿಗೂ ಸಾಗಿಸಬಹುದು.) ಬೆದೆಗೆ ಬಂದ ಆಕಳುಗಳ ಗರ್ಭಾಶಯದಲ್ಲಿ ಜೀಕಳಿಗಳ ಸಹಾಯದಿಂದ ಈ ವೀರ್ಯವನ್ನು ಎರಚುತ್ತಾರೆ.

ಕೃತ್ರಿಮ ಗರ್ಭಧಾರಣೆಯ ಪ್ರಯೋಜನಗಳು ಅನೇಕವಾಗಿವೆ. ಪ್ರತಿಯೊಂದು ಒಳ್ಳೇ ಹೋರಿಯು ಪರಮಾವಧಿ ಕರುಗಳಿಗೆ ಜನ್ಮವೀಯುವಂತಾಗುವ ಮಾತಂತೂ ಆಯಿತು. ಒಂದೆರಡು ದನ-ಎಮ್ಮೆಗಳನ್ನು ಸಾಕುವವರಿಗೆ ಹೋರಿ-ಕೋಣಗಳನ್ನು ಸಾಕುವ ಅಸಾಧ್ಯ ಭಾರ ಇದರಿಂದ ತಪ್ಪುತ್ತದೆ. ಆಕಳು-ಹೋರಿಗಳ ಪ್ರತ್ಯಕ್ಷ ಮಿಲನವಿಲ್ಲದ್ದರಿಂದ ಜನನೇಂದ್ರಿಯದ

ಭಾರತದಲ್ಲಿ ದನಗಳಲ್ಲಿ ಕೃತಕ ಗರ್ಭಧಾರಣ ಮಾಡಿಸುವ ಕೇಂದ್ರ ೧೯೪೨ರಲ್ಲಿ ಇರ್ಝುತ ನಗರದಲ್ಲಿ ಮೊದಲನೆಯದಾಗಿ ಪ್ರಾರಂಭವಾಯಿತು. ೧೯೫೦ರಲ್ಲಿ ಪುಣೆಯಲ್ಲಿ ಮುಂಬಯಿ ಸರಕಾರ ಸ್ಥಾಪಿಸಿದ ಕೇಂದ್ರ ಎರಡನೆಯದು. ಅಲ್ಲಿ ದೊರೆತ ಪ್ರೋತ್ಸಾಹದಿಂದ ಅನೇಕ ಕಡೆಗಳಲ್ಲಿ ಮುಂಬಯಿ ಸರಕಾರ ಕೇಂದ್ರ ಮತ್ತು ಉಪಕೇಂದ್ರಗಳನ್ನು ಪ್ರಾರಂಭಿಸುತ್ತಿದೆ.

ಭಾರತ ಸರಕಾರ ದೇಶದಾದ್ಯಂತವೂ ತನ್ನ "ಮಧ್ಯವರ್ತಿ ಗ್ರಾಮ" ಯೋಜನೆಯನ್ವಯ ೧೫೦ ಕೃತಕಗರ್ಭಧಾರಣ ಕೇಂದ್ರಗಳನ್ನು ಸ್ಥಾಪಿಸಲಿದೆ. ಮುಂಬಯಿ ರಾಜ್ಯದಲ್ಲಿ ಆರು ಕೇಂದ್ರಗಳು ಆಗಲೆ ಅಸ್ತಿತ್ವದಲ್ಲಿ ಬಂದಿವೆ. ಸುರತ ಜಿಲ್ಲೆಯ ಕಡೋಡದಲ್ಲಿ, ಅಹಮದನಗರ ಜಿಲ್ಲೆಯ ಕೋಪರಗಾಂವದಲ್ಲಿ, ನಾಸಿಕ ಜಿಲ್ಲೆಯ ವಾಡೀವರಿಯಲ್ಲಿ, ಸೊಲ್ಲಾಪುರ ಜಿಲ್ಲೆಯ ಮಹುದಲ್ಲಿ, ಉತ್ತರ ಖಾನದೇಶದ ಪಿಂಪಳಿಯಲ್ಲಿ, ಮತ್ತು ಈಗ ಮೈಸೂರಲ್ಲಿರುವ ಧಾರವಾಡ ಜಿಲ್ಲೆಯ ದೇವೀ ಹೊಸೂರಲ್ಲಿ ಈ ಕೇಂದ್ರಗಳಿವೆ. ದೇವೀ ಹೊಸೂರಲ್ಲಿನ ಕೇಂದ್ರ "ಅಮೃತ ಮಹಾಲ" ದನಗಳ ಸುಧಾರಣೆಗಾಗಿ ಇದೆ. ಕರ್ನಾಟಕ ಭಾಗದಲ್ಲಿ ಗೋಕಾಕದಲ್ಲಿ ಸಮಾಜವಿಕಾಸ ಪ್ರದೇಶದ ಮತ್ತೊಂದು ಕೇಂದ್ರವೂ ಇದೆ.

ಮುಂಬಯಿ ರಾಜ್ಯದಲ್ಲಿ ಕೃತಕ ಗರ್ಭಧಾರಣ ಪದ್ಧತಿ ಪ್ರಾರಂಭವಾದಂದಿನಿಂದ ೫೪,೧೬೧ ಆಕಳು ಎಮ್ಮೆಗಳಿಗೆ ಗರ್ಭಾಧಾನ ಮಾಡಿಸಲಾಗಿದೆ. ಅವುಗಳಲ್ಲಿ ೩೩,೨೪೯ ಉತ್ತಮ ಕರುಗಳು ಹುಟ್ಟಿವೆ. ಎರಡನೇ ಪಂ. ವಾ. ಯೋಜನೆಯಲ್ಲಿ ಪ್ರತಿ ಜಿಲ್ಲಾ ಸ್ಥಳದಲ್ಲಿ ಕೇಂದ್ರಗಳನ್ನೂ ತಾಲೂಕುಗಳಲ್ಲಿ ಉಪಕೇಂದ್ರಗಳನ್ನೂ ಸ್ಥಾಪಿಸುವ ವಿಚಾರವಿದೆ. ಅಲ್ಲಿ ಪುಕ್ಕಟೆ ಕೃತಕ ಗರ್ಭಧಾರಣೆಯ ವ್ಯವಸ್ಥೆ ಮಾಡುವದಲ್ಲದೆ ದನಗಳ ಬಂಜೆತನ ಮೊದಲಾದ ಕೊರತೆಗಳಿಗೂ ಚಿಕಿತ್ಸೆ ಮಾಡಲಾಗುವುದು.

ಸಾಂಸರ್ಗಿಕ ರೋಗಗಳನ್ನು ನಿರೋಧಿಸಲಾಗುತ್ತದೆ. ಸಂಗ್ರಹಿಸಿದ ವೀರ್ಯವನ್ನು ಬೇಕಾದಲ್ಲಿ ಸುಲಭವಾಗಿ ಸಾಗಿಸಲು ಬರುವುದರಿಂದ ಬೀಜದ ಹೋರಿಗಳು ಎಷ್ಟು ದೂರದಲ್ಲಿದ್ದರೂ ಅವುಗಳ ಉಪಯೋಗಮಾಡಿಕೊಳ್ಳಬಹುದು.

ಕೃತ್ರಿಮ ಗರ್ಭಧಾರಣೆಯಲ್ಲಿ ನೇರವಾಗಿ ಗರ್ಭಾಶಯದಲ್ಲಿಯೇ ವೀರ್ಯವು ಬೀಳುವುದರಿಂದ ಗರ್ಭಾಧಾನವು ನೂರಕ್ಕೆ ೭೦ ರಷ್ಟು ಸಲ ಯಶಸ್ವಿಯಾಗುತ್ತದೆ. ನೈಸರ್ಗಿಕ ಮಿಲನವಾದಾಗ ನೂರಕ್ಕೆ ೩೫-೪೦ ಸಲ ಮಾತ್ರ ಗರ್ಭ ನಿಲ್ಲುವುದು ಸಾಮಾನ್ಯ ಅನುಭವ. ಹೀಗೆ ಈ ದೃಷ್ಟಿಯಿಂದಲೂ ಕೃತಕ ಪದತಿ ಲಾಭದಾಯಕವಾಗಿದೆ.

ಚಿಕ್ಕ ಆಕಾರದ ದನ-ಎಮ್ಮೆಗಳಿಗೆ ದೊಡ್ಡ ಗೂಳಿಗಳೊಡನೆ ನೈಸರ್ಗಿಕ ಸಂಯೋಗವಾಗುವಾಗ ತುಂಬ ಕಷ್ಟವಾಗುತ್ತದೆ. ಕೃತ್ರಿಮ ಗರ್ಭಧಾರಣೆಯಲ್ಲಿ ಈ ತೊಂದರೆ ಇಲ್ಲ.

ಕೆಲವರು ಕೃತ್ರಿಮ ಗರ್ಭಧಾರಣೆಯಿಂದಾಗುವ ಸಂತತಿ ದೋಷಯುಕ್ತವೂ ಶಕ್ತಿಹೀನವೂ ಆಗುವುದೆಂದು ಭಾವಿಸುತ್ತಾರೆ. ಇದು ಸರ್ವಥಾ ತಪ್ಪು-ತಿಳಿವಳಿಕೆ. ಸದೃಢ "ತಂದೆ-ತಾಯಿಗಳ" ಸಂತತಿ ಸದೃಢವೇ ಆಗುತ್ತದೆ. ಉತ್ಪಾದನ ವಿಧಾನದಲ್ಲಿ ಕೃತ್ರಿಮ ಅಥವಾ ನೈಸರ್ಗಿಕ ಪದ್ಧತಿಗಿಂತ ತಂದೆಯಾಗುವ ಹೋರಿಯ ಗುಣ ಮುಖ್ಯ. ಸದೋಷ ಹೋರಿಯನ್ನುಪಯೋಗಿಸಿದರೆ ಸಂತತಿಯೂ ಸದೋಷವಾಗುತ್ತವೆ. ಆದರೆ

ಕೃತ್ರಿಮ ಪದ್ಧತಿಯಲ್ಲಿ ಎಂದಿಗೂ ಸದೋಷ ಹೋರಿಗಳನ್ನು ಪಯೋಗಿಸುವುದಿಲ್ಲ.

ರಶಿಯಾ, ಇಂಗ್ಲಂಡ್, ಫಿಲಿಪ್ಪೈನ್ಸ್, ಜಪಾನ ಮೊದಲಾದ ದೇಶಗಳು ಕೃತ್ರಿಮ ವಿಧಾನ ದಿಂದಲೇ ಶ್ರೇಷ್ಠದನಗಳನ್ನು ಹುಟ್ಟಿಸಿ ಹೈನ ವನ್ನು ಹೆಚ್ಚಿಸಿಕೊಂಡಿವೆ. ಭಾರತದಲ್ಲಿ ಮಾತ್ರ ಹಾಲಿಗಾಗಿ ಅಳುತ್ತಿರುವ ಮಕ್ಕಳಿಗೆ ಹಿಟ್ಟಿನ ಹಾಲು ಕೊಟ್ಟು ರಮಿಸುವ ಸ್ಥಿತಿ ಇದೆ. ನಾವು ಗೋಮಾತೆಯನ್ನೂ ಎತ್ತುಗಳನ್ನೂ ಪೂಜಿಸು ತ್ತೇವೇನೋ ನಿಜ; ಆದರೆ ಅವೇಕೆ ಇಷ್ಟು ದುರ್ಬಲ, ಬರಡಾಗುತ್ತಿವೆಯೆಂದು ಯೋಚಿಸು ವುದಿಲ್ಲ. ಉತ್ತಮ ಹೋರಿಗಳ ಕೊರತೆಯುಳ್ಳ ಈ ದೇಶದಲ್ಲಿ ನಮ್ಮ ಪಶುಗಳ ಗುಣ ಹೆಚ್ಚಿಸಬೇ ಕಾದಲ್ಲಿ ಕೃತ್ರಿಮ ಗರ್ಭಧಾರಣ ಪದ್ಧತಿ ಯೊಂದೇ ತರಣೋಪಾಯ. ನಮ್ಮ ರೈತರು ಮತ್ತು ಪಶುಪಾಲಕರು ಇದನ್ನು ಮನಗಂಡು, ಸರಕಾರವು ಎಲ್ಲೆಲ್ಲೂ ಪ್ರಾರಂಭಿಸುತ್ತಿರುವ ಕೃತಕ ಗರ್ಭಧಾರಣ ಕೇಂದ್ರಗಳ ಉಪಯೋಗ ವನ್ನು ಪಡೆಯುವುದಾದಲ್ಲಿ ೨೦-೩೦ ವರ್ಷಗಳಲ್ಲಿ ನಮ್ಮ ಪಶುಸಂಪತ್ತು ನಿಜವಾದ ಸಂಪತ್ತೆನಿಸಿ ಇದು ಹಾಲು ಜೇನಿನ ದೇಶವೆನಿಸಬಲ್ಲದು.

## ನಡೆದ ಕಥೆ

ಅಮೇರಿಕದ ಟೆಕ್ಸಾಸದಲ್ಲಿ ಕಳ್ಳರನ್ನು ಹಿಡಿಯಲು ನೇಮಿಸಲ್ಪಟ್ಟ ಹೊಸ ಪೋಲೀಸ್ ಅಧಿಕಾರಿಯ ಮೊದಲನೇ ದಿನದ ಡ್ಯೂಟಿಯಲ್ಲಿಯೇ ಯಾರೋ ಅವನ ಹ್ಯಾಟನ್ನು ಕದ್ದರು.

— ಕೊರೆನೆಟ್

ವೈ. ಜಿ. ಕೃಷ್ಣಮೂರ್ತಿ

# ನೀರ ಮೇಲೆ ನಡೆಯುವ ಖಾಕಿ ಬಾಬಾ

**ಇಪ್ಪತ್ತನೇ ಶತಮಾನದಲ್ಲಿಯೂ ಇಂಥವರಿದ್ದಾರೆ ಎಂದರೆ ಜನ ನಂಬಲಾರರು. ಆದರೆ ಒಬ್ಬ ಪ್ರಸಿದ್ಧ ಲೇಖಕರು ಕಣ್ಣಾರೆ ಕಂಡದ್ದನ್ನು ಇಲ್ಲಿ ಬರೆದಿದ್ದಾರೆ**

ಖಾಕಿ ಬಾಬಾ ನೀರ ಮೇಲೆ ನಡೆಯುತ್ತಾರೆ. ಆದರೆ ಅವರು ಎಲ್ಲ ಯೋಗಿಗಳಂತಲ್ಲ. ಅವರ ಮಾತು ಕ್ಲಿಷ್ಟ-ಅಸ್ಪಷ್ಟ ತಾಂತ್ರಿಕ ಶಬ್ದಗಳಿಲ್ಲದೆ ತಿಳಿಯಾಗಿರುತ್ತದೆ. ಪ್ರಪಂಚದ ಮೇಲೆ ಉಪೇಕ್ಷೆ ಅವರಿಗಿಲ್ಲ. ಅಜಾನುಬಾಹು ವ್ಯಕ್ತಿತ್ವ ಅವರದು. ಶ್ವಾಸನಿಯಂತ್ರಣ ಅಥವಾ "ಧಾರಣೆ" ಮತ್ತು ಗುದ್ದಲಿ--ಇವನ್ನು ಸೇರಿಸಿದರೆ ಅವರ ಭಾವನಾತ್ಮಕ ಚಿತ್ರ ಸಂಪೂರ್ಣವಾಗುತ್ತದೆ. ಆಧುನಿಕ ಜೀವನಕ್ಕೂ ಯೋಗಸಾಧನೆಗೂ ನಡುವೆ ಕಟ್ಟಿದ ಸೇತುವೆಯಂತೆ ಅವರಿದ್ದಾರೆ.

ಖಾಕಿ ಬಾಬಾ ಉತ್ತರ ಪ್ರದೇಶದ ಬಾಲಿಯಾದವರು. ೧೯೦೧ ರಲ್ಲಿ ಹುಟ್ಟಿದ ಅವರು ಚಿಕ್ಕಂದಿನಲ್ಲೇ ತಮ್ಮ ಪ್ರಶ್ನೆಗಳಿಂದಲೂ ಸ್ವತಂತ್ರ ವಿಚಾರಗಳಿಂದಲೂ ತಂದೆ ತಾಯಿಗಳನ್ನು ದಿಗ್ಭ್ರಮೆಗೊಳಿಸುತ್ತಿದ್ದರು. ಇನ್ನೂ ಪ್ರಣಯವೆಂಬುದೇನೆಂಬ ಗಂಧವಿಲ್ಲದಾಗ, ಏಳನೇ ವಯಸ್ಸಿನಲ್ಲಿ, ಅವರಿಗೆ ಮದುವೆಯಾಯಿತು. ಒಂದು ದಿನ ಈ ಹುಡುಗ ಬರಿ ದರ್ಭಾಸನದ ಮೇಲೆ ನಿಶ್ಚಲನಾಗಿ ಕುಳಿತು ಪ್ರಯಾಗದಲ್ಲಿ ತ್ರಿವೇಣೀ ಪ್ರವಾಹವನ್ನು ದಾಟುವುದನ್ನು ಕಂಡು ಸಾಧುಗಳು ದುಂಗುಬಡಿದು ಹೋದರು.



ಶಂಖ ಭೇರಿ ವಾದ್ಯ ಸಮೇತವಾಗಿ ಅವರು ವೈಭವದಿಂದ ಈ ಬಾಲಯೋಗಿಗೆ "ಖಾಕಿ ಬಾಬಾ" ಎಂದು ನಾಮಕರಣ ಮಾಡಿದರು.

ಖಾಕೀ ಬಾಬಾ ಅವರ ಜೀವನದ ರಹಸ್ಯ

"ಸರ್ಚ್‌ಲೈಟ್" ನಿಂದ

ಮಯ ಅಧ್ಯಾಯ ಪ್ರಾರಂಭವಾದುದು ಒಂದು ದಿನ ಅವರಿಗೆ ಬಾಲಹನುಮಂತನ ವಿಗ್ರಹ ಪ್ರಾಪ್ತವಾದಾಗಿನಿಂದ. ಯಾವುದೋ ಬಾವಿ ಅಗೆಯುವಾಗ ದೊರೆತ ಈ ವಿಗ್ರಹ ಗಾತ್ರದಲ್ಲಿ ಒಂದಡಿ ಎತ್ತರವಾಗಿದೆ. ನಾಜೂಕಾಗಿ ಕೆತ್ತಿದ ಈ ಮುದ್ದಾದ ಮೂರ್ತಿಯ ಕಣ್ಣುಗಳಿಂದ ತೇಜಸ್ಸು ಮಿಂಚುತ್ತದೆ.

ಅನಂತರ ಖಾಕೀ ಬಾಬಾ ಚಿತ್ರಕೂಟ ಪರ್ವತದ ಗುಹೆ-ಗಹ್ವರಗಳಲ್ಲಿ ಹತ್ತು ವರ್ಷ ಕಾಲವನ್ನು ತಪಸ್ಸಿನಲ್ಲಿ ಕಳೆದರು. ಅದು ಅವರಿಗೆ ಒಂದು ಅಪರೂಪ ಅನುಭವವಾಗಿತ್ತು. ಅಲ್ಲಿ ಅವರಿಗೆ ಕುಂಡಲಿನೀ ಸಿದ್ಧಿಯಾಯಿತು. ಯೋಗ ಸಾಧನೆಯಲ್ಲಿ ಅವರಿಗೆ ಬಾಲಹನುಮಂತ ಬೆಂಬಲವಾದನು. ಪತಂಜಲಿಯ ಯೋಗಸೂತ್ರಗಳನ್ನು ಅನುಸರಿಸಿ ಹನುಮಂತನ ಅನುಗ್ರಹದಿಂದ ಒಂದೊಂದೇ ಮೆಟ್ಟಲು ಮೇಲೇರಿ ಅವರು ಹೃದಯಕಮಲದಲ್ಲಿ ಪರಮಪುರುಷನ ದರ್ಶನ ಪಡೆದರು.

ಆಧ್ಯಾತ್ಮಿಕ ಸಿದ್ಧಿಯನ್ನು ಪಡೆದಮೇಲೆ ಅವರು ಬೈರಾಗಿಯಾಗಿಯೇ ಉಳಿಯದೆ ಮತ್ತೆ ಸಂಸಾರ ಸಾಗರವನ್ನು ಪ್ರವೇಶಿಸಿದರು. ಹುಡುಗತನದಲ್ಲಿ ಮದುವೆಯಾದ ಹೆಂಡತಿಯನ್ನು ಸಂಧಿಸಲು ಚಿತ್ರಕೂಟದ ಅರಣ್ಯದಿಂದ ಬಾಲಿಯಾದ ಸುಖ ವಸತಿಗೆ ಮರಳಿದರು. ಸಂನ್ಯಾಸದಿಂದ ಸಂಸಾರಕ್ಕೆ ಮರಳಿ "ಗೃಹತಪಸ್ವಿ" ಯಾದರು.

ಯೋಗಸಾಧನೆ ಮಾಡಿದವರಾದರೂ ಖಾಕೀ ಬಾಬಾ ಲೌಕಿಕವನ್ನು ಚೆನ್ನಾಗಿ ಮನಗಂಡಿದ್ದಾರೆ. ಅವರು ವಿಶ್ವವಿದ್ಯಾಲಯದ ಪಂಡಿತಂಮನ್ಯರನ್ನು ಮೆಚ್ಚುತ್ತಾರೆ. ಲೌಕಿಕ ವಿದ್ಯೆಯ ಅವಶ್ಯಕತೆಯನ್ನೊಪ್ಪುವ ಅವರು ಮಕ್ಕಳಿಗೆ ಉಚ್ಚ ಶಿಕ್ಷಣ ಕೊಡಿಸಿದ್ದಾರೆ. ಅವರ ಮಕ್ಕಳಲ್ಲೊಬ್ಬ ಎಂ. ಎ. ಪದವೀಧರನಾಗಿರುವನು.

ನಮ್ಮ ಕಾಲದ ಶ್ರೇಷ್ಠ ಬುದ್ಧಿಜೀವಿಗಳು ಖಾಕೀ ಬಾಬಾ ಸನ್ನಿಧಿಯಲ್ಲಿ ಸಾಷ್ಟಾಂಗವೆರಗುತ್ತಾರೆ. ಆರಾ ಮತ್ತು ದುಮರಾಯಿ ಕಾಲೇಜುಗಳ ಪ್ರೊಫೆಸರುಗಳು ಬಾಬಾ ಅವರ ಪವಾಡಗಳ ದಾಖಲೆಗಳನ್ನೂ ಫೋಟೊಗಳನ್ನೂ ಸಂಗ್ರಹಿಸಿ ಭದ್ರವಾಗಿ ಕಾಪಾಡುತ್ತಿದ್ದಾರೆ.

ಅವರ ಪವಾಡವನ್ನು ನಾನು ಮೊಟ್ಟಮೊದಲು ನೋಡಿದ್ದು ಪಂಡಿತ ಮಂತ್ರೇಶ್ವರ ಶರ್ಮರ ಮನೆಯಲ್ಲಿ. ಯೋಗೀಶ್ವರರು ಈ ವೃದ್ಧ ಸಂಪಾದಕರ ಮನೆಗೆ ಬಂದಾಗ ಅವರ ಮೊಮ್ಮಗಳಿಗೆ ಅಸ್ವಸ್ಥವೆಂದು ಕೇಳಿದರು. ಮಗುವನ್ನು ತೊಡೆಯ ಮೇಲೇರಿಸಿಕೋ ಎಂದು ತಾಯಿಗೆ ಬಾಬಾ ಹೇಳಿದರು. ಕ್ಷಣಾರ್ಧದಲ್ಲಿ ಅವರು ಭೂಮಿ ಬಿಟ್ಟು ಅಂತರಾಳದಲ್ಲಿ ನಿಂತಿದ್ದರು — ಅವರ ಬಲಪಾದ ಮಗುವಿನ ತಲೆಯ ಮೇಲಿತ್ತು. "ಹುಂ" ಎಂಬ ನಾದ ಗಾಳಿಯಲ್ಲಿ ಧ್ವನಿಸಿತು. ಮಗುವಿನ ತಲೆ ಈ ದಾಂಡಿಗ ಮನುಷ್ಯನ ಭಾರಕ್ಕೆ ಚಿಪ್ಪಾಡಾಗಿ ಹೋಗಿರಬೇಕೆಂದು ನಮಗೆ ಭಯವಾಯಿತು. ಆದರೆ ನೋಡುತ್ತೇವೆ, ಮಗುವೂ ಅದರ ತಾಯಿಯೂ ನಗುತ್ತಿದ್ದಾರೆ. ಇದೇ ಅಣಿಮಾ ಸಿದ್ಧಿ—ದೇಹವನ್ನು ಅಣುವಿನಷ್ಟು ಹಗುರಾಗಿ ಮಾಡಿಕೊಳ್ಳುವ ಯೋಗಶಕ್ತಿ.

ಇನ್ನೊಮ್ಮೆ ಅವರು ಒಂದು ಗ್ಲಾಸ್ ನೀರು ತರಿಸಿ ಅದನ್ನು ಮೂಗಿನ ಬಳಿ ಹಿಡಿದು ಒಳಗೆ ಸೇದಿಕೊಂಡರು. ಆ ಮೇಲೆ ಅದನ್ನು ಕಣ್ಣುಗಳಿಂದ ಹೊರಹೊಮ್ಮಿಸಿದರು! ತಮ್ಮ ಶರೀರದ ಪ್ರತಿಸ್ನಾಯುವಿನ ಎಳೆಎಳೆಯೂ ಅವರ ಹಿಡಿತದಲ್ಲಿದೆ.

ಈ ಯೋಗಿರಾಜನಿಗೆ ಗಹನವಾದ ರಹಸ್ಯ ವರ್ತನೆ ಒಪ್ಪಿಗೆಯಿಲ್ಲ. ಬಹಿರಂಗವಾಗಿಯೇ ಅವರ ಯೋಗ ಪ್ರದರ್ಶನ ನಡೆಯುತ್ತದೆ. ಚಾಪೆಯ ಮೇಲೆ ಆಸನ ಹಾಕಿ ಕುಳಿತು ಮಿದುಳಿನ ನರಮಂಡಲದ ಕೇಂದ್ರವಾದ ಸಹಸ್ರಾರ ಚಕ್ರವನ್ನು ಅವರು ಗರ್ರನೆ ತಿರುಗಿಸಿಬಿಡುತ್ತಾರೆ. ಅದರಿಂದ ಹೊರಡುವ ಓಂಕಾರವು ಅವರ ಶಿರಸ್ಸಿನ ಹತ್ತಿರ ನಿಂತವರಿಗೆ ಚೆನ್ನಾಗಿ ಕೇಳಿಸುತ್ತದೆ. ಇದನ್ನು ನೋಡಿ ನಾವು ಮಂತ್ರಮುಗ್ಧರಂತೆ ನಿಲ್ಲುತ್ತೇವೆ.

ಬಕ್ಸಾರದ ವಿಶ್ವಾಮಿತ್ರ ಆಶ್ರಮದ ಬಳಿ

ಅವರು ಗಂಗೆಯ ತರಂಗಿತ ಜಲಪ್ರವಾಹದ ಮೇಲೆ ನಡೆಯುತ್ತಿರುವಾಗ ಅವರ ಯೋಗ ಶಕ್ತಿಯ ಪಾರಮ್ಯವು ಪ್ರಕಟವಾಯಿತು. ಒಂದು ಶನಿವಾರ ಅಪರಾಹ್ನ ; ಗಂಟೆ ಮೂರು ಹೊಡೆದಿದೆ ; ಯುರೋಪಿಯನ್ನರ ಒಂದು ಗುಂಪೂ ಭಾರತೀಯ ಸುಶಿಕ್ಷಿತರ ತಂಡವೂ ಉತ್ಕಂಠೆಯಿಂದ ನಿರೀಕ್ಷಿಸುತ್ತ ನಿಂತಿದೆ : ಖಾಕೀ ಬಾಬಾ ಬಂದು ಲೀಲಾಜಾಲವಾಗಿ ಗಂಗೆಯ ಧಾವಿಸುತ್ತಿರುವ ಪ್ರವಾಹದ ಮೇಲೆ ಕಾಲಿಟ್ಟರು. ಆ ಸ್ಥಳದಲ್ಲಿ ನೀರಿನ ಆಳ ೨೦ ರಿಂದ ೫೦ ಅಡಿಗಳ ವರೆ-ಗಿದೆ. ಬಾಬಾ ಅವರ ಪಾದಗಳು ಚಪಲವಾಗಿವೆ ; ಅವರ ಸುದೃಢ ಮಾಂಸಲ ಭುಜಾದಂಡಗಳು ಗಾಳಿಯಲ್ಲಿ ಮುಂದೆ ಹಿಂದೆ ಬೀಸುತ್ತಿವೆ ; ಶ್ವಾಸವನ್ನು ಊರ್ಧ್ವಮುಖವಾಗಿ ನಿರೋಧಿಸಿ ನಿಶ್ಚಿಂತೆಯಿಂದ ಅವರ ಹೆಜ್ಜೆಗಳು ಸಾಗಿವೆ. ನೆಲದ ಮೇಲೆ ಎಷ್ಟೋ ಅಷ್ಟೇ ಸುಲಭವಾಗಿ ನೀರಿನ ಮೇಲೆ ನಡೆಯುವ ಈ ಅದ್ಭುತವನ್ನು ನೋಡಿ ಆ ವರೆಗೆ ಬಾಲಿಶ ಕೌತುಕದಿಂದ ವೀಕ್ಷಿಸುತ್ತಿದ್ದ ಪ್ರೇಕ್ಷಕರ ದೃಷ್ಟಿಗಳಲ್ಲಿ ಭಯಭಕ್ತಿಗಳು ಮೂಡುತ್ತವೆ. ಶತಮಾನಗಳಿಂದ ಕರಿಕಿ ಹೋಗಿದ್ದ ಕನಸೊಂದು ಪುನಃ ಚಿಗುರುತ್ತದೆ.

ಈಗ ಖಾಕೀ ಬಾಬಾ ಬಕ್ಸಾರದಿಂದ ಒಂದು ಮೈಲಿನ ಮೇಲಿರುವ ವಿಶ್ವಾಮಿತ್ರ ಆಶ್ರಮದಲ್ಲಿ ನೆಲೆನಿಂತಿದ್ದಾರೆ. ಅಲ್ಲಿ ಅವರು ಅನುಪಮವಾದ ಪ್ರಾಚ್ಯಸಂಶೋಧನ ಕಾರ್ಯದಲ್ಲಿ ನಿರತರಾಗಿದ್ದಾರೆ. ಅವರ ಸೂಚನೆಯಂತೆ ರಾಮತಿಲ್ಲಾ ಎಂಬ ದಿನ್ನೆಯನ್ನು ಅಗೆದಾಗ ರಾಮನ ಬಿಲ್ಲು ಮತ್ತು ಬತ್ತಳಿಕೆಗಳೂ ರಕ್ಕಸಿ ತಾಟಕಿಯ ಕೋರೆ ದಾಡೆಗಳೂ ಇಂದ್ರನೀಲ ಶಿಲೆಯಿಂದ ಮಾಡಿದ ಶಿವವಿಗ್ರಹವೂ ವಿಶ್ವಾಮಿತ್ರನ ಯಜ್ಞಕುಂಡವೂ ಅಲ್ಲಿ ದೊರೆತಿವೆ. ರಾಮ ಧನುಸ್ಸು ಲೋಹದ್ದು. ಅದರ ಉದ್ದ ಎರಡೂವರೆ ಅಡಿ. ಮೂರು ತುಣುಕುಗಳಾಗಿ ಅದು ಮುರಿದಿದೆ. ತಾಟಕಿಯ ದಾಡೆಗಳು ಒಂದು ಅಡಿ ಉದ್ದವಾಗಿವೆ. ೨೨ ಅಡಿ ಉದ್ದವಾದ ಅವಳ ಅಸ್ಥಿಪಂಜರ ಅಗೆಯುವಾಗ ತುಂಡು ತುಂಡಾಗಿದ್ದರೂ ಅದೊಂದು ಗಮನಾರ್ಹ ವಿಚಿತ್ರವೇ ಸೈ. ದಿನ್ನೆಯ ಮೇಲ್ಪದರುಗಳಲ್ಲಿ ಬುದ್ಧ ವಿಗ್ರಹಗಳೂ ದೊರೆತಿವೆ.

ಇವೆಲ್ಲವನ್ನು ಅಗೆಯುವಾಗ ಖಾಕಿ ಬಾಬಾ ಮೊದಲು ಸ್ಥಳ ತೋರಿಸುತ್ತಾರೆ, ಆಮೇಲೆ ಇಂಜಿನಿಯರರು ಗುದ್ದಲಿ ಹಾಕುತ್ತಾರೆ. ಕೆಳಗೆ ಏನೇನು ಸಿಗಲಿದೆಯೆಂದು ಮೊದಲೇ ಖಾಕೀ ಬಾಬಾ ಹೇಳಿಟ್ಟಿರುತ್ತಾರೆ. ಬಾಲಹನುಮಂತನ ಭಜನೆಯಿಂದ ತಮಗೆ ಇದೆಲ್ಲ ತಿಳಿಯುತ್ತಿದೆಯೆಂದು ಅವರ ಹೇಳಿಕೆ. ಅವರು ಹೇಳಿದಂತೆ ಪುರಾವಸ್ತುಗಳು ಸಿಕ್ಕೇಸಿಗುವವೆಂದು ಇಂಜನಿಯರರು ಒಪ್ಪುತ್ತಾರೆ.

ಇಂದು ಜೀವಂತರಾಗಿರುವ ಮೂವರು ಮಹರ್ಷಿಗಳಾದ ವಪ್ರೇಶ್ವರಿಯ ನಿತ್ಯಾನಂದ, ಜನಕಪುರದ ಮೌನಿ ಬಾಬಾ ಮತ್ತು ಗಂಗೋತ್ರಿಯ ಅವಧೂತರ ನಂತರ ಯೋಗಶಕ್ತಿಯಲ್ಲಿ ಖಾಕೀ ಬಾಬಾ ಅವರೇ ಶ್ರೇಷ್ಠರು.

ಖಾಕೀ ಬಾಬಾ ಮುಚ್ಚಿದ ಬಾಗಿಲನ್ನು ತೆರೆದ ಯೋಗಿಗಳು. ಸಾಂಪ್ರದಾಯಿಕ ವಿಧಿನಿಯಮಗಳನ್ನು ಲೆಕ್ಕಿಸದ ಯೋಗಿಶ್ರೇಷ್ಠರವರು. ಅವರು ಸಂಸಾರದಲ್ಲಿರುವುದರಿಂದ ಅದರ ತಾಪ-ತ್ರಯಗಳೂ ಬಂಧು-ಮಿತ್ರರೂ ಕಾರ್ಯ-ಕಲಾಪಗಳೂ ಅವರನ್ನು ಬಿಟ್ಟಿಲ್ಲ. ಆದರೆ ಅದೆಲ್ಲವನ್ನು ಮೀರಿನಿಂದ ಅವರ ಆಧ್ಯಾತ್ಮಿಕ ವ್ಯಕ್ತಿತ್ವವು ಗೋಪುರದ ಮೇಲಣ ಉಜ್ವಲ ದೀಪದಂತೆ ಆತ್ಮಪ್ರಕಾಶವನ್ನು ಬೀರುತ್ತದೆ.

---

## ಕುವೆಂಪು ಉವಾಚ

**ಕನ್ನಡಿಗರು ವಿನಯಕ್ಕಾಗಿ ಬಗ್ಗಿ ನಡೆಯಬಹುದು ; ಆದರೆ ರಿಕ್ತರಂತೆ ಕುಗ್ಗಿ ನಡೆಯಬೇಕಾಗಿಲ್ಲ.**

—ಸಾಹಿತ್ಯ ಸಮ್ಮೇಲನದ ಅಧ್ಯಕ್ಷ ಭಾಷಣದಿಂದ

ಎಂ. ವಿ. ನಾಗರಾಜ

# ಮುತ್ತಿನ ಕಣ್ಣೀರು

**ಮಾನವನಿಗೆ ಅತ್ಯಂತ ದುಃಖ ಯಾವಾಗ ಆಗುತ್ತದೆ ?**



ಚಂದ್ರಗುಪ್ತ ಸಮ್ರಾಟನ ಕಾಲದಲ್ಲಿ ಅವನ ಚಕ್ರಾಧಿಪತ್ಯಕ್ಕೆ ಅಧೀನವಾಗಿದ್ದ ಒಂದು ಊರಿನಲ್ಲಿ ಚೆಲುವೆಯೊಬ್ಬಳ ಅಮೃತಶಿಲೆಯ ಅದ್ಭುತ ಪ್ರತಿಮೆಯೊಂದು ಗೋಚರಿಸಿತು. ಆ ಪ್ರತಿಮೆಯ ಶಿಲಾಪೀಠದ ಮೇಲೆ ''ನಾನು ಕರುಣೆ'' ಎನ್ನುವ ವಾಕ್ಯವನ್ನು ಕೆತ್ತಿತ್ತು. ಆ ಪ್ರತಿಮೆಯನ್ನು ಊರಿನ ವಾಣಿಜ್ಯ ಕೇಂದ್ರದಲ್ಲಿ ಪ್ರತಿಷ್ಠಾಪನೆ ಮಾಡಿದರು.

ಕೆಲವು ತಿಂಗಳ ನಂತರ ಆ ಊರಿಗೆ ಬಂದ ಒಬ್ಬ ಕುಡುಕ ಪ್ರಯಾಣಿಕನ ಹತ್ತಿರ ಬಹಳ ಬೆಲೆಬಾಳುವ ಮುತ್ತುಗಳಿದ್ದುದರಿಂದ, ಅವನನ್ನು ಸೆರೆಹಿಡಿದು ನ್ಯಾಯಾಲಯಕ್ಕೆ ಕರೆದೊಯ್ದರು. ನ್ಯಾಯಾಧೀಶರು ಪ್ರಶ್ನಿಸಿದರು: "ನಿನ್ನಂತಹ ಕೀಳುದರ್ಜೆಯ ವ್ಯಕ್ತಿಗೆ ಇಂತಹ ಅಮೂಲ್ಯ ವಸ್ತು ಹೇಗೆ ಸಿಕ್ಕಿತು ?"

ಈ ಪ್ರಶ್ನೆಗೆ ಉತ್ತರವಾಗಿ, ಸೆರೆಯಲ್ಲಿದ್ದ ಕುಡುಕ ಸಂಚಾರಿ ಅದ್ಭುತ ಕತೆಯೊಂದನ್ನು ಹೇಳಿದ: "ಮಾನ್ಯ ನ್ಯಾಯಾಧೀಶರೇ ! ಒಂದು ದಿನ ಬೆಳಗ್ಗೆ ಸೂರ್ಯೋದಯದ ವೇಳೆಗೆ ಎಚ್ಚರಗೊಂಡಾಗ, ಹಿಂದಿನ ರಾತ್ರಿಯನ್ನು ಈ ಊರಿನ ಅಮೃತಶಿಲಾ ಪ್ರತಿಮೆಯ ಪೀಠದ ಬಳಿ ಕಳೆದೆನೆಂದು ಗೋಚರಿಸಿತು. ನಾನು ಆ ಸ್ಥಳದಿಂದ ಹೊರಟು ಹೋಗಬೇಕೆನ್ನುವಷ್ಟರಲ್ಲಿ, ನನಗೆ ತುಸು ದೂರದಲ್ಲಿ ಒಂದು ಸಣ್ಣ ಹಕ್ಕಿ ಬಂದು ಕುಳಿತುಕೊಂಡಿತು. ಹತ್ತಿರದಲ್ಲೇ ಇದ್ದ ಪೊದೆಯ ಬಳಿ ಅವಿತುಕೊಂಡಿದ್ದ ಬೆಕ್ಕು-ಹಕ್ಕಿಯ ಮೇಲೆರಗಿತು. ಕ್ಷಣ ಮಾತ್ರದಲ್ಲಿ ಹಕ್ಕಿಯ ಅವತಾರ ಸಮಾಪ್ತಿಯಾಯಿತು. ಈ

ಆಕಸ್ಮಿಕ ದುರಂತದಿಂದ ಯೋಚನಾಪರವಶನಾಗಿ ಕುಳಿತಿದ್ದಾಗ, ನನ್ನ ತಲೆಯ ಮೇಲೆ ಒಂದು ಸಣ್ಣ ಕಲ್ಲಿನ ಹರಳು ಬಿದ್ದಂತಾಗಿ, ಎಚ್ಚರಗೊಂಡೆ. ನನ್ನ ತಲೆಯ ಮೇಲೆ ಬಿದ್ದ ಕಲ್ಲು ಹರಳನ್ನು ನೋಡಿದೆ—ಅದೊಂದು ಅಮೂಲ್ಯ ಮುತ್ತು! ನನ್ನ ಸುತ್ತಲೂ ಅಂತಹ ಅನೇಕ ಮುತ್ತುಗಳು ನೆಲದ ಮೇಲೆ ಬಿದ್ದಿದ್ದವು. ಪ್ರತಿಮೆಯನ್ನು ಕಣ್ಣಿಟ್ಟು ನೋಡಿದಾಗ ನನಗಾದ ವಿಸ್ಮಯ ಅಷ್ಟಿಷ್ಟಲ್ಲ. ಶಿಲಾಪ್ರತಿಮೆಯ ಸುಂದರ ವದನದಲ್ಲಿ ದುಃಖಾಶ್ರು ಚಿಮ್ಮುತ್ತಿದೆ. ಆ ಕರುಣಾಮೂರ್ತಿಯ ಕಪೋಲದಿಂದ ಕೆಳಗುರುಳುತ್ತಿದ್ದ ದುಃಖಬಿಂದುಗಳು ಘನೀಭೂತವಾಗಿ ಮುತ್ತಾಗುತ್ತಿದ್ದವು. "

ನ್ಯಾಯಾಧೀಶ ಈ ಸುಳ್ಳಿನ ಕಂತೆಯನ್ನು ನಂಬಲಿಲ್ಲ. ಆ ಊರಿನ ಪ್ರಜೆಗಳಾರೂ ತಮ್ಮ ವಶದಲ್ಲಿದ್ದ ಮುತ್ತು ಕಳವಾಗಿತ್ತೆಂದು ದೂರು ಕೊಡದಿದ್ದುದರಿಂದ ಕುಡುಕ ಪ್ರವಾಸಿಗೆ ಬಂಧವಿಮುಕ್ತಿಯಾಯಿತು. ಅವನಿಂದ ವಶಪಡಿಸಿಕೊಂಡ ಅಮೂಲ್ಯ ಮುತ್ತುಗಳು ನ್ಯಾಯಾಧಿಪತಿಯ ಏಳು ಅವಿವಾಹಿತ ಪುತ್ರಿಯರ ಕೊರಳುಗಳನ್ನು ಅಲಂಕರಿಸಿದುವು! ಕುಡುಕ ಪ್ರವಾಸಿ ಮಹಾ ಸುಳ್ಳುಗಾರನೆಂದು ಅವನ ಕತೆಯಲ್ಲಿ ಜನರಿಗೆ ಪ್ರತ್ಯಯ ಮೂಡಲಿಲ್ಲ. ಆದರೆ ಮಹಾವಿದ್ವಾಂಸರೊಬ್ಬರು, ಕುಡುಕ ಹೇಳಿದ ಕತೆ ಪೂರ್ಣವಾಗಿ ನಿಜವೆಂದು ಪ್ರಕಟಿಸಿದಾಗ ನಗರವಾಸಿಗಳು ವಿಸ್ಮಯಗೊಂಡರು.

"ಕರುಣೆಯ ಶಿಲಾಮೂರ್ತಿಗೆ ಸರಿಯಾದ ಪ್ರೇರಣೆಯುಂಟಾದರೆ, ಅದು ಮುತ್ತಿನ ದುಃಖಾಶ್ರುವನ್ನು ಚಿಮ್ಮಿಸುತ್ತದೆ" ಎಂದು ವಿದ್ವಾಂಸರು ಪ್ರಕಟಿಸಿದರು. ಈ ಅಧಿಕೃತ ಪ್ರಕಟನೆಯಿಂದ ಕೋಲಾಹಲ ಉಂಟಾದುದರಿಂದ, ನಗರದ ಪ್ರಮುಖ ಪ್ರಜೆಗಳ ಸಮಿತಿಯನ್ನು ರಚಿಸಿ, ಈ ರಹಸ್ಯದ ಶೋಧನೆ ಮಾಡಬೇಕೆಂದು ಕೋರಿಕೊಳ್ಳಲಾಯಿತು.

ಸಮಿತಿಯ ಸದಸ್ಯರ ಆಜ್ಞೆಯಂತೆ ಈ ಶಿಲಾಪ್ರತಿಮೆಯೆದುರಿಗೆ ಹೃದಯ-ವಿದ್ರಾವಕ ಪಾತ್ರ ಅಭಿನಯಿಸಲು ದುರಂತ ಪಾತ್ರಧಾರಿಗಳಿಗೆ ಅಧಿಕ ಹಣವನ್ನು ಕೊಟ್ಟರು; ಕರುಣೆ ಉಕ್ಕಿಬರುವಂತೆ ದುಃಖಪ್ರದರ್ಶಿಸಲು ವಿಧವೆಯರನ್ನು ನಿಯಮಿಸಿದರು. ಪ್ರತಿಮೆಯ ಎದುರಿಗೆ ನಿರಪರಾಧಿಗಳನ್ನು ಗಲ್ಲಿಗೇರಿಸಲಾಯಿತು; ನೂರಾರು ಅಂಗವಿಕಲರು ಪ್ರತಿಮೆಯ ಮುಂದೆ ಗುಂಪುಕೂಡಿ ದುಃಖಪ್ರದರ್ಶಿಸಿದರು. ಅನೇಕ ಮೂಕಪ್ರಾಣಿಗಳನ್ನೂ, ಹಕ್ಕಿಗಳನ್ನೂ ಪ್ರತಿಮೆಯ ಮುಂದೆ ಕೊಲ್ಲಲಾಯಿತು. ಆದರೆ ಕರುಣಾಶಿಲಾಪ್ರತಿಮೆಯ ಕಣ್ಣುಗಳಿಂದ ದುಃಖಾಶ್ರು ಚಿಮ್ಮಲಿಲ್ಲ.

ಸೋಲನ್ನೊಪ್ಪಿದ ಸಮಿತಿಯ ಸದಸ್ಯರು ನಿರಾಶೆಯಿಂದ ಕೈಚೆಲ್ಲಿದರು. ಸುಳ್ಳು ಹೇಳಿಕೆ ಹೊರಡಿಸಿದ ಮಹಾವಿದ್ವಾಂಸನನ್ನು ಆ ಊರಿನಿಂದ ಗಡಿಪಾರು ಮಾಡಿದರು.

ಒಂದು ದಿನ ಆ ಊರಿಗೆ ಒಬ್ಬ ಪ್ರಯಾಣಿಕ ಆಗಮಿಸಿದ. ಆತ ಆ ಊರಿನ ವಿಶ್ರಾಂತಿ ಗೃಹದಲ್ಲಿ ತಂಗಿದ್ದಾಗ "ಕರುಣಾ ಪ್ರತಿಮೆ"ಯ ಕತೆ ತಿಳಿಯಿತು. ಅದರ ಬಗ್ಗೆ ದೀರ್ಘ ಆಲೋಚನೆಯಲ್ಲಿ ಮಗ್ನನಾದ. ಅಕಸ್ಮಾತ್ತಾಗಿ ಅವನ ಸ್ಮೃತಿಫಲಕದಲ್ಲಿ ಒಂದು ಪ್ರಶ್ನೆ ಕಾಣಿಸಿಕೊಂಡಿತು: "ಒಬ್ಬ ವ್ಯಕ್ತಿ ಅನುಭವಿಸುವ ಅತಿಶಯವಾದ ಕರುಣೆ ಯಾವುದು ?"

ಮರುದಿನ ಬೆಳಗ್ಗೆ, ಆ ಪ್ರಯಾಣಿಕ ನಗರಾಧ್ಯಕ್ಷರ ಬಳಿ ಹೋಗಿ, "ಸ್ವಾಮಿ, ಈ ಶಿಲಾಪ್ರತಿಮೆ ಅಳುವಂತೆ ಮಾಡಿದರೆ, ದುಃಖಾಶ್ರುವಿನಿಂದ ಚಿಮ್ಮಿಸುವ ಮುತ್ತುಗಳಲ್ಲಿ ಅರ್ಧಭಾಗವನ್ನು ನನಗೆ ಕೊಡುವಿರಾ?" ಎಂದು ಕೇಳಿದ.

ಈ ನುಡಿಯಿಂದ ನಗರಾಧ್ಯಕ್ಷನ ಮನಸ್ಸು ಯೋಚನೆಗೊಳಗಾಯಿತು. "ಈ ಪ್ರಯಾಣಿಕ ಮಹಾ ಸಾಹಸಿಯಾಗಿರಬಹುದು. ಈಗ ಈ ಕರಾರಿಗೆ ಒಪ್ಪಿದರೆ, ನಂತರ ಇವನನ್ನು ಸುಲಿಗೆ ಮಾಡಿ ಕೊಲ್ಲಬಹುದು" ಎಂದು ಒಂದು ಕ್ಷಣ ಯೋಚಿಸಿ, ಕೃತಕ ನಗುವನ್ನು ಪ್ರದರ್ಶಿಸುತ್ತ, "ನಿನ್ನ ಮಾತಿಗೆ ಒಪ್ಪಿಗೆ ಕೊಟ್ಟಿದ್ದೇನೆ" ಎಂದ.

ಅರ್ಧತಾಸಿನ ನಂತರ, ಆ ಅಪರಿಚಿತ ಪ್ರಯಾಣಿಕ ನಗರ ಪ್ರಮುಖರ ಸಮ್ಮುಖದಲ್ಲಿ ಪ್ರತಿಮೆಯ ಎದುರಿಗೆ ನಿಂತು, ಅಮೃತಶಿಲೆಯ

ಚೆಲುವೆಯನ್ನು ಉದ್ದೇಶಿಸಿ ಹೇಳಿದ: "ಓ ಮಹಾದುಃಖಿನಿಯಾದ ಶ್ರೀಮಂತೆ! ಯುಗ ಯುಗಾಂತರದಿಂದ ಪತಿಯಿಂದಲೂ ಮಕ್ಕಳಿಂದಲೂ ಪರಿತ್ಯಕ್ತಳಾಗಿ ಇಲ್ಲಿ ಏಕಾಂಗಿನಿಯಾಗಿ ನಿಲ್ಲುವ ದುರವಸ್ಥೆ ನಿನ್ನದಾಯಿತೆ? ನೀನು ಮತ್ತೆಂದಿಗೂ ನಿನ್ನ ಪ್ರಿಯತಮನ ಅಪ್ಪುಗೆಯ ರೋಮಾಂಚವನ್ನಾಗಲಿ, ತಾಯ್ತನದ ಮಾಧುರ್ಯವನ್ನಾಗಲಿ ಅನುಭವಿಸಲಾರೆ. ಓ, ಚಿರ ದುಃಖಿನಿಯೇ, ಬಡ ಹೆಂಗಸೇ! ದಿನದಿನವೂ ನಿನ್ನೆದುರಿನಲ್ಲೇ ಹೋಗುತ್ತಿರುವ ಸಂತೋಷದ ಸಮುದಾಯವನ್ನು ನೋಡಿ ದುಃಖಿಸುವ ದುರವಸ್ಥೆ ನಿನ್ನದಾಗಬೇಕೆ? ಬೆಳುದಿಂಗಳ ರಾತ್ರಿಗಳಲ್ಲಿ ನೀನೊಬ್ಬಳೇ ವಿರಹಿಣಿಯಾಗಿ ಈ ಪೀಠದ ಮೇಲೆ ನಿಂತಿರುವೆಯಾ? ಈ ವಿಶ್ವದಲ್ಲಿ ನಿನ್ನೊಬ್ಬಳ ಹೃದಯದಲ್ಲಿ ಮಾತ್ರ ಪ್ರೇಮವಿಲ್ಲ; ಮಮತೆಯಿಲ್ಲ; ಸಂತೋಷವಿಲ್ಲ. ಅವುಗಳು ನಿನ್ನ ಬಳಿ ಎಂದಿಗೂ ಬರುವುದಿಲ್ಲ. ನಮ್ಮಲ್ಲಿ ಯಾರಿಗೆ ನಿನ್ನಂತಹ ದುರ್ಗತಿ ಬಂದಿದೆ? ಓ ಚೆಲುವೆ! ದುಃಖ....ದುಃಖ....ಅದೇ ನಿನ್ನ ದಾರುಣ ವಿಧಿ.... ಅಳು....ಅಳು....ದುಃಖಾಶ್ರು ಚಿಮ್ಮಿಸು! ಅಸಹಾಯಳಾದ ನಿನಗೆ ಯಾರೂ ಸಹಾಯ ಮಾಡಲಾರರು...."

ಆ ಪ್ರಯಾಣಿಕ ಒಮ್ಮೆಲೇ ಮಾತನಾಡುವುದನ್ನು ನಿಲ್ಲಿಸಿದ. ಹೊಳೆಯುತ್ತಿದ್ದ ಅಮೃತಶಿಲಾ ಪ್ರತಿಮೆ ದುಃಖಾಶ್ರು ಚಿಮ್ಮಿಸಲಾರಂಭಿಸಿತು. ದುಃಖಾಶ್ರುಗಳು ಪ್ರತಿಮೆಯ ಪೀಠದ ಮೇಲೆ ಉರುಳುತ್ತಿದ್ದಂತೆಯೇ ಅಮೂಲ್ಯ ಮುತ್ತುಗಳಾಗಿ ಪರಿವರ್ತನೆಗೊಂಡುವು. ದುಃಖಾಶ್ರು ನಿಲ್ಲುವುದರೊಳಗೆ ಎರಡು ಬುಟ್ಟಿಗಳಷ್ಟು ಮುತ್ತಿನ ರಾಶಿಯಾಯಿತು.

ಅಂದು ರಾತ್ರಿ ಆ ಪ್ರಯಾಣಿಕನ ಗೌರವಾರ್ಥವಾಗಿ ಸತ್ಕಾರಕೂಟ ಏರ್ಪಡಿಸಿದರು. ಆಗ ನಗರಾಧ್ಯಕ್ಷ ಪ್ರಯಾಣಿಕನನ್ನು ಕೇಳಿದ: "ಓ ಪ್ರಿಯ ಗೆಳೆಯ! ನಮ್ಮೆಲ್ಲರ ಪ್ರಯತ್ನವೂ ನಿರರ್ಥಕವಾದಾಗ ನೀನು ಹೇಗೆ ಜಯಶಾಲಿಯಾದೆ?"

"ನನ್ನ ಗೆಲವು ಅತಿ ಸರಳವಾದುದು" ಎಂದು ಪ್ರಯಾಣಿಕ ಹೇಳಿದ: "ಶಿಲಾಪ್ರತಿಮೆ ಅತ್ಯಧಿಕ ದುಃಖ ಅನುಭವಿಸುವಂತೆ ಮಾಡಿದಾಗ ದುಃಖಾಶ್ರು ಚಿಮ್ಮಿಸುತ್ತದೆಂದು ನನ್ನ ಭಾವನೆಯಾಯಿತು. ಸ್ವಾನುಕಂಪ ಮತ್ತು ಸ್ವಂತ ದುಃಖಕ್ಕಿಂತ ಮಿಗಿಲಾದ ಅಸಹನೀಯ ದುಃಖ ಮತ್ತಾವುದಿದ್ದೀತು? ಮತ್ತಾವುದು ದುಃಖಾಶ್ರು ಚಿಮ್ಮಿಸುವಷ್ಟು ಭಾವೋದ್ರೇಕವನ್ನುಂಟುಮಾಡಬಲ್ಲುದು?"

## ಹಿಂದೂವೃತ್ತಿ

**ಹಿಂದೂ ಆಧ್ಯಾತ್ಮಿಕತೆಯು ಅತ್ಯಂತ ಅಲೌಕಿಕ ಮತ್ತು ಆನಂದಮಯ ಅವಸ್ಥೆಯಲ್ಲಿ ಕೂಡ ಶಕ್ತಿ ಮತ್ತು ಕ್ರಿಯೆಯ ಛಾಯೆಯಿಂದೊಡಗೂಡಿದೆ. ಪೂರ್ಣ ಸಚ್ಚಿದಾನಂದ ಶಾಂತಿಗೆ ಅಷ್ಟು ಹೊಂದಿಕೆಯಾಗದ ಒಂದು ಬಗೆಯ ಮಾಂತ್ರಿಕ ಹೇತು ಅದರಲ್ಲಿರುವಂತೆ ಕಾಣುತ್ತದೆ. ಕರ್ಮ ಮತ್ತು ಪುನರ್ಜನ್ಮದ ಚಕ್ರವನ್ನು ಮುರಿಯುವುದೇ ಅದರ ಧ್ಯೇಯವೆನಿಸಿದರೂ ಆ ಚಕ್ರದಲ್ಲಿ ಅದು ಸಿಲುಕಿಕೊಂಡಿದೆ. ಹೀಗಾಗಿ ಹಿಂದುವಿನ ಆತ್ಮವಾದಕ್ಕೂ ಸಂಸಾರಬಂಧಕ್ಕೂ ಒಂದು ಸೂಕ್ಷ್ಮ ಸಂಬಂಧವಿದೆ. ಅವನು ಆತ್ಮಮಗ್ನನಾಗಿರುವಾಗ ವಿದ್ಯುತ್ತನ್ನು ಉತ್ಪಾದಿಸುವ ಡೈನೆಮೋದಂತಿರುತ್ತಾನೆ; ಸಂಸಾರ ಜೀವನದಲ್ಲಿ ಆ ವಿದ್ಯುತ್ತನ್ನು ವಿನಿಯೋಗಿಸುವ ಮೋಟಾರಿನಂತಿರುತ್ತಾನೆ.**

— ನೀರದ ಚೌಧುರಿ



# ಮಯೂರ ಸಿಂಹಾಸನದ ದುರಂತ

**ಮೊಗಲ ಚಕ್ರವರ್ತಿ ಶಾಹಜಹಾನ ಅದನ್ನು ರಚಿಸಿದ ;**
**ಅವನ ಮೊಮ್ಮಗ ಮುಹಮ್ಮದಶಾಹ ಅದನ್ನು ಕಳೆದುಕೊಂಡ ;**
**ನಾದಿರಶಾಹ ಅದನ್ನು ಕಿತ್ತುಕೊಂಡ—ಆದರದು ಅವನಿಗೆ ದಕ್ಕಿತೆ ?**

ಮೊಗಲ ಬಾದಶಾಹರ ಸಂಪತ್ತು ಅಗಣಿತವಾಗಿತ್ತು. ಅವರ ಬೊಕ್ಕಸದಲ್ಲಿ ಸಹಸ್ರಾರು ಮಣಗಟ್ಟಲೆ ಬಂಗಾರ, ಬೆಳ್ಳಿ, ಗಾಡಿಗಾಡಿ ತುಂಬುವಷ್ಟು ಮುತ್ತು-ರತ್ನ-ವಜ್ರಾದಿಗಳಿದ್ದವು. ನಾದಿರಶಾಹನು ದಿಲ್ಲಿಯನ್ನು ಲೂಟಿಮಾಡಿಕೊಂಡು ತಿರುಗಿ ಹೋಗುವಾಗ ೮,೭೦,೦೦,೦೦೦ ಪೌಂಡು ಬೆಲೆಯ ಸಂಪತ್ತನ್ನು ಒಯ್ದನೆಂದು ಅಂದಾಜುಮಾಡಿದ್ದಾರೆ. ಮೊಗಲ ಬಾದಶಾಹ ಶಾಹಜಹಾನನಲ್ಲಿ ಸುಮಾರು ೧೦ ಅಬ್ಜ ರೂಪಾಯಿಗಳ ಬೆಲೆ ಬಾಳುವ ಸಂಪತ್ತಿದ್ದಿತು. ಆಗ ರೂಪಾಯಿಯ ಬೆಲೆ ಸದ್ಯಕ್ಕಿಂತ ಅಧಿಕವಾಗಿತ್ತು ಎನ್ನುವದನ್ನು ಗಮನಿಸಿದಾಗ ಈ ಅತುಲ ಸಂಪತ್ತಿನ ಕಲ್ಪನೆಯೆ ನಮ್ಮನ್ನು ಆಶ್ಚರ್ಯಚಕಿತರನ್ನಾಗಿ ಮಾಡಲು ಸಾಕು.

ಜಹಾಂಗೀರನ ಅನಂತರ ಅವನ ಮಗ ಖುರ್ರಾಮ "ಶಾಹಜಹಾನ" ಅಂದರೆ "ಜಗತ್ತಿನ ರಾಜ" ಎಂಬ ಬಿರುದನ್ನು ಧರಿಸಿ ಪಟ್ಟವನ್ನೇರಿದ. ಅವನೆದುರು ಆಗ ಎರಡು ಮುಖ್ಯ ಸಮಸ್ಯೆಗಳಿದ್ದವು: ತನಗೆ ಪ್ರತಿಸ್ಪರ್ಧಿಗಳಾಗಿದ್ದ ತನ್ನ ಬಂಧುಗಳನ್ನು ನಿರ್ನಾಮ ಮಾಡುವದು ಮತ್ತು ರಾಜಬೊಕ್ಕಸವನ್ನು ಸ್ವಾಧೀನಪಡಿಸಿಕೊಳ್ಳುವದು. ಶಾಹಜಹಾನ ಅತ್ಯಂತ ನಿರ್ದಯ ರೀತಿಯಲ್ಲಿ ಬಂಧುಕಂಟಕವನ್ನು ನಿವಾರಿಸಿಕೊಂಡ. ಭಯಭೀತರಾದ ಮಂತ್ರಿಗಳು ಆಗ್ರಾದಲ್ಲಿಯ ರಾಜ ಬೊಕ್ಕಸವನ್ನು ಪಿಟ್ಟೆನ್ನದೆ ಅವನಿಗೆ ಒಪ್ಪಿಸಿ ಕೊಟ್ಟರು.

ಎರಡು ವಿಶಾಲವಾದ ನೆಲಮಾಳಿಗೆಗಳಲ್ಲಿ ತನ್ನ ಹಿರಿಯರು ಕೂಡಿಟ್ಟಿದ್ದ ಬಂಗಾರ, ಬೆಳ್ಳಿ, ವಜ್ರ, ಮುತ್ತುರತ್ನಾದಿಗಳ ಅಗಣಿತ ಸಂಪತ್ತನ್ನು ಕಂಡು ಶಾಹಜಹಾನನ ಕಣ್ಣುಗಳು ಕುಕ್ಕಿಹೋದವು. ಈ ಅಪಾರ ಸಂಪತ್ತಿನ ವಿನಿಯೋಗದ ವಿಚಾರ ಮಾಡುತ್ತಿರುವಾಗ ಜಗತ್ಪ್ರಸಿದ್ಧ ಮಯೂರಸಿಂಹಾಸನವನ್ನು ಮಾಡಿಸುವ ವಿಚಾರ ಶಾಹಜಹಾನನಿಗೆ ಹೊಳೆದಿರಬೇಕು ಎನ್ನುತ್ತಾರೆ.

ಅದರಂತೆ ಮಯೂರಸಿಂಹಾಸನದ ನಿರ್ಮಾಣಕ್ಕೆ ಇನ್ನೊಂದು ಸಂಗತಿ ಕಾರಣವಾಯಿತೆಂದೂ ಹೇಳುವವರಿದ್ದಾರೆ. ಸಂಗ್ರಹವಾದ ಸಂಪತ್ತನ್ನು ಇಡಲು ಸ್ಥಳವೇ ಸಾಲದಾಗಿರುವದರಿಂದ ಅದಕ್ಕಾಗಿ ಏನಾದರೊಂದು ವ್ಯವಸ್ಥೆಯನ್ನು ಕೂಡಲೆ ಮಾಡಬೇಕು ಎಂದು ಕೋಶಾಧ್ಯಕ್ಷನು ಬಾದಶಾಹನಲ್ಲಿ ಅರಿಕೆ ಮಾಡಿಕೊಂಡನು. ಮುತ್ತು ರತ್ನಗಳ ಸಂಗ್ರಹ ಕಡಿಮೆ ಮಾಡುವದಕ್ಕಾಗಿ ಶಾಹಜಹಾನನು ರತ್ನಖಚಿತವಾದ ಮಯೂರ ಸಿಂಹಾಸನವನ್ನು ಮಾಡಿಸಿದನು.

೧೭ನೆಯ ಶತಮಾನದ ಕೊನೆಯಲ್ಲಿ ತಯಾರಾದ ಈ ಸಿಂಹಾಸನದ ಬೆಲೆ ಆಗಿನ ಕಾಲದಲ್ಲಿ ೫೭ ಕೋಟಿ ರೂಪಾಯಿಗಳಷ್ಟಿತ್ತು. ಈ ಸಿಂಹಾಸನ ತಯಾರಿಸಲು ಕುಶಲ ಶಿಲ್ಪಿಗಳು ಏಳು ವರ್ಷ ದುಡಿದರು. ಇದರ ರಚನೆಯಲ್ಲಿ ಆಮ್ಸ್ಟರಡ್ಯಾಮಿನ ಚಿನಿವಾಲರ ಸಲಹೆಯನ್ನು ಕೇಳಲಾಗಿತ್ತಂತೆ.

೧೭ನೆಯ ಶತಮಾನದ ಫ್ರೆಂಚ ಪ್ರವಾಸಿ ಜೀನ ದ ಥೀವನಾಟ (Jean de Thevenot) ನು ತನ್ನ ಭಾರತ ಪ್ರವಾಸ ವೃತ್ತಾಂತದಲ್ಲಿ "ಈ



ಅದ್ಭುತ ಸಿಂಹಾಸನದ ಬೆಲೆ ಏನಿಲ್ಲೆಂದರೂ ೨ ಕೋಟಿ ಸುವರ್ಣ ನಾಣ್ಯಗಳಿರಬೇಕು. ಆದರೆ ಇದರ ನಿಜವಾದ ಬೆಲೆಯನ್ನು ಹೇಳುವದು ಯಾರಿಗೆ ಸಾಧ್ಯ? '' ಎಂದು ಬರೆದಿದ್ದಾನೆ.

ಭಾರತದಲ್ಲಿ ಪ್ರವಾಸ ಮಾಡಿದ ಗಿಯೊವನಿ ಕಾರೆರಿ ( Giovanni Careri ) ಎಂಬಾತ "ವಜ್ರ, ಪಚ್ಚೆ, ಹವಳ ರತ್ನಾದಿಗಳಿಂದ ಖಚಿತ ವಾದ ಈ ಸಿಂಹಾಸನವನ್ನು ವರ್ಣಿಸುವದಾದರೂ ಎಂತು? ಇದರ ಬೆಲೆಯನ್ನು ಕಟ್ಟುವದು ಸಾಹಸದ ಮಾತೇ ಸರಿ" ಎಂದಿದ್ದಾನೆ.

ಮಯೂರ ಸಿಂಹಾಸನವು ಆರು ಅಡಿ ಉದ್ದ, ನಾಲ್ಕು ಅಡಿ ಅಗಲದ ಮಂಚದೋಪಾದಿಯಲ್ಲಿ ಇದ್ದಿತು. ಇದು ಎರಡು ಅಡಿ ಎತ್ತರವಾಗಿತ್ತು. ಇದಕ್ಕೆ ನಾಲ್ಕು ಗಟ್ಟಿ ಬಂಗಾರದ ಕಾಲುಗಳಿದ್ದವು, ಬೆಳ್ಳಿಯ ಮೆಟ್ಟಲುಗಳಿದ್ದವು. ಇದರ ಛತ್ರವು ಹನ್ನೆರಡು ಸಣ್ಣ ಕಂಬಗಳ ಆಧಾರದ ಮೇಲೆ ನಿಂತಿತ್ತು. ಈ ಕಂಬಗಳಲ್ಲಿ ಮುತ್ತುರತ್ನಾದಿಗ ಳನ್ನು ಕೂಡಿಸಿದ್ದರು. ಒರಗಿಕೊಳ್ಳುವ ಭಾಗ ದಲ್ಲಿ ವಜ್ರ, ಪಚ್ಚೆ ರತ್ನಮಯವಾದ, ಗರಿಗೆದರಿ ನಿಂತ ಎರಡು ನವಿಲುಗಳನ್ನು ಬಿಡಿಸಿದ್ದರು.

ಮಯೂರ ಸಿಂಹಾಸನವು ದಿವಾನ-ಇ-ಆಮ (ದರಬಾರ)ದಲ್ಲಿ ಇಡಲ್ಪಟ್ಟಿತ್ತು. ಸುಮಾರು ಒಂದು ಶತಮಾನದ ವರೆಗೆ ಈ ಸಿಂಹಾಸನವು ಮೊಗಲು ಬಾದಶಾಹರ ಅಗಣಿತ ಸಂಪತ್ತಿನ ಹಾಗೂ ಗೌರವದ ಪ್ರತೀಕವಾಗಿ ಮೆರೆಯಿತು. ೧೭೩೮ರಲ್ಲಿ ಇರಾಣದ ಬಾದಶಾಹ ನಾದಿರ-ಶಾಹನು ಭಾರತದ ಮೇಲೆ ದಂಡೆತ್ತಿ ಬಂದನು. ಆಗಿನ ವಿಲಾಸಿ ಮೊಗಲ ಬಾದಶಾಹ ಮಹಮ್ಮದ ಶಾಹನು ಪ್ರಬಲನಾಗಿರಲಿಲ್ಲ.

ನಾದಿರಶಾಹ ಸುಲಭದಲ್ಲಿ ದಿಲ್ಲಿಯನ್ನು ಆಕ್ರ ಮಿಸಿ ಅಲ್ಲಿ ಎರಡು ತಿಂಗಳ ಕಾಲ ನೆಲೆನಿಂತನು. ಈ ಅವಧಿಯಲ್ಲಿ ಮೊಗಲ ಬಾದಶಾಹರು ಮೂರು ಶತಮಾನಗಳಿಂದ ಕೂಡಿಹಾಕಿದ ಅಗಣಿತ ಸಂಪ ತ್ತನ್ನು ಅವನು ಸುಲಿದನು. ಮರಳಿ ಹೋಗು ವಾಗ ಮಯೂರಸಿಂಹಾಸನವನ್ನೂ ಕೋಹಿ ನೂರು ವಜ್ರವನ್ನೂ ತೆಗೆದುಕೊಂಡು ಹೋದನು. ದರಬಾರದ ಭತ್ತಿಗೆ ಬಡಿದಿದ್ದ ಬೆಳ್ಳಿಯ ತಗಡು ಗಳನ್ನು ಕೂಡ ಅವನು ಬಿಡಲಿಲ್ಲ. ಅವುಗಳನ್ನು ಕಿತ್ತು ಅದರಿಂದ ೧೭ ಲಕ್ಷ ರೂಪಾಯಿಯ ನಾಣ್ಯಗಳನ್ನು ಮಾಡಿಸಿಕೊಂಡು ಹೋದನು. ಮಯೂರಸಿಂಹಾಸನದ ಬೆಲೆಯನ್ನು ಹೊರತು ಪಡಿಸಿ ಆತ ಸುಮಾರು ೮,೭೦,೦೦,೦೦೦ ಪೌಂಡು ಬೆಲೆಯ ಸಂಪತ್ತನ್ನು ದಿಲ್ಲಿಯಿಂದ ಒಯ್ದನು.

ನಾದಿರಶಾಹ ವಿಜಯದುಂದುಭಿ ಮೊಳಗಿ ಸುತ್ತ ಸ್ವದೇಶಕ್ಕೆ ಹೊರಟಿದ್ದಾಗ ಮಾರ್ಗದಲ್ಲಿ ಅವನ ಕೊಲೆಯಾಯಿತು.

ನಾದಿರಶಾಹ ದಿಲ್ಲಿಯಿಂದ ಹೊರಟ ದಿನವೇ ಪರಾಜಿತ ಮಹಮ್ಮದ ಶಾಹನು ದಿವಾನ-ಇ-ಆ ಮದಲ್ಲಿ ಹತಾಶನಾಗಿ ಕುಳಿತು '' ಸಾಮತೇ ಆಮಾಲೇ ಮಾಂ ಈ ಸೂರತೇ ನಾದೀರ ಗಿರಿ-ಫತ್ " ( ಅದೃಷ್ಟ ಕೆಟ್ಟಿತು. ನನ್ನ ಕರ್ಮದ ಫಲವೇ ನಾದಿರನ ರೂಪದಲ್ಲಿ ಎದುರು ಬಂದಿತು ) ಎಂಬ ಉದ್ಗಾರ ತೆಗೆದನು. ಜನರೂ ಅದೇ ರೀತಿಯಾಗಿ ಬಾದಶಾಹನನ್ನು ದೂಷಿಸತೊಡಗಿ ದ್ದರು. ಆದರೆ ಬಾದಶಾಹನ ಚಿತ್ರಕಾರನೂ ಲೇಖಕನೂ ಆಗಿದ್ದ ಸಾಲೇ ಬೇಗ ಮಾತ್ರ ಹಾಗೆ ಭಾವಿಸಲಿಲ್ಲ.

ಮಯೂರಾಸನದ ಬೆನ್ನ ಹಿಂದೆ ಗೋಡೆಯ ಮೇಲೆ ಸುಂದರವಾದ ಪುಷ್ಪಗಳನ್ನು ಬಿಡಿಸಿ ಅವು ಗಳ ನಡುವೆ ಸುವರ್ಣಾಕ್ಷರಗಳಿಂದ "ಭೂಸ್ವರ್ಗ ವೆಂಬುದು ಎಲ್ಲಾದರೂ ಇದ್ದರೆ ಅದು ಇಲ್ಲಿಯೇ ಇದೆ; ಇಲ್ಲಿಯೇ ಇದೆ; ಇಲ್ಲಿಯೇ ಇದೆ!" ಎಂದು ಬರೆಯಲಾಗಿತ್ತು.

ಮಹಮ್ಮದ ಶಾಹ ಇಂದು ಮಯೂರಾಸನದ ಬರಿದಾದ ಸ್ಥಳದಲ್ಲಿ ಕುಳಿತು ತನ್ನ ಕರ್ಮಫಲ ವನ್ನು ನಿಂದಿಸಿಕೊಂಡಿದ್ದನು. ಈ ದೃಶ್ಯವನ್ನು ಕಂಡು ಸಾಲೇ ಬೇಗನ ಅಂತಃಕರಣ ಕದಡಿ ಹೋಯಿತು. ದರಬಾರದಲ್ಲಿ ಎಲ್ಲರೂ ದುಃಖಿತ ರಾಗಿ ಕುಳಿತಿದ್ದಂತೆ ಆತ ಎದ್ದು ನಿಂತು ಬಾದ ಶಾಹನಿಗೆ ಕುರ್ನಿಸಾತ ಮಾಡಿ ಒಂದಕ್ಷರವನ್ನೂ ಆಡದೆ ಹೆಜ್ಜೆಯ ಸಪ್ಪಳವನ್ನೂ ಮಾಡದೆ ಅಲ್ಲಿಂದ ಹೊರಟುಹೋದನು.

ಮನೆಗೆ ಬಂದ ಬಳಿಕ ಸಾಲೇ ಬೇಗನು ದರ

ಬಾರದಲ್ಲಿ ತಾನು ಕಂಡಿದ್ದ ಕರುಣಾಜನಕದೃಶ್ಯದ ಚಿತ್ರವನ್ನು ಬರೆದು ಅದರಡಿಯಲ್ಲಿ ಮಹಮ್ಮದ ಶಾಹನ ಬಾಯಿಂದ ಹೊರಬಿದ್ದ ವಾಕ್ಯವನ್ನು ಬರೆದಿಟ್ಟನು. ಬಳಿಕ ಆತನು ತನ್ನ ಚಿತ್ರಕಲಾ ಸಾಹಿತ್ಯ, ಒಂದು ತೀಕ್ಷ್ಣಧಾರೆಯ ಚಾಕು ಮತ್ತು ತುಸು ಆಹಾರವನ್ನು ಕಟ್ಟಿಕೊಂಡು ಮನೆಯಿಂದ ಹೊರಬಿದ್ದು ದಿಲ್ಲಿಯನ್ನು ಬಿಟ್ಟು ಹೊರಟು ಹೋದನು. ಸಾಲೇ ಬೇಗನಿಗೆ ಸಂಸಾರವಿರಲಿಲ್ಲ.

ಮರುದಿನ ಬಾದಶಾಹನಿಗೆ ಈ ವಿಚಾರ ತಿಳಿದು ಬಂದಾಗ, ಆತ "ಅಯ್ಯೋ! ದುರ್ದೈವವೇ! ಹೃದಯದ ದುಃಖವನ್ನು ತೋಡಿಕೊಳ್ಳಲು ಇದ್ದ ಒಂದು ಸಾಧನವೂ ಇಲ್ಲದಂತಾಯಿತು. ಇನ್ನು ಮನಸ್ಸಿನ ವ್ಯಥೆಯನ್ನು ಮನಸ್ಸಿನಲ್ಲಿಯೇ ಇಟ್ಟುಕೊಂಡು ಕೊರಗಬೇಕಲ್ಲಾ" ಎಂದನು.

ವಿಜಯದಿಂದ ಉನ್ಮತ್ತನಾಗಿ ನಾದಿರಶಾಹನು ಕಾಬೂಲ ಮಾರ್ಗವಾಗಿ ಹೊರಟಿದ್ದನು. ಕೂಲಿ ಆಳುಗಳ ಹೆಗಲಮೇಲೆ ಮಯೂರಾಸನವು ಬುರ-ಖಾ ಹಾಕಿಕೊಂಡು ಸಾಗಿದ್ದಿತು. ಅದನ್ನು ಹೊತ್ತ ಕೂಲಿಗಳಲ್ಲಿ ಸಾಲೇ ಬೇಗನೂ ಒಬ್ಬನಾಗಿದ್ದನು.

ಪ್ರಯಾಣ ಮಾಡುತ್ತಿರುವಾಗ ಹಾದಿಯಲ್ಲಿ 'ರೋಜಾ ಇಮಾಮ ಮುಸಿರೋಜಾ' ಮಸೀದೆಯೂ ತುಸು ದೂರದಲ್ಲಿದ್ದ 'ಮಸೂದಾ' ಕೋಟೆಯೂ ಕಣ್ಣಿಗೆ ಬಿದ್ದಿತು. ಮಸೀದೆಯ ಸಮೀಪಕ್ಕೆ ಬಂದೊಡನೆ ನಾದಿರಶಾಹನು ಬಹು ಭಕ್ತಿಭಾವದಿಂದ ಮಯೂರಾಸನವನ್ನು ಇಮಾಮ ರೋಜಾಕ್ಕೆ ಸಮರ್ಪಣೆ ಮಾಡಿ ಅದನ್ನು ಮಸೀದೆಯೊಳಗಿಟ್ಟು ತಾನು ಸೈನ್ಯ ಸಮೇತ ಮಸೂದ ಕೋಟೆಗೆ ಹೋದನು.

ದಿಲ್ಲಿಯಲ್ಲಿ ತಾನೆಸಗಿದ ಅತ್ಯಾಚಾರಗಳ ಪಾಪವು ಮಯೂರಾಸನವನ್ನು ಮಸೀದೆಗೆ ಅರ್ಪಿಸಿದ್ದರಿಂದ ತೊಳೆದು ಹೋಗುವದು ಎಂದು ನಾದಿರಶಾಹ ನಂಬಿದ್ದನು. ಆದರೆ ಹಾಗಾಗಲಿಲ್ಲ. ಅದು ಹೇಗೋ ಏನೋ ಮೂರು ದಿನಗಳ ವರೆಗೆ ಪ್ರತಿರಾತ್ರಿ ಮಯೂರಾಸನವು ಮಸೀದೆಯ ಹೊರಗೆ ಎಸೆಯಲ್ಪಟ್ಟಿತು. ಈ ಸಂಗತಿ ಕೇಳಿದ ನಾದಿರಶಾಹ ಕ್ರೋಧಸಂತಪ್ತನಾಗಿ ನಾಲ್ಕನೆಯ ದಿನ ಇಮಾಮರೋಜಾದ ಎದುರುಬಂದು ನಿಂತು "ರಜಾ ಆಜ ಮನ ಜಂಗ ಮಿಷಾಹದ" (ಯುದ್ಧಂ ದೇಹಿ) ಎಂದು ಮೂರು ಸಲ ಕೂಗಿದನು.

ಅವನ ಈ ಆಹ್ವಾನ ಸ್ವೀಕೃತವಾಯಿತೇನೊ ಎನ್ನುವಂತೆ ಅಂದು ರಾತ್ರಿ ನಾದಿರಶಾಹ ಕಿಲ್ಲೆಯಲ್ಲಿ ಮಲಗಿದ್ದಾಗ ಓರ್ವ ಅಜ್ಞಾತ ವ್ಯಕ್ತಿ ಆತನ ಎದೆಯನ್ನು ಚಾಕುವಿನಿಂದ ಇರಿದು ಅವನ ಕೊಲೆ ಮಾಡಿದನು.

ಗ್ರೀಷ್ಮ ಋತುವಿನ ಒಂದು ಸಂಧ್ಯಾಕಾಲದಲ್ಲಿ ರಂಗಮಹಲಿನ ಬಯಲು ಅಟ್ಟದ ಮೇಲೆ ಮಹಮ್ಮದಶಾಹನು ದಾಸಿಯರು ಹೊತ್ತಿದ್ದ ಸುಖಾಸನದಲ್ಲಿ ಕುಳಿತು ಶೀತಲವಾದ ವಾಯುವನ್ನು ಸೇವಿಸುತ್ತಿದ್ದ. ಇನ್ನೂ ದೀಪ ಹಚ್ಚಿರಲಿಲ್ಲ. ಅಷ್ಟರಲ್ಲಿ ಕಾವಲಿದ್ದ ತಾರ್ತರ ದಾಸಿಯೊಬ್ಬಳು ಬಂದು ಬಾದಶಾಹನ ಕೈಗೊಂದು ಚಿತ್ರವನ್ನಿತ್ತು "ನಾದಿರ ಶಾಹ ಸತ್ತ. ಸಾಲೇ ಬೇಗ ಇದೀಗ ಮಸೂದದಿಂದ ಬಂದಿದ್ದಾನೆ. ಆತನೇ ಈ ಸುದ್ದಿಯನ್ನು ತಂದಿದ್ದು ಈ ಅಲ್ಪ ಕಾಣಿಕೆಯನ್ನು ಬಾದಶಾಹರಿಗೆ ಅರ್ಪಿಸಿದ್ದಾನೆ" ಎಂದಳು.

ಬಾದಶಾಹನು ಅತ್ಯಂತ ಉತ್ಸುಕನಾಗಿ ಆ ಚಿತ್ರವನ್ನು ನೋಡಿದ. ಅದರಲ್ಲಿ ಒಂದೆಡೆ ಸರ್ವಸ್ವವನ್ನು ಕಳೆದುಕೊಂಡ ಮೊಗಲ ಬಾದಶಾಹ ದಿವಾನ-ಇ-ಆಮದಲ್ಲಿ ಕುಳಿತಿದ್ದು ಕೆಳಗೆ "ಸಾಮತೆ ಆಮಾಲೆ ಮಾಂಈ ಸೂರತೆ ನಾದಿರ ಗಿರಿಫಿತ್" ಎಂದು ಬರೆಯಲಾಗಿತ್ತು. ಇನ್ನೊಂ-ದೆಡೆ ನಾದಿರ ಶಾಹನ ಎದೆಯಲ್ಲಿ ಚಾಕುವನ್ನು ಇರಿದು ರಕ್ತಪ್ರವಾಹವನ್ನು ಹರಿಸಿ ಸಾಲೇ ಬೇಗ ನಿಂತಿದ್ದನು. ಈ ಚಿತ್ರದ ಕೆಳಗೆ ಕೆಂಪಕ್ಷರಗ-ಳಿಂದ "ಬ ಏಕ ಗರ್ದಿಸೆ ಚರಖ ನೀಲೂ ಪರಿ। ನಾ ನಾದಿರ ವಜಾಮೂಂದನೇ ನಾದರಿ॥" ಎಂದು ಬರೆದಿತ್ತು. "ಸುನೀಲ ನೀಲಾಂಬುಜದಂತೆ ಇರುವ ನೀಲಾಕಾಶ ಒಮ್ಮೆಯೆ ಪರಿವರ್ತಿತವಾ-ಗುವಷ್ಟರಲ್ಲಿ ನಾದಿರಶಾಹ ಮತ್ತು ಜೊತೆಗೆ ಆತನ ಆಳಿಕೆ ಕೂಡ ಲುಪ್ತವಾಗಿ ಹೋಯಿತು" ಎಂದು ಈ ವಾಕ್ಯಗಳ ಅರ್ಥವಾಗುತ್ತದೆ.

ಮಯೂರಾಸನದ ಗತಿ ಮುಂದೇನಾಯಿತು ಎನ್ನುವದು ನಿಶ್ಚಿತವಾಗಿ ಹೇಳಲು ಬರುವಂತಿಲ್ಲ.

ರಂ. ರಾ. ತಲಚೇರಿಕ

# ಕ್ಷುಲ್ಲಕ ಕಾರಣಕ್ಕಾಗಿ ನ್ಯಾಯ !

**ಕೋರ್ಟುಕೀಟಗಳ ಕೀಟಲೆಗಳಿಗೆ**
**ನ್ಯಾಯಾಧೀಶರು ಅರೆದ ಮದ್ದು ಸ್ವಾರಸ್ಯವಾಗಿದೆ**

ಮೆಕಾಲೆ ಸಾಹೇಬರಿಂದ ಒಂದು ಶತಮಾನದ ಕೆಳಗೆ ರಚಿತವಾದ ಇಂಡಿಯನ್ ಪೀನಲ ಕೋಡು ಅಪರಾಧ ಸಂಬಂಧದ ಕಾಯದೆಗಳಲ್ಲಿ ಜಗತ್ತಿನಲ್ಲೇ ಪ್ರಥಮ ಸ್ಥಾನವನ್ನು ಪಡೆಯಲು ಪಾತ್ರವಾದುದೆಂಬ ಪ್ರತೀತಿ ಇದೆ. ಅದರೊಳಗಿನ ಅಪರಾಧಗಳ ವಿವರಣೆಯು ಸ್ವಯಂಪೂರ್ಣವೂ ವ್ಯಾಪಕವೂ ಆಗಿದ್ದು ಮತಭೇದಕ್ಕೆ ಎಡೆ ಇಲ್ಲದ ಅವುಗಳ ವ್ಯಾಖ್ಯೆಯೂ ಸುಂದರ ಶೈಲಿಯೂ ವಿದ್ವಾಂಸರ ಹಾಗೂ ಸಾಹಿತಿಗಳ ಮೆಚ್ಚುಗೆಯನ್ನು ಪಡೆದಿದೆ.

ಮೆಕಾಲೆ ಸಾಹೇಬರ ದೃಷ್ಟಿಕೋನವು ವಿಶಾಲವಾಗಿತ್ತು. ಪೀನಲ ಕೋಡಿನ ಅಪರಾಧಗಳ ವ್ಯಾಖ್ಯೆಯನ್ನು ಅಕ್ಷರಶಃ ಆಚರಣೆಯಲ್ಲಿ ತಂದರೆ ಕೆಲವು ಸಂದರ್ಭಗಳಲ್ಲಿ ಆಗಬಹುದಾದ ಅನರ್ಥಗಳನ್ನು ಅವರು ಮನಗಾಣದೆ ಇರಲಿಲ್ಲ. ಅಂತಹ ಪರಿಣಾಮವನ್ನು ತಪ್ಪಿಸುವ ಸಲುವಾಗಿ ಪೀನಲ ಕೋಡಿನಲ್ಲಿ “ ಸಾಮಾನ್ಯ ಅಪವಾದಗಳು ” ಎಂಬ ಅಧ್ಯಾಯವನ್ನು ಅವರು ಸೇರಿಸಿದರು. ಅವರ ಶಬ್ದಗಳಲ್ಲೇ ಹೇಳುವದಾದರೆ “ ಪೀನಲ ಕೋಡಿನ ವ್ಯಾಖ್ಯೆಯ ಪ್ರಕಾರ ಇನ್ನೊಬ್ಬನ ಮಸಿ ಕುಡಿಕೆಯಲ್ಲಿ ಲೇಖನಿಯನ್ನು ಅದ್ದುವದು ಕಳವಿನ ಅಪರಾಧವಾಗುವದು. ಗಾಡಿ ಹತ್ತುವದರಲ್ಲಿ ಒಬ್ಬನನ್ನು ತುಸು ದೂಡುವದು ಬಲಾತ್ಕಾರದ ಅಪರಾಧವಾಗಬಹುದು ಆದರೆ, ಇಂತಹ ಅಲ್ಪ ಪರಿಣಾಮಕಾರಿ ಕೃತ್ಯಗಳನ್ನು ಸಮಾಜದಲ್ಲಿ ಎಲ್ಲರೂ ಮಾಡುತ್ತಾರೆ. ಅಂಥವುಗಳನ್ನು ಮಾಡಬಾರದೆಂದರೆ, ಸಮಾಜ ಜೀವನವೇ ದುಃಸಾಧ್ಯವಾದೀತು. ”

ಇಂತಹ ಕ್ಷುಲ್ಲಕ ಕೃತ್ಯಗಳನ್ನು ಅಪರಾಧಗಳ ವ್ಯಾಖ್ಯೆಯಲ್ಲಿ ಬರುವವೆಂಬ ಕಾರಣದಿಂದ ಅಪರಾಧಗಳಾಗಿ ಪರಿಗಣಿಸಿದರೆ, ಕಾಯದೆಯ ವಿಡಂಬನೆಯಾಗುವದಷ್ಟೇ ಅಲ್ಲ, ಸಮಾಜದಲ್ಲಿ ಹಾಸ್ಯಾಸ್ಪದ ಹಾಗೂ ದುಃಸಹ ಪರಿಸ್ಥಿತಿ ಉಂಟಾದೀತು. ಇದರ ನಿವಾರಣೆಗಾಗಿಯೇ ಪೀನಲ ಕೋಡಿನ ೯೫ ನೇ ಕಲಮಿನಲ್ಲಿ ಕ್ಷುಲ್ಲಕ “ ಅಪರಾಧ ” ಗಳನ್ನು ಹೊರತುಪಡಿಸಿದೆ.

ನೈಸರ್ಗಿಕವಾಗಿ ಮಾನವನಲ್ಲಿ ಹೊಡೆದಾಡುವ ಪ್ರವೃತ್ತಿ ಇರುತ್ತದೆಂದು ಕೆಲವು ಮಾನಸಶಾಸ್ತ್ರಜ್ಞರ ಮತವಿದೆ. ಸಂಸ್ಕೃತಿ ಅಥವಾ ಧರ್ಮಭೀರುತನದಿಂದ ಅಂತಹ ಪ್ರವೃತ್ತಿಯು ನಿಯಂತ್ರಿತವಾಗುತ್ತದೆ. ಆ ರೀತಿಯ ಸಂಸ್ಕಾರಗಳಿಲ್ಲದ ಮನುಷ್ಯನನ್ನು ಹೊಡೆದಾಟದ ಪ್ರವೃತ್ತಿಯಿಂದ ಪರಾವೃತ್ತಗೊಳಿಸುವ ಶಕ್ತಿಯೆಂದರೆ, ಹೊಡೆದಾಟವು ಕಾಯದೆಯ ಕಕ್ಷೆಯಲ್ಲಿ ಬರುವ

ಕಾರಣದಿಂದ, ಕಾಯದೆಯು ಕೊಡುವ ಶಿಕ್ಷೆಯ ಭೀತಿಯೊಂದೇ.

ಆದರೆ, ಶಿಕ್ಷೆಯ ಭೀತಿಯಿಂದ ಮಾನವನ ಸಮರಲಾಲಸೆಯು ಕುಗ್ಗುವದಿಲ್ಲ. ಅದಕ್ಕೆ ಯೋಗ್ಯ ದಿಶೆಯು ದೊರಕದಿದ್ದರೆ, ಅವನು ಕೋರ್ಟುಗಳ "ಅಹಿಂಸಾತ್ಮಕ" ಕಾದಾಟಗಳಿಂದ ಸಮರಪ್ರವೃತ್ತಿಯನ್ನು ತೃಪ್ತಿಗೊಳಿಸಲು ಪ್ರಯತ್ನಿಸುತ್ತಾನೆ.

ಕೇವಲ ಕ್ಷುದ್ರ ಕಾರಣಗಳಿಗಾಗಿ ನ್ಯಾಯಸ್ಥಾನದ ಕಟ್ಟೆಯನ್ನು ಹತ್ತುವ ಮನೋವೃತ್ತಿಯು ಇದೇ ಕಾರಣದಿಂದ ಉದ್ಭವಿಸುತ್ತದೆ.

ಇಂತಹ ಮನೋವೃತ್ತಿಗೆ ಪುಷ್ಟಿ ಕೊಡುವ ಇನ್ನೊಂದು ಕಾರಣವೆಂದರೆ, ನಮ್ಮ ಕೋರ್ಟುಗಳಲ್ಲಿನ ಕೃತಕ ವಾತಾವರಣ. ಜನಜೀವನದಿಂದ ಬೇರೆಯಾದ ಈ ವಾತಾವರಣದಲ್ಲಿ ನಿರ್ಣಯವು ಸತ್ಯ, ನ್ಯಾಯಗಳನ್ನು ಅನುಸರಿಸಿರುವದಿಲ್ಲ. ಉಭಯ ಪಕ್ಷಗಳ ಸಾಂಪತ್ತಿಕ ಸಾಮರ್ಥ್ಯ, ಸಾಕ್ಷಿ, ಪುರಾವೆಯನ್ನು ಸಂಗ್ರಹಿಸುವ ಶಕ್ತಿ, ವಕೀಲರ ಅಡ್ಡ ಸವಾಲಿನ ಚಾತುರ್ಯ, ವಾದದ ವೈಖರಿ ಇವುಗಳನ್ನೇ ಕೋರ್ಟಿನ ತೀರ್ಪು ಅಧಿಕಾಂಶದಲ್ಲಿ ಅವಲಂಬಿಸಿರುವದರಿಂದ, ಸಾಮಾನ್ಯ ಜನರ ದೃಷ್ಟಿಯಲ್ಲಿ ಕೋರ್ಟುಗಳು ಮಾರುಕಟ್ಟೆ ಅಥವಾ ಜೂಜಿನ ಮನೆಯ ಸ್ವರೂಪವನ್ನು ತಾಳಿರುತ್ತವೆ.

ತಮ್ಮ ಅನುಭವ, ಸಾಮರ್ಥ್ಯಗಳನ್ನು ಇತರರನ್ನು ನಿಷ್ಕಾರಣವಾಗಿ ಕೋರ್ಟು ವ್ಯವಹರಣೆಗಳಲ್ಲಿ ಎಳೆದು ತೊಂದರೆಪಡಿಸುವದಕ್ಕಾಗಿ ಉಪಯೋಗಿಸುವ ಹಾಗೂ ಯಾವಾಗಲೂ ದಾವೆ, ವ್ಯವಹರಣೆಗಳಲ್ಲೇ ಮುಳುಗಿರುವ "ಕೋರ್ಟ್ ಕೀಟಗಳು" ( Court-Bird ) ಮೇಲೆ ಹೇಳಿದ ಪರಿಸ್ಥಿತಿಯಿಂದಲೇ ಹುಟ್ಟಿ ಬೆಳೆಯುತ್ತವೆ.

ಅಲ್ಪ ಕಾರಣಕ್ಕಾಗಿ ನ್ಯಾಯದ ಕಟ್ಟೆಯನ್ನು ಹತ್ತಿ ಮನೆಮಾರು ಕಳಕೊಂಡ ದೃಷ್ಟಾಂತಗಳು ಎಷ್ಟೋ ಇವೆ.

ಮಂಗಳೂರಿನ ಮುನಸೂಫಕೋರ್ಟಿನಲ್ಲಿ ಕೆಲವು ವರ್ಷಗಳ ಹಿಂದೆ ಒಂದು ದಾವೆ ನಡೆದಿತ್ತು. ಒಂದು ಮೂಲಗೇಣಿ ಚೀಟಿಯಲ್ಲಿ (ನಿರಂತರ ಪಟ್ಟೆಯ ಕಬೂಲಾಯತ) ಗೇಣಿ ನಗದಿ ರೂ. ೫೦ ಹಾಗೂ ನಾಲ್ಕು ಆಣೆ ಬೆಲೆಯ ಕೋಳಿ ಒಂದು ಎಂದು ಬರೆದಿತ್ತು. ಗೇಣಿದಾರನು ರೂ. ೫೦ ಹಾಗೂ ಕೋಳಿಯ ಬಾಬತು ನಾಲ್ಕು ಆಣೆ ತಪ್ಪದೆ ಕೊಡುತ್ತಿದ್ದನು. ತೊಂದರೆ ಇಲ್ಲದೆ ಇಷ್ಟು ಗೇಣಿ ಸರಾಗವಾಗಿ ಬರುತ್ತಿದ್ದರೂ ಅದರಿಂದ ತೃಪ್ತನಾಗದ ಭೂಮಾಲಕನು ಕೋಳಿಯ ಬೆಲೆ ಆ ಕಾಲದಲ್ಲಿ ಒಂದು ರೂಪಾಯಿ ಇದ್ದುದರಿಂದ ತನಗೆ ಅಷ್ಟೇ ರಕಮು ಬರಬೇಕೆಂದು ಸಾಧಿಸಿ ಬಾಕಿ ಉಳಿದ ಹನ್ನೆರಡಾಣೆಯ ಬಗ್ಗೆ ದಾವೆ ಮಾಡಿದನು! ಈ ಹನ್ನೆರಡಾಣೆಯ ಬಡೆದಾಟ ಕೋರ್ಟಿನಲ್ಲಿ ಎರಡು ಮೂರು ದಿವಸ ನಡೆಯಿತು. ನಾಲ್ಕಾಣೆಗೆ ಕೋಳಿ ಸಿಗುತ್ತದೆಂದು ಹೇಳುವ ಸಾಕ್ಷಿಗಾರರ ಪಡೆಯನ್ನೇ ಪ್ರತಿವಾದಿಯು ನಿಲ್ಲಿಸಿದನು. ಆದರೆ, ವಾಸ್ತವಿಕತೆಗೆ ತೀರಾ ವಿರುದ್ಧವಾದ ಈ ಅಂಬೋಣ ಸ್ವೀಕೃತವಾಗಲಿಲ್ಲ. ಆದರೂ ಬರೇ ಹನ್ನೆರಡು ಆಣೆಗಾಗಿ ದಾವೆ ತಂದುದನ್ನು ನೋಡಿ, ಅಸಮಾಧಾನಹೊಂದಿದ ಮುನಸೂಫರು ಕೋಳಿಯ ಬೆಲೆ ಒಂದು ರೂಪಾಯಿ ಇದ್ದರೂ ಮೂಲಗೇಣಿ ಚೀಟಿಯಲ್ಲಿ ನಾಲ್ಕು ಆಣೆ ಎಂತ ನಮೂದ ಇದ್ದುದರಿಂದ, ಅಷ್ಟನ್ನು ಗೇಣಿದಾರನು ಕೊಟ್ಟಿರುವದರಿಂದ, ಗೇಣಿಯಲ್ಲಿ ಏನೂ ಬಾಕಿ ಇಲ್ಲವೆಂದು ತೀರ್ಮಾನಿಸಿ ದಾವೆಯನ್ನು ತಳ್ಳಿಹಾಕಿದರು.

ಆದರೆ ಆ ಮಾಲಕನು ದಾವೆಯನ್ನು ಅಷ್ಟಕ್ಕೇ ಬಿಡದೆ ಹೈಕೋರ್ಟ್ ತನಕ ಒಯ್ದನೆಂದೂ ಹೈಕೋರ್ಟಿನಲ್ಲಿ ಗೇಣಿದಾರನು ಕೋಳಿಯ ಪ್ರಚಲಿತ ಬೆಲೆಯನ್ನೇ ಕೊಡಬೇಕೆಂದು ತೀರ್ಪು ಆಯಿತೆಂದೂ ಸುದ್ದಿ ಕೇಳಿದೆ. ಹನ್ನೆರಡಾಣೆಯ ವಿಜಯ ಮಾಲೆಯನ್ನು ಕೊರಳಲ್ಲಿ ಧರಿಸಲು ಆ ಭೂಮಾಲಕನು ಮೂರೂ ಕೋರ್ಟುಗಳಲ್ಲಿ ಸುರಿದ ರೊಕ್ಕವೆಷ್ಟೋ ವಾಚಕರೇ ಊಹಿಸಬ-

ಹುದು. ಕೋರ್ಟಿಗೆ ಬಂದಾಗಲೆಲ್ಲ ಕುಡಿದ ಚಹಾದ ವೆಚ್ಚವೇ ಹತ್ತು ಕೋಳಿಗಳ ಪ್ರಚಲಿತ ಬೆಲೆಯಷ್ಟಾದರೂ ಆಗಿರಬೇಕು.

ಪೀನಲ್ ಕೋಡಿನಲ್ಲಿ ೯೫ ನೇ ಕಲಮಿನ ಯೋಜನೆ ಇದ್ದಂತೆ ಇತರ ಕಾಯದೆಗಳಲ್ಲಿ ಇಲ್ಲದ್ದರಿಂದ ಸಮಾಜಕಂಟಕ ಕೋರ್ಟು ಕೀಟಗಳ ಹಾವಳಿಯನ್ನು ಬರೇ ಕಾಯದೆ ಅನ್ವಯಿಸಿ ನಿಲ್ಲಿಸುವದು ಸಾಧ್ಯವಿಲ್ಲ. ನ್ಯಾಯಾಧೀಶರು ತಮ್ಮ ಅವ್ಯಕ್ತ (Inherent) ಅಧಿಕಾರಗಳನ್ನು ಉಪಯೋಗಿಸಿದರೆ ಮಾತ್ರವೇ ಸಾಧ್ಯವಿದೆ.

ಕ್ಷುಲ್ಲಕ ಕಾರಣಕ್ಕಾಗಿ ಕೋರ್ಟುಕಟ್ಟೆ ಹತ್ತಿದ ಒಬ್ಬ ಉಚ್ಚವರ್ಗದವಳೆನ್ನಿಸಿಕೊಂಡಿದ್ದ ಸ್ತ್ರೀಗೆ ನ್ಯಾಯಾಧೀಶರು ಸರಿಯಾದ ನೀತಿಪಾಠ ಕಲಿಸಿದ ಸಂದರ್ಭವು ನಾನು ಮಂಗಳೂರಿನಲ್ಲಿ ವಕೀಲಿ ಮಾಡುತ್ತಿದ್ದಾಗ, ನನ್ನ ಅನುಭವದಲ್ಲಿ ಬಂದು ಹೋಗಿದೆ.

ಉಡುಪಿಯ ಓರ್ವ ಕ್ರೈಸ್ತ ಮಹಿಳೆಯು ಒಬ್ಬ ಸೋಡಾ ಅಂಗಡಿಯವನ ಮೇಲೆ ಅಕ್ರಮ



" ಉಂತ್‌ಲಾ ದೀಲಾ ಪೋಲಾ ! "

ತಡೆ ಹಾಗೂ ಬುದ್ಧಿಪೂರ್ವಕ ಅಪಮಾನ, ಈ ಆರೋಪಗಳ ಬಗ್ಗೆ ಫಿರ್ಯಾದು ಹೂಡಿದ್ದಳು. ಅವಳು ಒಂದು ಮೇಜವಾನಿಯ ಸಲುವಾಗಿ ಅವನಿಂದ ಹಲವು ಬಾಟಲಿ ಸೋಡಾ ತರಿಸಿದ್ದಳು. ಅದರ ರೊಕ್ಕದ ಬಗ್ಗೆ ಅವರೊಳಗೆ ತಕರಾರು ಇತ್ತು. ಒಂದು ದಿನ ಅವನು ಅವಳನ್ನು ನಡುರಸ್ತೆಯಲ್ಲಿ ಅಡ್ಡಗಟ್ಟಿ ಉಡುಪಿಯ ತುಳು ಭಾಷೆಯಲ್ಲಿ '' ಉಂತ್‌ಲಾ, ದೀಲಾ, ,ಪೋಲಾ ! '' ಅಂದರೆ " ನಿಲ್ಲು, ಇಡು, ಹೋಗು '' ಎಂದು ಹೇಳಿದನು. ಈ ಶಬ್ದಗಳು ಅಪಮಾನಕಾರಕವಾದುವು ಇದರಿಂದ ತನಗೆ ಅಪಮಾನವೂ ಮನೋವ್ಯಥೆಯೂ ಆಯಿತು--ಇದು ಅವಳ ಫಿರ್ಯಾದಿಯ ಸಾರಾಂಶವಾಗಿತ್ತು.

ಅವಳ ಸಾಕ್ಷಿ ಪುರಾವೆ ಆದ ಬಳಿಕ ಮ್ಯಾಜಿಸ್ಟ್ರೇಟರು ಯಾವದೋ ಕಾರಣಕ್ಕಾಗಿ ಫಿರ್ಯಾದಿಯನ್ನು ತಳ್ಳಿಹಾಕಿದರು. ಅದರ ಮೇಲೆ ಆಕೆಯು ಸೆಶ್ಶನ್ಸ್ ಜಡ್ಜರಲ್ಲಿ ರಿವಿಜನ್ ಅರ್ಜಿ ದಾಖಲ ಮಾಡಿದಳು ಈಗ ನ್ಯಾಯಾಧೀಶರಾಗಿರುವ, ಸಮರ್ಥ ವಕೀಲರೆಂದು ಹೆಸರು ಪಡೆದ ಮನೀಯರು ಅವಳ ವಕೀಲರಿದ್ದರು. ಬಡ ಸೋಡಾ ಅಂಗಡಿಯವನ ಪರವಾಗಿ ನಾನು ವಕಾಲತನಾಮೆ ಹಾಜರ ಮಾಡಿದ್ದೆನು. ಮನುಷ್ಯ ಸ್ವಭಾವದ ಪರಿಚಯದಲ್ಲಿ ನಿಷ್ಣಾತರಾದ ಮೀರ ಅಮೀರುದ್ದೀನರೆಂಬವರು ಆಗ ಸೆಶ್ಶನ್ಸ್ ಜಡ್ಜರಾಗಿದ್ದರು.

ಬಡ ಸೋಡಾದವನಿಗೆ ಸಲ್ಲುವ ರೊಕ್ಕವನ್ನೂ ಕೊಡದೆ ಕ್ಷುಲ್ಲಕ ಕಾರಣಕ್ಕಾಗಿ ಕೋರ್ಟನ್ನು ಹತ್ತಿಸಿದ ಈ ದೊಡ್ಡಮ್ಮಳ ಒಣ ದೊಡ್ಡಸ್ತಿಕೆಯ ಗುಳ್ಳೆಯನ್ನು ಒಡೆಯಬೇಕೆಂದು ಜಡ್ಜರಿಗೂ ಅನ್ನಿಸಿತು. ಅವಳ ವಕೀಲರ ವಾದ ಮುಗಿದೊಡನೆ ಅವರು " ಉಂತ್‌ಲಾ, ದೀಲಾ, ಪೋಲಾ " ಎಂಬ ಶಬ್ದಗಳು ಅಪಮಾನಕಾರಕ ಹೇಗೆ? ಎಂದು ಪ್ರಶ್ನಿಸಿದರು.

"ಉಂತಲಾ, ದೀಲಾ, ಪೋಲಾ" ಅಂದರೆ ಏಕವಚನದ ಸಂಬೋಧನೆ. ಉಚ್ಚವರ್ಗದ ಮರ್ಯಾದಸ್ಥ ಸ್ತ್ರೀಯನ್ನು ಏಕವಚನದಿಂದ ಸಂಬೋಧಿ

ಸುವದು ನಮ್ಮ ನಾಡಿನಲ್ಲಂತೂ ತೀರಾ ಅಪಮಾನಕರವೆಂದು ತಿಳಿಯತ್ತಾರೆ" ಅವಳ ವಕೀಲರು ಉತ್ತರಕೊಟ್ಟರು.

"ಅಂದರೆ, ಅವನು ಹೇಗೆ ಅನ್ನಬೇಕಿತ್ತು?'' ಜಡ್ಜರು ಕೇಳಿದರು. ತುಳುವಿನಲ್ಲಿ ಏಕವಚನದ ಕೊನೆಯ "ಆ'' ಬಹುವಚನದಲ್ಲಿ ''ಎ" ಆಗುತ್ತದೆ "ಉಂತಲಾ, ದೀಲಾ, ಪೋಲಾ" ಅನ್ನುವ ಬದಲಾಗಿ'' ಉಂತಲೆ, ದೀಲೆ, ಪೋಲೆ" ಎನ್ನಬೇಕಾಗಿತ್ತು, ಎಂದು ಅವಳ ವಕೀಲರು ವಿವರಿಸಿದರು

ಭಾಷೆಯ ಈ ವ್ಯಾಖ್ಯೆ ಸರಿಯೋ ಹೇಗೆಂದು ಜಡ್ಜರು ನನಗೆ ಕೇಳಿದರು. ನಾನು ಹೌದೆಂದು ಉತ್ತರಿಸಿದೊಡನೆ ಅವರು ''ಲೇ ಅನ್ನುವ ಬದಲಾಗಿ ಲಾ ಎಂದು ಹೇಳಿದ್ದು ಆರೋಪಿಯ ಅಪರಾಧ. ಅಲ್ಲದೆ, ಮೂರು ಸಾರೆ ಹಾಗೆ ಹೇಳಿದ, ಸರಿ,'' ಇಷ್ಟು ಹೇಳಿ ನನ್ನ ಕಡೆಗೆ ಹೊರಳಿ ''ನೋಡಿರಿ'' ನಿಮ್ಮ ಪಕ್ಷಕಾರನು ಲೇ ಅನ್ನುವ ಬದಲಿಗೆ "ಲಾ" ಎಂತ ಉಚ್ಚರಿಸಿ ಈ ಮಹಿಳೆಯ ಅಪಮಾನ ಮಾಡಿದ್ದಾನೆ. ಆದ್ದರಿಂದ ಈಗ ಅವನು ಕೈಜೋಡಿಸಿ ಅವಳ ಮುಂದೆ ನಿಂತು ಮೂರು ಸಾರೆ "ಲೇ, ಲೇ, ಲೇ ಅನ್ನಬೇಕು. ಕರೆಯಿರಿ ಅವನನ್ನು, ವಿಳಂಬ ಮಾಡಬಾರದು'' ಎಂದರು.

ಕೋರ್ಟಿನಲ್ಲಿ ನೆರೆದವರೆಲ್ಲಾ ನಗೆಯಲ್ಲಿ ಮುಳುಗಿದರು. ಜಡ್ಜರ ಹುಕುಮಿನ ಅಮಲಬಜಾವಣೆ ಮಾತ್ರ ಆಗಲಿಲ್ಲ. ಯಾಕಂದರೆ ಜಡ್ಜರ ಮಾತು ಹೊರಬಿದ್ದೊಡನೆ ಆ ಬೆಡಗಿನ ಬಿನ್ನಾಣಗಿತ್ತಿಯು ಸದ್ದಿಲ್ಲದೆ ಅಲ್ಲಿಂದ ಪಲಾಯನ ಮಾಡಿದ್ದಳು !



## ಕರ್ತವ್ಯ

ಯಾವುದು ಕರ್ತವ್ಯ ಯಾವುದು ಅಲ್ಲ ಎಂದು ಬಲ್ಲವರೂ ನಿರ್ಧರಿಸಲಾರದವರಾಗಿದ್ದಾರೆ.

—ಗೀತೆ

ಮಾನವನ ಮೊದಲ ಕರ್ತವ್ಯವೆಂದರೆ ಯಾವುದನ್ನು ತಾನು ಉತ್ತಮವಾಗಿ ಮಾಡಬಲ್ಲೆನೆಂದು ತಿಳಿದುಕೊಳ್ಳುವುದು ; ಹಾಗೆ ತಿಳಿದ ನಂತರ ಅದನ್ನು ಪಟ್ಟು ಹಿಡಿದು ಮಾಡುತ್ತ ಹೋಗುವುದು.

—ಥಾಮಸ್ ಕಾರ್ಲೈಲ್

ದುಷ್ಟ ಮನುಷ್ಯನೊಬ್ಬ ನಾಚಿಕೆ ಪಡಬೇಕಾದಂಥ ಯಾವುದಾದರೂ ಕೆಲಸವನ್ನು ಮಾಡುವುದಿದ್ದರೆ ಅವನಾಗ ಘೋಷಿಸಿಯೇ ಬಿಡುತ್ತಾನೆ: "ಇದು ನನ್ನ ಕರ್ತವ್ಯ'' ಎಂದು.

—ಜಾರ್ಜ್ ಬರ್ನಾರ್ಡ್ ಷಾ

ಸಂತೋಷವಾಗಿರುವ ಕರ್ತವ್ಯದಷ್ಟು ನಾವು ಅಲಕ್ಷಿಸುವ ಕರ್ತವ್ಯ ಬೇರೊಂದಿಲ್ಲ.

—ಆರ್. ಎಲ್. ಸ್ಟೀವನ್‌ಸನ್

ನೀವು ದೊಡ್ಡ ಮನುಷ್ಯರಾಗಿದ್ದರೆ ಯಾವ ಕರ್ತವ್ಯವನ್ನೂ ನೀವು ಸಣ್ಣದೆಂದು ತಿಳಿಯಲಾರಿರಿ.

—ಜಾರ್ಜ್ ಮಾಕ್ಡೊನಾಲ್ಡ್

# ಮಲಯಾಚಲದ ಸಿರಿ : ಶ್ರೀಗಂಧ

**ಕರ್ನಾಟಕದ ಈ ಅರಣ್ಯ ಸಂಪತ್ತು ಕೋಟ್ಯಂತರ ರೂಪಾಯಿಗಳನ್ನು ತರುತ್ತದೆ.**

ಭಾರತದ ಅರಣ್ಯಗಳಲ್ಲಿ ದೊರೆಯುವ ಅಮೂಲ್ಯವಾದ ವೃಕ್ಷಗಳಲ್ಲಿ ಶ್ರೀಗಂಧದ ಮರವು ಅದ್ವಿತೀಯವಾದುದು. ಗಂಧದ ಮರ ಹಲವಾರು ಉದ್ದಿಮೆಗಳ ಉದಯಕ್ಕೆ ಕಾರಣವಾಗಿದೆ. ಅವುಗಳಲ್ಲಿ ಗಂಧದೆಣ್ಣೆಯ ಭಟ್ಟಿ ಇಳಿಸುವ ಉದ್ದಿಮೆ ಮುಖ್ಯವಾದುದು.

ದಕ್ಷಿಣ ಭಾರತದ ಮೈಸೂರು ಮತ್ತು ಕೇರಳ ರಾಜ್ಯಗಳಲ್ಲಿರುವ ಮಲಯ ಪರ್ವತ—ಪಶ್ಚಿಮ ಘಟ್ಟಗಳ ಸಾಲಿನಲ್ಲಿ ಗಂಧದ ಮರಗಳು ಹೇರಳವಾಗಿ ಬೆಳೆಯುತ್ತವೆ. ಅಲ್ಲದೆ ಜಗತ್ತಿಗೆ ಬೇಕಾಗುವ ಎಲ್ಲ ಗಂಧದ ಪೂರೈಕೆಯು ಇಂದು ಬಹುಶಃ ಈ ಎರಡು ರಾಜ್ಯಗಳ ಅಡವಿಗಳಿಂದಲೇ ನಡೆಯುತ್ತಿದೆ.

ಗಂಧದ ಬೆಳೆ, ಗಂಧದ ಕಾರಖಾನೆ, ಗಂಧದ ಗುಡಿಗಾರಿಕೆಗಳು ಇಂದು ದಕ್ಷಿಣದ ಈ ಎರಡು ರಾಜ್ಯಗಳಲ್ಲಿ ಸಾವಿರಾರು ಜನರ ಜೀವನಕ್ಕೆ ಆಸರೆಯೆನಿಸಿವೆ. ಎರಡೂ ರಾಜ್ಯಗಳಿಗೆ ಗಂಧದ ಉದ್ದಿಮೆಯು ಅತಿ ಹೆಚ್ಚು ಆದಾಯವನ್ನುಂಟು ಮಾಡುತ್ತದೆ. ಬರಿಯ ಮೈಸೂರು ರಾಜ್ಯವೊಂದರಲ್ಲಿಯೇ ಸುಮಾರು ೩,೦೦೦ ಟನ್ನು ಗಂಧ ದೊರೆಯುತ್ತದೆ. ಎಂದರೆ ಒಂದು ಟನ್ನಿಗೆ ೪,೦೦೦ ರೂಪಾಯಿ ಬೆಲೆಯಂತೆ ೧೨೦ ಲಕ್ಷ ರೂಪಾಯಿಯ ಆದಾಯವನ್ನು ಬರಿಯ ಗಂಧದ ಕೊರಡು ನಮ್ಮ ಮೈಸೂರು ರಾಜ್ಯವೊಂದಕ್ಕೆ ಕೊಡುತ್ತದೆ.

ಭಾರತೀಯರಿಗೆ ಗಂಧವೊಂದು ಪವಿತ್ರ ಮರ. ವೇದಕಾಲದಿಂದಲೂ ಗಂಧದ ಪ್ರಸ್ತಾಪ ಅಲ್ಲಲ್ಲಿ

" ಯೋಜನಾ "ದಿಂದ



ಬಂದುದನ್ನು ನಾವು ನೋಡಬಹುದು. ಪುರಾಣೇತಿಹಾಸ ಕಾವ್ಯಗಳಲ್ಲಂತೂ ಗಂಧವೇ ಐಕ್ಯವಾಗಿದೆ.

ಹದಿನೆಂಟನೆಯ ಶತಮಾನದಲ್ಲಿ ಶಾಂತಸಾಗರದ ದ್ವೀಪಗಳಲ್ಲಿ ಗಂಧದ ಜಾತಿಯ ಮರಗಳನ್ನು ಪಾಶ್ಚಾತ್ಯರು ಕಂಡುಹಿಡಿದರು. ಒಮ್ಮೆಲೇ ಎಚ್ಚತ್ತ ಅವರು ಹಡಗುಪಡಗುಗಳನ್ನು ಕಟ್ಟಿಕೊಂಡು ಗಂಧದ ಮರಗಳನ್ನು ವಶಪಡಿಸಿಕೊಳ್ಳುವದಕ್ಕಾಗಿ ಅಲ್ಲಿಗೆ ಧಾವಿಸಿದರು. ಈ ಅಮೂಲ್ಯ ಮರಗಳನ್ನು ವಶಪಡಿಸಿಕೊಳ್ಳುವ ರಭಸದಲ್ಲಿ ಸಾವಿರಾರು ಜೀವಗಳು ಬಲಿಯಾದುವು. ಗಂಧದ ಉದ್ದಿಮೆಯು ಒಮ್ಮೆಲೇ ತಿಮಿಂಗಿಲ ಹಿಡಿಯುವ ಉದ್ದಿಮೆಯಂತೆ ಅಪಾಯಕಾರಿಯೆನಿಸಿಕೊಂಡಿತು. ಇಲ್ಲಿ ಮರಗಳನ್ನು ಸಂಗ್ರಹಿಸಲು ನಡೆದ ಹೋರಾಟದಲ್ಲಿ ಪ್ರತಿಯೊಂದು ಮರಕ್ಕೆ ಒಬ್ಬ ಮನುಷ್ಯನ ಜೀವ ಬಲಿಯಾಗಿರಬೇಕು ಆಗ.

ಆದರೆ ಭಾರತೀಯರಿಗೆ ಗಂಧದ ಉಪಯೋಗದ ಹಲವು ವಿಧಾನಗಳು ಹಿಂದಿನಿಂದಲೂ ಗೊತ್ತಿದ್ದುವು. ಗಂಧದ ಕೈಗಾರಿಕೆಯೂ ಇಲ್ಲಿ ಹಿಂದಿನಿಂದ ನಡೆಯುತ್ತಿತ್ತು. ಸುಧಾರಿಸಿದ ಪದ್ಧತಿಯಲ್ಲಲ್ಲದಿದ್ದರೂ ಗಂಧದೆಣ್ಣೆಯನ್ನು ಭಟ್ಟಿ ಇಳಿಸುವುದು ಭಾರತೀಯರಿಗೆ ಹಿಂದಿನಿಂದಲೂ ಸಾಮಾನ್ಯವಾಗಿ ಹೋಗಿತ್ತು.

ಮೈಸೂರಿನ ಗಂಧದ ಉದ್ದಿಮೆ ಹೈದರಾಲಿಯ ಕಾಲದಿಂದ ಸ್ಥಿರವಾಯಿತು. ಆ ಕಾಲದಲ್ಲಿ ಮೈಸೂರು ಸಂಸ್ಥಾನದೊಡನೆ ಈಸ್ಟ್ ಇಂಡಿಯಾ ಕಂಪನಿ ಮಾಡಿಕೊಂಡ ಒಪ್ಪಂದವೊಂದರಲ್ಲಿ ಗಂಧದ ಉದ್ದಿಮೆಯ ಮೇಲೆ ಮೈಸೂರು ಸರಕಾರದ ಸಂಪೂರ್ಣ ಸ್ವಾಮ್ಯವನ್ನು ಅಂಗೀಕರಿಸಲಾಗಿತ್ತು.

೧೯೧೪ರ ತನಕ ಮೈಸೂರಲ್ಲಿ ಗಂಧದೆಣ್ಣೆಯ ಕಾರ್ಖಾನೆ ಇರಲಿಲ್ಲ. ಮೈಸೂರು ಗಂಧ, ಜರ್ಮನಿಯ ಗಂಧದೆಣ್ಣೆ ಎಂಬ ಗತಿಯಾಗಿತ್ತು ಅಲ್ಲಿಯ ತನಕ. ಮೊದಲ ಮಹಾಯುದ್ಧ ಸ್ಫೋಟವಾಗಿ ಭಾರತದಿಂದ ಗಂಧದೆಣ್ಣೆಗೆ ಬೇಕಾಗುವ ಮರವನ್ನು ಜರ್ಮನಿಗೆ ಪೂರೈಸುವುದು ಸಾಧ್ಯವಾಗಲಿಲ್ಲ. ಈಗ ಮೈಸೂರು ತನ್ನ ಗಂಧದ ಮರದಿಂದ ತಾನೇ ವೈಜ್ಞಾನಿಕವಾಗಿ ಎಣ್ಣೆ ಭಟ್ಟಿ ಇಳಿಸಲು ಕಲಿಯುವುದು ಅನಿವಾರ್ಯವಾಯಿತು. ಮೈಸೂರಿನಲ್ಲಿ ಗಂಧದೆಣ್ಣೆಯ ಕಾರ್ಖಾನೆ ಸ್ಥಾಪಿತವಾದ ಕೆಲವೇ ವರ್ಷಗಳಲ್ಲಿ ಮೈಸೂರಿನ ಗಂಧವೆಲ್ಲವನ್ನೂ ಇಲ್ಲಿಯೇ ಭಟ್ಟಿ ಇಳಿಸಲು ಸಾಧ್ಯವಾಗಿದೆ. ಕೇರಳ ರಾಜ್ಯದಲ್ಲಿ ಕೂಡ ಒಂದು ಸರಕಾರಿ ಗಂಧದೆಣ್ಣೆಯ ಕಾರಖಾನೆಯಿದೆ.

ಪಶ್ಚಿಮ ಘಟ್ಟಗಳ ಸಾಲಿನಲ್ಲಿ ಗಂಧದ ಮರ ಧಾರಾಳವಾಗಿ ಬೆಳೆಯುತ್ತದೆ. ಸಸಿ ನೆಟ್ಟು ಸುಮಾರು ಹತ್ತು ವರ್ಷ ಬೆಳೆದಾಗ ಅದು ಎಣ್ಣೆ ಭಟ್ಟಿ ಇಳಿಸಲು ಯೋಗ್ಯವಾಗುತ್ತದೆ. ಸಾಮಾನ್ಯ ಬೆಳೆಗಳಿಗೆ ಪಿಡುಗಿನಂತಿರುವ ಲಂತಾನ ಕುರುಚಲು ಗಿಡವೇ ಗಂಧದ ಸಸಿಗೆ ದಾದಿಯಂತೆ ಪೋಷಕವಾಗಿರುವುದೀಗ ಆಶ್ಚರ್ಯ. ಲಂತಾನ ಪೊದರುಗಳೆಡೆಯಲ್ಲಿ ಗಂಧದ ಸಸಿಗಳನ್ನು ನೆಡುತ್ತಾರೆ. ಆ ಪೊದರುಗಳ ರಕ್ಷಣೆಯಿಂದ ಈ ಸಸಿಗಳು ಬೆಳೆಯುತ್ತವೆ.

ಗಂಧದ ಗಿಡಗಳು ಎಣ್ಣೆ ಭಟ್ಟಿ ಇಳಿಸಲು ಬೇಕಾಗುವಷ್ಟು ಬೆಳೆದೊಡನೆಯೇ ಅವನ್ನು ಕಡಿದು ತೊಗಟೆಯನ್ನು ತೆಗೆಯುವರು. ಉಳಿದ ಮರವನ್ನು ಕಾಡಿನ ಬೇರೆ ಬೇರೆ ಪ್ರದೇಶಗಳಲ್ಲಿರುವ ಗುದಾಮುಗಳಿಗೆ ಸಾಗಿಸುವರು. ಇಲ್ಲಿ ಮರಗಳನ್ನು ಸಿಗಿದು ಕೊರಡುಗಳಾಗಿ ಮಾಡುತ್ತಾರೆ. ಈ ಕೊರಡುಗಳಲ್ಲಿ ಉತ್ತಮವಾದುವನ್ನು ಆಯ್ದು ಕೆತ್ತನೆಕೆಲಸಗಳಿಗೆಂದು ಪ್ರತ್ಯೇಕಿಸಿ ಉಳಿದಂಶವನ್ನು ಭಟ್ಟಿ ಇಳಿಸಲು ಕಾರಖಾನೆಗೆ ಕಳಿಸುವರು. ಕಾರ್ಖಾನೆಯಲ್ಲಿ ಮಾಡುವ ಮೊದಲ ಕೆಲಸವೆಂದರೆ ಕೊರಡುಗಳನ್ನು ಸಣ್ಣ ತುಂಡುಗಳಾಗಿ ಕತ್ತರಿಸುವುದು. ಅವನ್ನು ಪುಡಿ ಮಾಡಿದರೆಂದರೆ ಗಂಧದ ಎಣ್ಣೆಯ ಭಟ್ಟಿ ಇಳಿಸಲು ಸಿದ್ಧವಾದಂತೆಯೇ.

ಭಟ್ಟಿ ಇಳಿಸುವ ಸ್ಥಳದಲ್ಲಿ ದೊಡ್ಡ ದೊಡ್ಡ ಕೊಳಗಗಳಿರುತ್ತವೆ. ಈ ಕೊಳಗಗಳಿಗೆ ಎರಡು ಬಾಯಿ. ಒಂದರಲ್ಲಿ ಗಂಧದ ಪುಡಿ ಒಳನುಗ್ಗಿದರೆ

## ಸಾಹಿತ್ಯದಲ್ಲಿ ಚಂದನ ಚರ್ಚೆ

ಭಾರತೀಯ ಕವಿಸಮಯದಲ್ಲಿ ಶ್ರೀಗಂಧಕ್ಕೆ ವಿಶಿಷ್ಟ ಸ್ಥಾನವಿದೆ. ಕಾಲಿದಾಸನ ಕುಮಾರಸಂಭವದ ಚಿರಪ್ರಣಯಿಗಳಾದ ಪಾರ್ವತೀ ಪರಮೇಶ್ವರರು ತಮ್ಮ "ಮಧು ಚಂದ್ರ''ದ ದಿನಗಳನ್ನು "ಗಂಧಮಾದನ" ವನದಲ್ಲಿ ಕಳೆದರು.

ಉಳಿದ ಪ್ರಣಯಿಗಳ ಮಾತೂ ಅಷ್ಟೇ. ಶ್ರೀಗಂಧ ಶೃಂಗಾರೋದ್ದೀಪಕ. ಗಂಧದ ಮರಗಳು ಹೆಚ್ಚು ಬೆಳೆಯುವ ಮಲಯಮಾರುತ ಪ್ರಣಯದ ಹರಿಕಾರ. ಕಾವ್ಯಗಳ ನಾಯಿಕೆಯರು ತಮ್ಮ ಎದೆಗೆ ಚಂದನ ಲೇಪ ಮಾಡುತ್ತಿದ್ದರು. ಶ್ರೀ-ಕೃಷ್ಣನಂಥ ನಾಯಕರು ಚಂದನಚರ್ಚಿತನೀಲಕಲೇವರರಾಗಿರುತ್ತಿದ್ದರು. ವಿರಹಿಗಳ ತಾಪವನ್ನು ಚಂದನ ಹೆಚ್ಚಿಸುವುದು. ಮಲಯಪವನ ಅವರಿಗೆ ಹೆಚ್ಚು ನೋವನ್ನುಂಟುಮಾಡುವುದು; ಚಂದನಚರ್ಚೆಯಂತೂ ವಿಷ ಲೇಪದಂತೆ. ಗಂಧದ ಮರಗಳಿಗೂ ಸರ್ಪಗಳಿಗೂ ನಂಟುತನವಿದೆ. ಗಂಧದ ಮರ ಬೆಳೆದು ಅದರ ತೊಗಟೆಗಳು ಒಡೆಯುತೊಡಗಿದಾಗ ಹಾವುಗಳು ಆ ಮರವನ್ನು ಸುತ್ತಿ ಆನಂದೋನ್ಮಾದದಲ್ಲಿ ನೈ-ಮರೆಯುವುವಂತೆ !

ಇನ್ನೊಂದರಲ್ಲಿ ಆವಿ ಹೊರಬರುವುದು. ಕೊಳಗಗಳೊಳಗೆ ಗಂಧದ ಪುಡಿ ತುಂಬಿದಾಗ ಆವಿಯ ಒತ್ತಡ ಅದರ ಮೇಲೆ ಹೆಚ್ಚುತ್ತದೆ. ಭಟ್ಟಿ ಯಂತ್ರದಲ್ಲಿ ಆವಿ ಸಾಗುತ್ತಿರುವಾಗ ಅದು ತನ್ನ ಜೊತೆಗೆ ಗಂಧದಲ್ಲಿಯ ಎಣ್ಣೆಯ ಹಬೆಯನ್ನೂ ಒಯ್ಯುತ್ತದೆ. ತೈಲ ಮಿಶ್ರಿತ ಆವಿಯನ್ನು ದೊಡ್ಡ ಬಾಷ್ಪಪಾತ್ರೆಗಳಲ್ಲಿ ( Condensers ) ತಣಿಸಿದಾಗ ನೀರಿಗಿಂತ ಹಗುರವಾದ ಎಣ್ಣೆ ತೇಲಿ ಬರುತ್ತದೆ. ಅನಂತರ ಅದನ್ನು ಹೊರಗೆ ತೆಗೆದು ಹಲವಾರು ರಾಸಾಯನಿಕ ಕ್ರಿಯೆಗಳಿಂದ ಶುದ್ಧಿ ಮಾಡಿ ಮಾರಾಟಕ್ಕೆ ತಕ್ಕುದಾದ ಎಣ್ಣೆಯನ್ನು ಅಣಿಗೊಳಿಸುತ್ತಾರೆ.

ಈ ಎಣ್ಣೆ ಜಗತ್ತಿನ ಎಲ್ಲೆಡೆಗಳಲ್ಲಿಯೂ ವನೌಷಧಿಯೆಂದು, ಪರಿಮಳದ್ರವ್ಯವೆಂದು ಮತ್ತು ಸಬಕಾರದ ರೂಪದಲ್ಲಿ ಮಾರಾಟವಾಗುತ್ತದೆ.

ಗಂಧದ ಪುಡಿಯ ಧೂಪದ ಕಡ್ಡಿ ವಿಶ್ವದ ಎಲ್ಲ ಕಡೆಗಳಲ್ಲಿಯೂ ಮಾರಾಟವಾಗುತ್ತದೆ. ಬೆಲೆ ಬಾಳುವ ಮರದ ಸಾಮಾನುಗಳು ಮತ್ತು ಕೆತ್ತನೆಯ ಕೆಲಸಗಳಿಗೆ ಗಂಧದ ಮರವನ್ನು ಬಳಸುವರು. ಪ್ರಾಚೀನ ಕಾಲದಿಂದಲೂ ಭಾರತೀಯ ಕಲಾಕಾರರು ಗಂಧದ ಕೈಗಾರಿಕೆಗಾಗಿ ಪ್ರಸಿದ್ಧಿ ಪಡೆದಿರುವರು. ಶಿವಮೊಗ್ಗ ಮತ್ತು ಉತ್ತರ ಕನ್ನಡ ಜಿಲ್ಹೆಗಳಲ್ಲಿ ವಾಸಿಸುವ ಗುಡಿಗಾರ ಪಂಗಡವು ಗಂಧದ ಕೆತ್ತನೆ ಕೆಲಸದಲ್ಲಿ ವಿಶೇಷ ಪ್ರಸಿದ್ಧಿಯನ್ನು ಪಡೆದಿದೆ. ಸರಕಾರದ ಪ್ರೋತ್ಸಾಹದಿಂದ ಕಲಾಕುಶಲತೆಯೀಗ ಭಾರತ ಮತ್ತು ಜಗತ್ತಿನ ಎಲ್ಲ ಕಡೆಯಲ್ಲೂ ಜನಾದರವನ್ನು ಪಡೆದಿದೆ. ಭಾರತದ ಗುಡಿ ಕೈಗಾರಿಕೆಯ ಪರಂಪರೆಯಲ್ಲಿ ಅದೀಗ ಒಂದು ಮಹತ್ವದ ಸ್ಥಾನವನ್ನು ಗಳಿಸಿಕೊಂಡಿದೆ.

ಜಗತ್ತಿನಲ್ಲಿ ಗಂಧವನ್ನು ಉತ್ಪಾದಿಸುವ ನಾಡಾದ ಭಾರತವೇ ಅತ್ಯಂತ ಹೆಚ್ಚಾಗಿ ಅದನ್ನು ಉಪಯೋಗಿಸುತ್ತದೆ. ಕೆತ್ತನೆ ಮತ್ತಿತರ ಕೆಲಸಗಳಿಗಷ್ಟೇ ಅಲ್ಲದೆ ಹಿಂದುಗಳು ತಮ್ಮ ಷೋಡಶ ಸಂಸ್ಕಾರಗಳಲ್ಲಿ ಗಂಧವನ್ನು ಒಂದಲ್ಲ ಒಂದು ರೀತಿಯಿಂದ ಬಳಸುತ್ತಾರೆ. ಪಾರ್ಸಿಗಳ ಅಗ್ನಿ ದೇವಾಲಯಗಳಲ್ಲಿ ಬೆಂಕಿಯುರಿಸಲಿಕ್ಕೂ ಗಂಧದ ಕಟ್ಟಿಗೆಯನ್ನು ಉಪಯೋಗಿಸುವರು.

ಪಿ. ಜಿ. ಪ್ರಭು

# ಭೂಮಧ್ಯ ಸಮುದ್ರ ಬತ್ತಿಸುತ್ತಾರಂತೆ !

**ಆಧುನಿಕ ಪರಶುರಾಮರ ಭೂಮಿಯ ಹಸಿವು ಅಪರಿಮಿತ ;**
**ಅವರು ಈ ಅದ್ಭುತ ಕನಸು ಕಾಣಹತ್ತಿದ್ದಾರೆ**

ಸಾಗರವನ್ನೇ ಆಕ್ರಮಿಸುವ ಪರಾಕ್ರಮವೇ ಎಂದು ನೀವು ಬೆರಳು ಕಚ್ಚಬಹುದು ; ಆದರೆ ಇದು ಬುರುಡೆಯಲ್ಲ. ಇಪ್ಪತ್ತನೆಯ ಶತಮಾನದ ಧುರಂಧರ ವೈಜ್ಞಾನಿಕರು ತಮ್ಮ ಆವಿಷ್ಕರಣೆಗಳ ಆಧಾರದ ಮೇಲೆ ಸಾಧಿಸಬಹುದೆಂದು ಒಡ ನುಡಿದ ಭವಿಷ್ಯವಾಣಿ ಇದು. ನಿಸರ್ಗವನ್ನು ಜಯಿಸುವ ಅನೇಕ ಮಾನವ ಸಾಹಸಗಳಲ್ಲಿ ಇದೂ ಒಂದು.

ದೊಡ್ಡದೊಡ್ಡ ಬಂದರುಗಳ, ಸಮುದ್ರ ತೀರದ ವಿಲಾಸನಗರ ಗಳ ಅಂಚನ್ನು ತನ್ನ ಭೋರ್ಗರೆವ ಅಲೆಗಳಿಂದ ತೊಳೆವ ಸಮುದ್ರ ರಾಜನನ್ನು ಆಧುನಿಕ ಯಾಂತ್ರಿಕ ಕೌಶಲಗಳಿಂದ ಹಿಂದೊತ್ತಿ ಈ-ಗಾಗಲೇ ಮೈಲುಗಟ್ಟಲೆ ಭೂಪ್ರದೇಶವನ್ನು ಆಕ್ರಮಿಸಿದ್ದಾನೆ ವಿ-ಜ್ಞಾನಯುಗದ ಮಾನವ. ಇಷ್ಟರಿಂದಲೇ ತೃಪ್ತನಾಗದೆ ಇಡಿಯ ಸಮುದ್ರವನ್ನೇ ಬತ್ತಿಸಿ ಸಹಸ್ರಾರು ಯೋಜನ ವಿಸ್ತೀರ್ಣ ಪ್ರದೇಶವನ್ನು ತನ್ನ ಅಂಕಿತಕ್ಕೊಳಪಡಿಸುವ ಮಹತ್ವಾಕಾಂಕ್ಷೆಗೊಳಗಾಗಿದ್ದಾನೆ ಆತ.

ಭೂಮಧ್ಯ ಸಮುದ್ರವನ್ನೇ ಬತ್ತಿಸಬೇಕೆಂಬ ಹಂಬಲ ಅವನ ಬೆಂಬತ್ತಿದೆ. ಭೌಗೋಲಿಕ ಪರಿಚಯವಿದ್ದವರು ವೈಜ್ಞಾನಿಕ ದೃಷ್ಟಿಯಿಂದ ಒಂದು ಕ್ಷಣ ವಿಚಾರ ಮಾಡಿದರೆ ಇದೇನು ಅಸಾಮಾನ್ಯವಲ್ಲ. ಭೂಮಧ್ಯ ಸಮುದ್ರದ ಇತಿಹಾಸವನ್ನಷ್ಟು ಗಮನಿಸಿ.

ಸುಮಾರು ಐವತ್ತು ಸಾವಿರ ವರ್ಷಗಳ ಹಿಂದೆ ಪೃಥ್ವಿಯು ಇನ್ನೂ ಸ್ತಿಮಿತಹೊಂದಿರಲಿಲ್ಲ. ಆಗಿನ




ಇಂದಿನ ಭೂಮಧ್ಯ ಸಮುದ್ರ ( ಕಪ್ಪು ಭಾಗ )

ನಕ್ಷೆಯೂ ಈಗಿನಂತಿರಲಿಲ್ಲ. ಹಿಮಾಲಯ ಪರ್ವತವು ಆಗ ಸಮುದ್ರ ತಳದಲ್ಲಿ ಮಲಗಿತ್ತು. ಭಾರತವು ಜಂಬೂ-ದ್ವೀಪವಾಗಿತ್ತು. ಕಚ್ಛ ಮರುಭೂಮಿ, ರಾಜಸ್ಥಾನ, ಹಿಮಾಲಯ ಪ್ರದೇಶ, ಗಂಗೆಯ ಬಯಲು, ಕಲಕತ್ತೆಯ ವರೆಗೆ ಸಮುದ್ರವೇ ಸಮುದ್ರ. ಇಂಗ್ಲಂಡು ಆಗಿನ್ನೂ ಯುರೋಪ ಖಂಡದಿಂದ ಬೇರಾಗಿರಲಿಲ್ಲ. ಭೂಮಧ್ಯ ಸಮುದ್ರವೂ ಸಮುದ್ರವಾಗಿರಲಿಲ್ಲ. ಇಟಲಿಯ ದಕ್ಷಿಣ ತುದಿಗಿರುವ ಚೂಪಾದ ಭೂಪ್ರದೇಶದಿಂದ ವಿಂಗಡಿಸಲ್ಪಟ್ಟ ಎರಡು ದೊಡ್ಡ ಸರೋವರಗಳಾಗಿತ್ತು. ಪೃಥ್ವಿಯ ಅಂತರಾಳದಲ್ಲಿಯ ಪ್ರಚಂಡ ಉಷ್ಣತೆಯ ಮಥನಕ್ಕೆ ಸಿಲುಕಿದಾಗ ಸಮುದ್ರದ ಉದರವನ್ನು ಭೇದಿಸಿ ಹಿಮಾಲಯ ಮೇಲೆದ್ದಿತು; ಕಚ್ಛ ರಾಜಸ್ಥಾನದ ಮರುಳುಗಾಡುಗಳು ಕಾಣಿಸಿಕೊಂಡವು; ಭಾರತವು ದ್ವೀಪಕಲ್ಪವಾಯಿತು. ಆಗಲೇ ಇಂಗ್ಲಂಡು ಯುರೋಪ ಖಂಡದಿಂದ ಬೇರಾಗಿ ಸ್ವತಂತ್ರ ದ್ವೀಪವಾಯಿತು. ಅಲ್ಲಲ್ಲಿಯ ಅಗಾಧ ಜಲಸಂಚಯಗಳು ತಮ್ಮ ಅಳವಿನಲ್ಲಿಯ ತಗ್ಗು ಪ್ರದೇಶಗಳನ್ನು ನುಗ್ಗಿ, ಮತ್ತೆ ಜಗತ್ತಿನ ನಕ್ಷೆಯನ್ನೇ ಬದಲಿಸಿದವು.

ಅದೇ ಸಮಯ ಯುರೋಪ್, ಉತ್ತರ ಏಶಿಯಾಗಳನ್ನು ಮುಚ್ಚಿದ ಹಿಮಗಡ್ಡೆಗಳು ಕರಗಿ, ಅಪಾರ ಜಲರಾಶಿ ಸಮುದ್ರವನ್ನು ಹೊಕ್ಕಿತು. ಸಮುದ್ರದ ಉದರ ಉಬ್ಬತೊಡಗಿತು. ನಿಮ್ನ ಮಟ್ಟದ ಭೂಪ್ರದೇಶಗಳು ಜಲಸಮಾಧಿ ಹೊಂದಿದುವು. ಸಂಧಿ ಸಿಕ್ಕಲ್ಲೆಲ್ಲ ನುಗ್ಗಿದ ಸಮುದ್ರ ಲಕ್ಷಗಟ್ಟಲೆ ಮೈಲು ವಿಸ್ತಾರ ಭೂಮಿಯನ್ನಾಕ್ರಮಿಸಿತು. ಅಂದು ಜಿಬ್ರಾಲ್ಟರ ಜಲಸಂಧಿಯಿಂದ ಒಳನುಗ್ಗಿದ ಜಲಪ್ರವಾಹ ಆ ಎರಡೂ ಸರೋವರಗಳನ್ನು ಒಂದುಗೂಡಿಸಿ, ಸುತ್ತುಮುತ್ತಲಿನ ಎಷ್ಟೋ ಚದರ ಮೈಲು ಭೂಮಿಯನ್ನು ಮುಳುಗಿಸಿ ಅಗಾಧ ಜಲರಾಶಿಯಾಗಿ ಪರಿಣಮಿಸಿತು. ಅದೇ ಇಂದಿನ ಭೂಮಧ್ಯಸಮುದ್ರ; ನಾಲ್ಕೂ ನಿಟ್ಟಿನಲ್ಲಿ ಭೂಮಿಯಿಂದ ಆವೃತವಾದ ಸಮುದ್ರ. ಜಿಬ್ರಾಲ್ಟರ ಜಲಸಂಧಿಯೊಂದೇ ಅದಕ್ಕೆ ಬಾಗಿಲು. ಆ ಮಾರ್ಗವಾಗಿಯೇ ಈಗಲೂ ಅಟಲಾಂಟಿಕ್ ಮಹಾಸಾಗರವು ತನ್ನ ಎಷ್ಟೋ ಪಾಲು ನೀರನ್ನು ಒಳಗೆ ಬಿಡುತ್ತದೆ. ಈ ದಾರಿಯನ್ನೇ ಮುಚ್ಚಿಬಿಟ್ಟರೆ....

ಆಧುನಿಕ ವಿಜ್ಞಾನಿಗೆ ಇದು ಅಸಾಧ್ಯವೆನಿಸುವುದಿಲ್ಲ. ಜಿಬ್ರಾಲ್ಟರ ಜಲಸಂಧಿ ಕೇವಲ ಏಳೂವರೆ ಮೈಲು ಅಗಲವಿದೆ. ಅಲ್ಲೊಂದು ಒಡ್ಡು ಹಾಕಿ ಇದನ್ನು ಸಾಧಿಸಬಹುದು. ಆಗ ಅಟಲಾಂಟಿಕದ ನೀರು ಅಟಲಾಂಟಿಕದಲ್ಲಿ, ಭೂಮಧ್ಯ ಸಮುದ್ರದ್ದು ಭೂಮಧ್ಯ ಸಮುದ್ರದಲ್ಲಿ ಉಳಿಯುವುದು. ಈ ಯೋಜನೆಯನ್ನು ಕಾರ್ಯರೂಪಕ್ಕಿಳಿಸಲು ವಿಶ್ವದ ಮಹಾಶಿಲ್ಪಿಗಳು ತಮ್ಮ ಮೇಧಾಶಕ್ತಿಯನ್ನು ಕೇಂದ್ರೀಕರಿಸಿದ್ದಾರೆ. ಇದರ ಅಧ್ವರ್ಯುಗಳಾದ ಹರಮಾನ್ ಸುರ್ಗಲರೆಂಬ ಇಂಜನಿಯರರು ಇದಕ್ಕೆ ವೆಚ್ಚವೂ ಹೆಚ್ಚು ಬರಲಾರದೆನ್ನುತ್ತಾರೆ. ೧೮ ಮೈಲು ಉದ್ದದ ಆಣೆಕಟ್ಟು ಕಟ್ಟಬೇಕೆಂದು ಅವರ ಯೋಜನೆಯಿದೆ. ಅದರ ತಳಪಾಯ ೧೬೫೦ ಅಡಿ ಅಗಲ; ತುಟ್ಟ ತುದಿಯ ಅಗಲ ೧೬೫ ಅಡಿ. ಇಷ್ಟು ಶಕ್ತಿಯುತವಾದ ಒಡ್ಡು, ಅಟಲಾಂಟಿಕ ಮಹಾಸಾಗರದ ಅಪಾರನೀರಿನ ಒತ್ತಡವನ್ನು ಬಲು ಭದ್ರವಾಗಿ ತಡೆಗಟ್ಟಬಲ್ಲದು.

ಇನ್ನು ಇದರ ಪರಿಣಾಮವನ್ನಷ್ಟು ನೋಡುವಾ. ಅಟಲಾಂಟಿಕ ಮಹಾಸಾಗರವು ಸೆಕೆಂಡಿಗೆ ೩೦ ಲಕ್ಷ ಘನಫೂಟು ನೀರನ್ನು ಭೂಮಧ್ಯ ಸಮುದ್ರಕ್ಕೆ ಚೆಲ್ಲುತ್ತದೆ. ಈ ಒಡ್ಡು ಅದನ್ನು ತಡೆಗಟ್ಟುತ್ತದೆ. ಇದರಿಂದ ಭೂಮಧ್ಯ ಸಮುದ್ರದ ಪಾತಳಿಯು ಪ್ರತಿವರ್ಷ ೫॥ ಫೂಟು ತಳಕ್ಕಿಳಿಯುವದು. ಭೂಮಧ್ಯ ಪ್ರದೇಶದ ಉಷ್ಣತೆಯೂ ಪ್ರಚಂಡ; ಈ ಉಷ್ಣತೆಯೂ ಜಲರಾಶಿಯನ್ನು ಬತ್ತಿಸಲು ನೆರವಾಗುವದು. ಈ ಬಾಷ್ಪೀಕೃತ ನೀರಿನಲ್ಲಿ ಮಳೆಯ ರೂಪದಲ್ಲಿ ತಿರುಗಿ ನದಿ ಸಮುದ್ರಗಳನ್ನು ಸೇರುವದು ಕೇವಲ ಮೂರರಲ್ಲೊಂದು ಭಾಗ ಮಾತ್ರ. ಈ ರೀತಿ ಇಡೀ ಸಮುದ್ರವನ್ನೇ ಕ್ರಮೇಣ ಬತ್ತಿಸಿ, ಸುಮಾರು ೨,೨೦,೦೦೦ ಚದುರು ಮೈಲಿ ಭೂಮಿಯನ್ನು ಸೆಳೆದುಕೊಳ್ಳಲು ಮಾನವನು ಯೋಚಿಸುತ್ತಿದ್ದಾನೆ.

ಇದರ ಪರಿಣಾಮಸ್ವರೂಪವಾಗಿ, ಭೂಮಧ್ಯ ಸಮುದ್ರ ದೊಡ್ಡ ಕೊಳ್ಳವಾಗುವದು; ಅದರಲ್ಲಿ ನುಗ್ಗುವ ನದಿಗಳು ಜಲಪ್ರಪಾತಗಳ ರೂಪ ಧರಿಸುವವು.

ಆಗ ಮಾನವನು ಈ ಜಲಶಕ್ತಿಯಿಂದ ಅಲ್ಲಿ ವಿಪುಲವಾದ ವಿದ್ಯುದುತ್ಪಾದನ ಕೇಂದ್ರಗಳನ್ನು ಸ್ಥಾಪಿಸುವನು. ಎಷ್ಟೋ ಭಾಗ ಭೂಪ್ರದೇಶವನ್ನು ಸಾಗುಮಾಡಿ ಬೆಳೆಯನ್ನು ಉತ್ಪಾದಿಸುವನು. ನಗರಗಳನ್ನು ನಿರ್ಮಿಸುವನು.




೫೦,೦೦೦ ವರ್ಷಗಳ ಹಿಂದೆ ಭೂಮಧ್ಯ ಸಮುದ್ರ ಮೇಲಿನಂತಿತ್ತು. ಆಗ ಹಿಮಾಲಯವಿರಲಿಲ್ಲ. ಉತ್ತರ ಭಾರತವೆಲ್ಲ ಸಮುದ್ರವಾಗಿತ್ತು. ಕಪ್ಪು ಭಾಗ ಅಂದಿನ ಸಮುದ್ರಗಳನ್ನು ತೋರಿಸುತ್ತದೆ.

ಸುಮಾರು ಹತ್ತು ವರ್ಷಗಳಲ್ಲಿ ನೀರುಸಾಗರದ ೩೫ ಫೂಟು ಕೆಳಕ್ಕಿಳಿಯುವದು. ನೂರು ವರುಷಗಳಲ್ಲಿ ಪಶ್ಚಿಮ ಅಂಚಿನಲ್ಲಿಯ ಮೆಜಾರ್ಕಾ, ಮಾಯನಾರ್ಕಾ, ಸಾರ್ಡಿನಾ, ಕೊರ್ಸಿಕಾ ಇತ್ಯಾದಿ ದ್ವೀಪಗಳು ಒಂದುಗೂಡುವವು. ಇದರಿಂದ ೬೦,೦೦೦ ಚದರ ಮೈಲು ಹೊಸ ಸುಭಿಕ್ಷ ಪ್ರದೇಶವು ವಶಕ್ಕೆ ಬರುವದು.

ಇದಾದ ಬಳಿಕ, ಸಿಸಿಲಿ, ಇಟಲಿಗಳ ನಡುವೆ, ಸಿಸಿಲಿ ಟ್ಯುನೀಸಿಯಾಗಳ ನಡುವೆ ಹೀಗೆ ಎರಡು ಒಡ್ಡುಗಳನ್ನು ನಿರ್ಮಿಸಲಾಗುವದು. ಇದರಿಂದ ಭೂಮಧ್ಯಸಮುದ್ರ ಒಡೆದು ಇಭ್ಭಾಗವಾದಂತಾಗುವದು.

ಇದೇ ರೀತಿ ೨೦೦ ವರುಷಗಳು ಕಳೆದರೆ, ಭೂಮಧ್ಯ ಸಮುದ್ರದ ಮಟ್ಟ ೩೩೦ ಫೂಟು ತಳಕ್ಕಿಳಿಯುವದು. ಆಗ ಅದರ ಪಶ್ಚಿಮ ಭಾಗದ ಜಲಾಶಯ ಪೂರ್ಣ ಬತ್ತುವದು. ಆಗ ಸುಯೇಜ ಕಾಲುವೆಯ ಪ್ರಯೋಜನವೇ ಆಗದಲ್ಲ ಎಂದು ಸಂದೇಹಬರುವದು ಸಹಜ. ಅದಕ್ಕೂ ಯೋಜನೆ ಸಿದ್ಧವಾಗಿಯೇ ಇದೆ. ಜಿಬ್ರಾಲ್ಟರ ಜಲಸಂಧಿಯಿಂದ, ಸಿಸಿಲಿಯ ಆಣೆಕಟ್ಟುಗಳಿಂದ ಹಾಯ್ದು ಸುಯೇಜ ಕಾಲುವೆಗೆ ಕೂಡುವಂತೆ ಪನಾಮಾ ಕಾಲುವೆಯಂಥ ಅತಿ ದೊಡ್ಡ ಕಾಲುವೆಯನ್ನು ರಚಿಸಲಾಗುವದು. ಪಶ್ಚಿಮ ಭಾಗದ ಜಲಾಶಯ, ಕಪ್ಪು ಸಮುದ್ರ, ನೀಲನದಿಯ ನೀರು ಈ ಕಾಲುವೆಯ ನೀರಿನ ಆಳವನ್ನು ಹೆಚ್ಚಿಸಲು ತಗ್ಗಿಸಲು ನೆರವು ನೀಡುವವು. ಆಗ ಸುಯೇಜ ಕಾಲುವೆಯ ಆಳವನ್ನು ಇನ್ನೂ ತಗ್ಗಿಸಿದರೆ, ಅಟಲಾಂಟಿಕ ಮಹಾಸಾಗರದ ನೀರು ಕೆಂಪು ಸಮುದ್ರದತ್ತ ರಭಸದಿಂದ ನುಗ್ಗತೊಡಗುವದು. ಅಟಲಾಂಟಿಕ ಸಾಗರದಲ್ಲಿ ಹರಿಯುವ ಉಷ್ಣ ಜಲಪ್ರವಾಹ (Gulf Stream) ವು ಉತ್ತರ ಯುರೋಪದತ್ತ ಪ್ರವಹಿಸುವದು. ಇದರಿಂದ ಉತ್ತರ ಯುರೋಪದ ಬಂದರುಗಳಲ್ಲಿ, ಹಿಮಕಾಲದಲ್ಲಿ ಗಡ್ಡೆಗಟ್ಟುವ ಸಮುದ್ರ ಕರಗಿ, ಅವು ವರ್ಷದಲ್ಲಿ ಹನ್ನೆರಡು ತಿಂಗಳ ಕಾಲವೂ ರಹದಾರಿಗೆ ಉಪಯುಕ್ತವಾಗುವವು. ಆಗ ಆಯಾತ

ನಿರ್ಯಾತ, ವ್ಯಾಪಾರ-ವ್ಯವಹಾರಗಳ ಅಭಿವೃದ್ಧಿಗೆ ಹೊಸ ಕಳೆಯೇರುವದು.

ಆಧುನಿಕ ಪರಶುರಾಮರ ಈ ಯೋಜನೆ ಕಾರ್ಯಗತವಾಗಲು ಎಂದಿನಂತೆ ರಾಜಕೀಯ ಕಾರಣಗಳೇ ಅಡ್ಡಿಯಾಗಿವೆ. ಭೂಮಧ್ಯ ಸಮುದ್ರದ ಸುತ್ತಲೂ ಇರುವ ಎಲ್ಲ ರಾಷ್ಟ್ರಗಳು ಇದಕ್ಕೆ ಒಪ್ಪಿಗೆ ಕೊಡಬೇಕಾಗುವುದು. ಅವು ಮೊದಲು ತಮ್ಮ ರಾಷ್ಟ್ರೀಯ ಹಿತಸಂಬಂಧಗಳನ್ನೇ ಚಿಂತಿಸುವವು. ಭೂಮಧ್ಯ ಸಮುದ್ರದ ಅಸ್ತಿತ್ವದಿಂದ ಲಾಭ ಪಡೆಯುತ್ತಿರುವ ರಾಷ್ಟ್ರಗಳಿಗೆ ಈ ಯೋಜನೆ ರುಚಿಸಲಾರದು. ಸಮುದ್ರವನ್ನು ಬತ್ತಿಸಿದ್ದರಿಂದ ಸಿಕ್ಕಿದ ಭೂಮಿಯನ್ನು ಹೇಗೆ ಹಂಚಬೇಕೆಂಬುದೂ ಒಂದು ಪ್ರಶ್ನೆ. ಮೇಲಾಗಿ ಇಟಲಿಯ ಸಮುದ್ರ ತೀರದ ಸೊಬಗಿಗೆ ಮಾರುಹೋದ ಭಾವಿಕರಿಗೆ ನಿಸರ್ಗಸೌಂದರ್ಯದ ಬೀಡನ್ನು ನಾಶ ಮಾಡುವುದು ಸರ್ವಥಾ ರುಚಿಸುವಂತಿಲ್ಲ. ಇಷ್ಟು ದೊಡ್ಡ ಸಮುದ್ರ ಬತ್ತಿದರೆ ಸುತ್ತಮುತ್ತಲ ಮಳೆ ಬೆಳೆಗಳ ಮೇಲೆ ಏನು ಪರಿಣಾಮವಾದೀತೆಂದು ಸಂದೇಹಪಡುವವರೂ ಇಲ್ಲದಿರರು. ಆದರೆ ಬೆಳೆಯುತ್ತಿರುವ ಜನಸಂಖ್ಯೆಯ ಒತ್ತಡ ಮಿತಿಮೀರುತ್ತಿರುವಾಗ ಇಂಜನಿಯರರ ಈ ಕನಸು ನನಸಾಗುವ ದಿನಗಳೂ ಬರಬಹುದು. ಹಾಗಾದಾಗ ಅದು ಮಾನವ ಸಾಹಸದ ಮತ್ತೊಂದು ಮೈಲುಗಲ್ಲೆನಿಸುವಲ್ಲಿ ಸಂಶಯವಿಲ್ಲ.



## ೧೮ ಅಡಿ ಎತ್ತರದ ಮನುಷ್ಯರು

ಸೈನ್ಯ ಶಾಖೆಯ ಇಂಜನಿಯರರು ಓರ್ವ ಲೆಫ್ಟನಂಟನಿಗೆ “ಹದಿನೈದು ಜನರನ್ನು ಕರೆದುಕೊಂಡು ಹೋಗಿ ಆ ಅಲ್ಲರ್ ಪ್ರದೇಶದಲ್ಲಿ ರಸ್ತೆ ತಯಾರಿಸಬೇಕು” ಎಂದು ಅಪ್ಪಣೆ ಮಾಡಿದರು.

“ಅಲ್ಲರ್ ಬಹಳ ಆಳವಿದೆ. ನಮ್ಮ ಜನರು ಅದರಲ್ಲಿಳಿದು ಮುಂದೆ ಹೋಗುವದು ಸಾಧ್ಯವಿಲ್ಲ” ಎಂದು ಲೈಫ್ಟನಂಟ್ ತುಸು ಸಮಯದ ನಂತರ ವರದಿ ಮಾಡಿದ.

“ಹೀಗೆ ತಪ್ಪಿಸಿದರೆ ನಡೆಯದು. ನಿನಗೇನು ಬೇಕೋ ಅದನ್ನು ಬರಹದ ಮೂಲಕ ತಿಳಿಸು. ಅಗತ್ಯವಿರುವದನ್ನು ಪೂರೈಸುತ್ತೇನೆ. ರಸ್ತೆ ಆಗಲೇಬೇಕು” ಎಂದರು ಇಂಜನಿಯರರು.

ಕೆಲ ನಿಮಿಷಗಳ ನಂತರ ಲೆಫ್ಟನಂಟ್ ಬಂದು ಇಂಜನಿಯರರ ಮೇಜಿನಮೇಲೆ ಒಂದು ಅರ್ಜಿಯನ್ನಿಟ್ಟ. ಅದರಲ್ಲಿ “೧೫ ಅಡಿ ಆಳವಿರುವ ಅಲ್ಲರ್ ಪ್ರದೇಶವನ್ನು ದಾಟಲು ೧೮ ಅಡಿ ಎತ್ತರದ ೧೫ ಜನರನ್ನು ಒದಗಿಸಬೇಕು” ಎಂದಾತ ಬರೆದಿದ್ದ.

ಗಿರಾಕಿ (ಊಟ ಮಾಡುತ್ತ): “ಈ ಹೋಟೆಲು ಹೊಸ ವ್ಯವಸ್ಥಾಪಕರ ಕಡೆ ಹೋಗಿದೆಯೆಂದು ಜಾಹಿರಾತು ಕೊಟ್ಟಿದ್ದೀರಿ. ಆದರೆ ಹಳೇ ಮೆನೇಜರರೇ ಇದ್ದಾರಲ್ಲ ಇನ್ನೂ?”

ಮಾಣಿ: “ಹೌದು ಸ್ವಾಮಿ. ಆದರೆ ಮೊನ್ನೆ ತಾನೆ ಅವರಿಗೆ ಮದುವೆ ಆಗಿದೆ.

ಪ್ರೊ. ವಿ. ಎಸ್. ಯಲವಿಗಿ

# ಹಾವಸೆಯಿಂದ ಆಹಾರ

**ಕ್ಲೊರೆಲ್ಲಾ ಎಂಬ ಹಾವಸೆಯು ಕೊನೆಗೆ ಮಾನವಕುಲದ ಕೊನೆಯಿಲ್ಲದ ಹಸಿವನ್ನು ನೀಗಿಸಬಹುದೆ ?**

ಅಪರಿಮಿತವಾಗಿ ಬೆಳೆಯುತ್ತಿರುವ ಮಾನವ ಜಾತಿಗೆ ಆಹಾರವೆಲ್ಲಿಂದ ದೊರಕಿಸಬೇಕು ? ಎಂಬ ಗಂಭೀರ ಸಮಸ್ಯೆಗೆ ಶಾಶ್ವತ ಪರಿಹಾರವು ನಮಗೆಲ್ಲ ಪರಿಚಿತವಾದ ಹಾವಸೆ ಅಥವಾ ಪಾಚಿ ಯೆಂಬ ಕ್ಷುದ್ರ ಹಸುರು 'ಸಸ್ಯ'ದಿಂದ ದೊರಕ ಬಹುದು ಎಂಬ ಆಶೆ ಕಾಣಿಸತೊಡಗಿದೆ. ಜೀವ ವಿಜ್ಞಾನಿಗಳು ಈ ಕುರಿತು ನಡೆಸಿದ ಸಂಶೋಧನೆ ಗಳು ಈ ಆಶೆಗೆ ಆಧಾರವಾಗಿವೆ.

ಹಾವಸೆಯ ಒಂದು ಜಾತಿಯಾದ ಕ್ಲೋರೆಲ್ಲಾ (Chlorella) ಎಂಬುದರಲ್ಲಿ ಉತ್ತಮ ಆಹಾರ ಗುಣಗಳಿವೆಯೆಂದು ವಿಜ್ಞಾನಿಗಳು ಕಂಡುಹಿಡಿ ದಿದ್ದಾರೆ. ಕೆರೆಹೊಂಡಗಳ ನೀರ ಮೇಲೆ,ಇಲ್ಲವೆ ತೇವವಾದ ಭೂಮಿ ಅಥವಾ ಮರಗಿಡಗಳ ತೊಗ ಟೆಯ ಮೇಲೆ ಬೆಳೆದಿರುವ ಹಚ್ಚಹಸುರು ಬಣ್ಣದ ಪೊರೆಯೇ ಈ ಹಾವಸೆ. ಅದು ಅತಿ ಸೂಕ್ಷ್ಮ ಗಾತ್ರದ ಒಂದೇ ಜೀವಕೋಶ (Cell) ವುಳ್ಳ ಜೈವಿಕ ಪದಾರ್ಥವಾಗಿದೆ. "ಕ್ಲೊರೊಫಾಯ್ಟಾ" ಎಂಬ ವರ್ಗಕ್ಕೆ ಸೇರಿದ ಈ ಹಾವಸೆಯನ್ನು ಮೊದಲು ಶೋಧಿಸಿ ತೆಗೆದಾತನು ಪ್ರಾಣವಾಯು (ಆಮ್ಲಜನಕ)ವನ್ನು ಕಂಡುಹಿಡಿದ ಪ್ರೀಸ್ಟ್ಲಿ ಎಂಬ ೧೮ ನೇ ಶತಮಾನದ ವಿಜ್ಞಾನಿ.

ಅನಂತರ ಬಿಜರಿಂಕನೆಂಬ ಡಚ್ ವಿಜ್ಞಾನಿಯು ಇತರ ಹಾವಸೆಗಳಿಂದ ಇದನ್ನು ಬೇರ್ಪ ಡಿಸಿ ೧೮೯೦ ರಲ್ಲಿ ಇದಕ್ಕೆ ಹೆಸರು ಕೊಟ್ಟನು. ಅವನು ಕ್ಲೊರೆಲ್ಲಾದಿಂದಾಗುವ ಕರ್ಬಗ್ರಹಣದ ಮೇಲೆ ಎಷ್ಟೋ ಮಹತ್ವದ ಪ್ರಯೋಗಗಳನ್ನು ಮಾಡಿದನು. ಕ್ಲೊರೆಲ್ಲಾದಲ್ಲಿ ಒಂಭತ್ತು ಜಾತಿ ಗಳಿದ್ದರೂ ಕ್ಲೊರೆಲ್ಲಾ ವಲ್ಗಾರಿಸ್ (C. vulgaris) ಮತ್ತು ಕ್ಲೊ-ಪಾಯರಿನಾಯ-ಡೋಸಾ (C. pyrenoidosa) ಇವೆರಡೇ ಮುಖ್ಯವಾದವು.

ಒಂದು ಕ್ಲೊರೆಲ್ಲಾ "ಸಸ್ಯ"ದ ಉದ್ದಳತೆ ೦·೦೦೦೦೪ ಅಂಗುಲ ಮಾತ್ರ. ಸೂಕ್ಷ್ಮದರ್ಶಕ ದಲ್ಲಿ ಅದನ್ನು ೩೦೦೦ ಪಟ್ಟು ದೊಡ್ಡದು ಮಾಡಿ ನಿರೀಕ್ಷಿಸಿದರೆ ಅದು ಬರೀ ನಮ್ಮ ಕಣ್ಣುಗುಡ್ಡೆ ಯಷ್ಟು ದೊಡ್ಡದಾಗಿ ಕಾಣಬಹುದು.

ಆದರೆ ಕ್ಲೊರೆಲ್ಲಾ ಪಾಯರಿನಾಯಡೋಸಾ ಒಳ್ಳೇ ಉತ್ತಮವಾದ ಮತ್ತು ಪೌಷ್ಟಿಕವಾದ ಆಹಾರವಾಗಿದೆ. ಇತರ ಸಸ್ಯಗಳಂತೆ ಇದಕ್ಕೆ ಬೇರು, ಕಾಂಡ ಮತ್ತು ಎಲೆ ಹೀಗೆ ಬೇರೆ ಬೇರೆ ಭಾಗಗಳಿಲ್ಲದೆ ಇದು ಮೇಲೆ ಹೇಳಿದಂತೆ ಬರೀ ಒಂದೇ ಒಂದು ಜೀವಕೋಶದಿಂದಾಗಿದೆ. ಆದ್ದ ರಿಂದ ಈ ಇಡೀ ಸಸಿಯೇ ನಮ್ಮ ಆಹಾರವಾಗಬ-ಲ್ಲದು. ಇದರಲ್ಲಿಯ ಪ್ರೊಟೀನಿನ ಪ್ರಮಾಣವು ನಮ್ಮದಿನದ ಕಾಯಿಪಲ್ಲೆಗಳಿಗಿಂತ ಹೆಚ್ಚಿಗೆ ಇದೆ ಯಲ್ಲದೆ ಸ್ನಿಗ್ಧ ಪದಾರ್ಥಗಳು ಹಾಗೂ ಪಿಷ್ಟ ಪದಾರ್ಥಗಳೂ ಇದರಲ್ಲಿವೆ. ದೇಹದ ಪೋಷಣೆಗೆ ಬೇಕಾಗುವ ಎಲ್ಲ ಸಸಾರಜನಕ ಆಮ್ಲಗಳೂ

---

ಪ್ರೊ. ಯಲವಿಗಿಯವರು ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಸಸ್ಯಶಾಸ್ತ್ರದ ಪ್ರಾಧ್ಯಾಪಕ ರಾಗಿದ್ದು, ಕ್ಲೊರೆಲ್ಲಾ ವಿಷಯದಲ್ಲಿ ಸಂಶೋಧನೆ ನಡೆಸುತ್ತಿದ್ದಾರೆ.

( Amino acids ) ಮತ್ತು "ಸಿ" ಹೊರತಾಗಿ ಎಲ್ಲ ಜೀವನ ಸತ್ವಗಳೂ ( Vitamins ) ಕ್ಲೋರೆಲ್ಲಾದಲ್ಲಿವೆ. ಕ್ಲೋರೆಲ್ಲಾ ಒಂದೇ ಜೀವಕೋಶದಿಂದಾಗುವದರಿಂದ ಅದರ ಬೆಳವಣಿಗೆಗೆ ಇತರ ಬೆಳೆಗಳಿಗಿಂತ ಅತಿ ಕಡಿಮೆ ಸ್ಥಳ ಸಾಕು. ಸುಮಾರು ೧೦೦೦ ಚೌ. ಮೈಲಿನಲ್ಲಿ ಬೆಳೆಯುವ ಕ್ಲೋರೆಲ್ಲಾವು ಇಡೀ ಮಾನವ ಕುಲಕ್ಕೆ ಬೇಕಾಗುವ ಅರ್ಧದಷ್ಟು ಪ್ರೋಟೀನನ್ನು ಒದಗಿಸಬಲ್ಲದು !

ಇನ್ನೊಂದು ಗುಣವೆಂದರೆ ಕ್ಲೋರೆಲ್ಲಾ ಒಳ್ಳೇ ಭರದಿಂದ ಬೆಳೆಯಬಹುದು. ಒಂದು ಕ್ಲೋರೆಲ್ಲಾ ಸಸಿಯನ್ನು ( ಜೀವಕೋಶ ) ಬೆಳೆಯಗೊಟ್ಟರೆ ೨೪ ತಾಸುಗಳಲ್ಲಿ ಅದು ತನ್ನ ಏಳು ಪಟ್ಟು ಜೀವಕೋಶಗಳನ್ನು ಹುಟ್ಟಿಸಬಲ್ಲುದು !

೧೯೪೮ ರ ವರೆಗೆ ಕ್ಲೋರೆಲ್ಲಾ ಪ್ರಯೋಗಗಳು ಇನ್ನೂ ಪರೀಕ್ಷಾನಲಿಕೆಯಲ್ಲಿಯೇ ಇದ್ದವು ( Test tube stage ). ೧೯೫೧ರಲ್ಲಿ ಅಮೇರಿಕೆಯ ಕಾರ್ನಿಗೀ ಸಂಸ್ಥೆಯವರು ಕ್ಲೋರೆಲ್ಲಾವನ್ನು ಒಳ್ಳೇ ದೊಡ್ಡ ಪ್ರಮಾಣದಲ್ಲಿ ಶಾಸ್ತ್ರೀಯ ಪದ್ಧತಿಯಲ್ಲಿ ಬೆಳೆಯಲು ಪ್ರಯತ್ನಿಸಿದರು. ಅಲ್ಲಿ ಒಂದು ಎಕರೆಗೆ ೧೭ ಟನ್ನಿನಷ್ಟು ಬೆಳೆ ಬಂದಿತು. ಕ್ಲೋರೆಲ್ಲಾದ ಬೆಳೆಗೆ ಬೇಕಾಗುವ ಪದಾರ್ಥಗಳೆಂದರೆ—ಹವೆ, ನೀರು ಮತ್ತು ಸೂರ್ಯಪ್ರಕಾಶ. ಇದರ ಮೇಲೆ ಜರ್ಮನಿ, ಇಂಗ್ಲಂಡ್, ಅಮೇರಿಕಾ, ಇಸ್ರೇಲ ದೇಶಗಳಲ್ಲಿ ಎಷ್ಟೋ ಸಂಶೋಧನೆಗಳು ನಡೆದಿವೆ. ಮುಖ್ಯವಾಗಿ ಕ್ಲೋರೆಲ್ಲಾ ಬೆಳೆಗೆ ಬೇಕಾದ್ದು ಅಂಗಾರಾಮ್ಲವಾಯು ಮತ್ತು ಸೂರ್ಯಪ್ರಕಾಶ. ಉಷ್ಣತಾಮಾನವು ೦ ದಿಂದ ೧೦೨° ಫಾ. ಇವುಗಳ ನಡುವೆ ಎಷ್ಟಿದ್ದರೂ ಸರಿಯೇ.

ಆಹಾರದ ಕೊರತೆ ಹೆಚ್ಚಿಗೆ ಇರುವ ಏಶಿಯಾ ದೇಶಗಳಲ್ಲಿ ಕ್ಲೋರೆಲ್ಲಾವನ್ನು ಆಹಾರ ಪದಾರ್ಥವನ್ನಾಗಿ ಪರಿವರ್ತಿಸಲು ಎಷ್ಟೋ ಸಂಶೋಧನೆಗಳು ನಡೆದಿವೆ. ಜಪಾನ, ಥಾಯಲಂಡ ಮುಂತಾದ ದೇಶಗಳಲ್ಲಿ ಎಷ್ಟೋ ಶತಮಾನಗಳಿಂದ ಹಾವಸೆಯನ್ನು ಆಹಾರವನ್ನಾಗಿ ಉಪಯೋಗಿಸುತ್ತಿದ್ದಾರೆ. ಆದ್ದರಿಂದ ಜಪಾನದಲ್ಲಿ ಕ್ಲೋರೆಲ್ಲಾದ ಮೇಲೆ ಸಂಶೋಧನೆ ಮಾಡಲು ದೊಡ್ಡ ದೊಡ್ಡ ಸಂಶೋಧನಾಲಯಗಳು ತಲೆಯೆತ್ತಿವೆ.

ಡಾ. ಹಿರೋಶಿ ಟಾಮಿಯಾ ಮತ್ತು ಅವನ ಪತ್ನಿ ಕ್ಲೋರೆಲ್ಲಾದಿಂದ ಎಷ್ಟೋ ಪ್ರಕಾರದ ಆಹಾರ ಪದಾರ್ಥಗಳನ್ನು ತಯಾರಿಸಿದ್ದಾರೆ. "ಈ ಆಹಾರ ಪದಾರ್ಥಗಳು ಬಹಳ ಸ್ವಾದಿಷ್ಟವೂ ರುಚಿಕರವೂ ಆಗಿವೆಯೆಂದು" ಕ್ಲೋರೆಲ್ಲಾ ಆಹಾರವನ್ನು ಸೇವಿಸಿದ ಕೆಲವು ವಿಜ್ಞಾನಿಗಳು ಉದ್ಗಾರ ತೆಗೆದಿದ್ದಾರೆ. ಈ ವಿಜ್ಞಾನಿಗಳಿಗೆ ಶ್ರೀಮತಿ ಟಾಮಿಯಾ ಕ್ಲೋರೆಲ್ಲಾದಿಂದ ತಯಾರಿಸಿದ ಬ್ರೆಡ್, ಐಸ್ಕ್ರೀಮು ಮತ್ತು ಸಾರನ್ನು ಬಡಿಸಿದ್ದಳು. ಇದಲ್ಲದೆ ಡಾ.ಟಾಮಿಯಾ ತನ್ನ ಟೋಕಿಯೋ ಶಿಕ್ಷಣ ಸಂಸ್ಥೆಗಳಲ್ಲಿಯ ವಿದ್ಯಾರ್ಥಿಗಳಿಗೆ ಕ್ಲೋರೆಲ್ಲಾ ಆಹಾರವನ್ನು ಕೊಟ್ಟು ಪರೀಕ್ಷಿಸಿದ್ದಾರೆ. ವಿದ್ಯಾರ್ಥಿಗಳಿಗೆ ಈ ಆಹಾರವು ರುಚಿಕರವೆನಿಸಿತಂತೆ. ಕ್ಲೋರೆಲ್ಲಾ ಪುಡಿಯನ್ನು ಚಹದ ಪುಡಿಯೊಡನೆ ಬೆರಸಿದರೆ ಈ ಮಿಶ್ರಣದಿಂದಾಗುವ ಚಹವು ಸ್ವಾದಿಷ್ಟವೂ ಪುಷ್ಟಿಕರವೂ ಆಗುತ್ತದೆಂದು ಹೇಳಲಾಗಿದೆ. ಒಂದು ಸಣ್ಣ ಚಮಚೆಯಷ್ಟು ಕ್ಲೋರೆಲ್ಲಾ ಪುಡಿಯು ಒಂದು ಔಂಸು ಮಾಂಸದಷ್ಟು ಪುಷ್ಟಿಯನ್ನು ಕೊಡುವದೆಂದು ವಿಜ್ಞಾನಿಗಳು ಲೆಕ್ಕ ಹಾಕಿದ್ದಾರೆ !

ಸಣ್ಣ ಹೊಂಡ ಕೆರೆಗಳಲ್ಲಿ ಬೆಳೆಯುವ ಈ ಹಾವಸೆಯು ಮಾನವ ಕುಲಕ್ಕೆ ಹೊಸ ಆಶಾಂಕುರಗಳನ್ನು ಹುಟ್ಟಿಸುತ್ತಿರುವಾಗ ಭಾರತೀಯ ವಿಜ್ಞಾನಿಗಳ ಕುತೂಹಲವನ್ನು ಇದು ಕೆರಳಿಸದೇ ಬಿಟ್ಟಿಲ್ಲ. ಮುಂಬಯಿ, ಕಲ್ಕತ್ತಾ, ವಾರಣಾಸಿ, ಮದ್ರಾಸ್ ಮುಂತಾದ ಸಂಶೋಧನಾಲಯಗಳಲ್ಲಿ ಆಹಾರ ಮತ್ತು ಶಕ್ತಿಯನ್ನು ನೀಡುವ ಈ ಹಾವಸೆಯ ಬಗ್ಗೆ ಇಗಾಗಲೇ ಸಂಶೋಧನೆಗಳು ನಡೆದಿವೆ. ಭಾರತದ ಕೃಷಿ ಮತ್ತು ಆಹಾರ ಮಂತ್ರಿ ವಿಭಾಗವೂ ಮೈಸೂರಿನ ಆಹಾರ ಸಂಶೋಧನಾಲಯವೂ ಈ ಹಾವಸೆಯ ಬಗ್ಗೆ ನಡೆದಿರುವ ಸಂಶೋಧನೆಗಳಲ್ಲಿ ಒಳ್ಳೇ ಆಸಕ್ತಿಯನ್ನು ವಹಿಸುತ್ತಿವೆ.

ಕೆಲವು ವಿಜ್ಞಾನಿಗಳು ಕ್ಲೋರೆಲ್ಲಾವನ್ನು ದಿನದ ಆಹಾರದಲ್ಲಿಯ ಒಂದು ಅಂಗವಾಗಿ ಮಾಡಲು ಪ್ರಯತ್ನಿಸುತ್ತಿದ್ದರೆ, ಇನ್ನೂ ಕೆಲವರು ಈ ಹಾವಸೆಯಲ್ಲಿ ಅಡಗಿರುವ ಶಕ್ತಿಯನ್ನು ಮಾನವಕೋಟಿಯ ವಿವಿಧ ಚಟುವಟಿಕೆಗಳಿಗಾಗಿ ಉಪಯೋಗಿಸಲು ಯೋಜಿಸುತ್ತಿದ್ದಾರೆ. ಪೃಥ್ವಿಯ ಬರೀ ೧/೧೦ ಭೂಮಿಯ ಮೇಲೆ ಬೆಳೆಯುವ ಕ್ಲೋರೆಲ್ಲಾದಿಂದ ಮಾನವಕುಲಕ್ಕೆ ಬೇಕಾಗುವ ಎಲ್ಲ ಆಹಾರ ಮತ್ತು ಶಕ್ತಿಯನ್ನು ಒದಗಿಸಬಲ್ಲೆವು ಎಂದು ಒಬ್ಬ ವಿಜ್ಞಾನಿ ನುಡಿದಿದ್ದಾನೆ. ಇದಕ್ಕೆ ಕಾರಣವೆಂದರೆ ಕ್ಲೋರೆಲ್ಲಾವು ಸೂರ್ಯಪ್ರಕಾಶವನ್ನು ಅತಿ ಹೆಚ್ಚಿನ ಪ್ರಮಾಣದಲ್ಲಿ ಆಹಾರರೂಪವಾಗಿ ಪರಿವರ್ತಿಸಿ ಸಂಗ್ರಹಿಸಬಲ್ಲದು. ಹೀಗೆ ಅದು ಸಂಗ್ರಹಿಸಿದ ಶಕ್ತಿಯನ್ನು ನಮ್ಮ ಚಟುವಟಿಕೆಗಳಿಗೆ ಉಪಯೋಗಿಸಬಹುದು.

ಜಗತ್ತಿನ ೧/೩ ಜನಸಂಖ್ಯೆಯು ಸಾಕಷ್ಟು ಆಹಾರವಿಲ್ಲದೆ ಹಸಿವೆಯಿಂದ ಬಳಲುತ್ತಿದೆ. ಕ್ಲೋರೆಲ್ಲಾ—ಅತೀ ವೇಗದಿಂದ ಹಾಗೂ ಅತೀ ಕಡಿಮೆ ಪ್ರದೇಶದಲ್ಲಿ ಸಾಕಷ್ಟು ಬೆಳೆಯುವದರಿಂದ, ಇದನ್ನು ದಿನದ ಆಹಾರದಲ್ಲಿ ಸಮೀಕರಿಸಲು ವಿಜ್ಞಾನಿಗಳು ಪ್ರಯತ್ನಿಸುತ್ತಿರುವದು ಒಳ್ಳೇ ಆಶಾದಾಯಕವಾಗಿದೆ.

---

## ಏನು ಸಂದೇಶ ಕೊಡಲಿ ?

೧೯೩೬ ರಲ್ಲಿ ಡಾ॥ ಭಗವಾನ್‌ದಾಸರು ಆಗಿನ ಕೇಂದ್ರ ಎಸೆಂಬ್ಲಿಯ ಸದಸ್ಯರಾಗಿದ್ದರು. ಆ ದಿನಗಳಲ್ಲಿ ಹೊಸ ಪತ್ರಿಕೆಯೊಂದನ್ನು ಪ್ರಕಟಿಸಲು ನಿರ್ಧರಿಸಿದ ಪತ್ರಿಕೋದ್ಯೋಗಿಯೊಬ್ಬರು ಅವರನ್ನು ಭೆಟ್ಟಿ ಮಾಡಲು ಹೋದರು.

ಡಾ॥ ಭಗವಾನ್ ದಾಸರ ಮಗ ಶ್ರೀಪ್ರಕಾಶರ ಪರಿಚಯು ಆ ಪತ್ರಿಕಾಕರ್ತರಿಗೆ ಚೆನ್ನಾಗಿ ಇದ್ದದ್ದರಿಂದ ಅವರು ಭಗವಾನ್ ದಾಸರನ್ನು ನೋಡುವುದು ಸುಲಭವೇನೋ ಆಯಿತು. ಹಾಗೂ ತನ್ನ ಹೊಸ ಪತ್ರಿಕೆಗೆ ಸಂದೇಶ ಕೊಡುವಂತೆ ಭಗವಾನ್ ದಾಸರನ್ನು ಕೇಳಿದ್ದೂ ಆಯಿತು. ಒಡನೆಯೇ ಅತ್ಯಂತ ಸ್ನೇಹಮಯ ಸ್ವರದಿಂದ ಅವರು ಕೇಳಿದರು: "ನೀವು ನನ್ನಿಂದ ಎಂಥ ಸಂದೇಶವನ್ನು ಬಯಸುತ್ತೀರಿ ?" "ನಾನು ನಿಮಗೇನು ಹೇಳಲಿ ? ಅದು ನಿಮ್ಮಿಷ್ಟ, ಏನಾದರೂ ಸರಿ ನೀವು ನಮ್ಮ ಪತ್ರಿಕೆಗೆ ಆಶೀರ್ವಾದರೂಪವಾಗಿ ಎರಡು ಮಾತು ಬರೆದುಕೊಟ್ಟರೆ ಸಾಕು." ಪತ್ರಿಕಾಕಾರ ಹೇಳಿದ. "ಒಳ್ಳೇದು. ನಿಮಗೆ ಏನು ಆಶೀರ್ವಾದ ಬೇಕೆಂದು ಬರೆದುಕೊಡಿ. ನೀವು ಡಾ॥ ಭಗವಾನ್ ದಾಸರು; ಮತ್ತು ನಾನು ನನ್ನ ಪತ್ರಿಕೆಗೆ ಸಂದೇಶ ಕೇಳುತ್ತಿದ್ದೇನೆ ಎಂದು ಭಾವಿಸಿಕೊಳ್ಳಿ. ಹೀಗೆ ನೆನೆದು ನೀವು ಸಂದೇಶ ಬರೆದುಕೊಟ್ಟ ಮೇಲೆ ನನ್ನ ಸಂದೇಶ ತಯಾರಾದಂತೆಯೆ" ಎಂದುಬಿಟ್ಟರು.

"ಹೀಗೆ ಬರೆದುಕೊಡುವುದು ನನ್ನಿಂದ ಸಾಧ್ಯವಿಲ್ಲ." ಎಂದಷ್ಟೇ ಪತ್ರಿಕಾಕಾರ ಹೇಳಿದ.

"ಆದರೇನಂತೆ ? ಎರಡು ಮೂರು ದಿನ ಸಮಯ ತೆಗೆದುಕೊಂಡು ವಿಚಾರ ಮಾಡಿ ಬನ್ನಿ" ಎಂದು ಭಗವಾನ್‌ದಾಸರು ಹೇಳಿದರು. —ಧರ್ಮಯುಗ



ನಾಗರಾಜನ ರಾಣಿಯಾದ ಮನುಷ್ಯ ಕುವರಿಯು ಸತ್ಯ ವೃತ್ತಾಂತ

# ಹಾವಿನೊಡನೆ ಸರಸ

" ಭಾರತಜ್ಯೋತಿ "ಯಿಂದ

ಹಾವು ಕಂಡೊಡನೆ ಹೆದರುವ ಹೆಣ್ಣುಗಳು ತುಂಬ. ಆದರೆ ಕಾಮೋನ್ಮತ್ತ ಸ್ತ್ರೀ ಹಾವೆಂದರೆ ಹಿರಿಹಿರಿ ಹಿಗ್ಗುತ್ತಾಳೆ. ಜಗತ್ತಿನಲ್ಲಿಯೇ ವಿಶ್ವಾಸಾನರ್ಹವಾದ ಈ ಪ್ರಾಣಿಯನ್ನು ಕಾಮಿನಿಯರು ಪ್ರೇಮಿಸುತ್ತಾರೆ. ಜಗತ್ತಿನ ಪ್ರೇಮಪ್ರಪಂಚದಲ್ಲಿ ತನ್ನ ಧ್ವಜ ಹಾರಿಸಿದ "ಕ್ಲಿಯೊಪಾತ್ರಾ" ಒಂದು ನಾಗರ ಹಾವಿನ ಪ್ರೇಯಸಿಯಾಗಿದ್ದಳು.

ಅವಳು ತಾನು ಸಾಕಿದ ಗೋದಿ ನಾಗರ ಹಾವನ್ನು ಯಾವಾಗಲೂ ತನ್ನ ತುಂಬಿದೆದೆಯ ಮೇಲೆ ಮಲಗಿಸಿಕೊಳ್ಳುತ್ತಿದ್ದಳು. ಈ ನಾಗರಾಜ ಅವಳಿಗೆ ಅತ್ಯಂತ ಪ್ರಿಯನಾಗಿದ್ದ.

ಆಕೆ ತನ್ನ ಪ್ರಿಯನಿಗಿಂತಲೂ ಹೆಚ್ಚಾಗಿ ಈ ಹಾವಿನ ಮೇಲೆಯೇ ಮಮತೆ ಇರಿಸಿದ್ದಳು. ಒಮ್ಮೆ ಸಿಟ್ಟಿಗೆದ್ದು ಆ ಹಾವು ಕಚ್ಚಿದಾಗ ಕ್ಲಿಯೊಪಾತ್ರ ಹೇಳಿದ್ದೇನು ? " ತನ್ನ ಒಡತಿಗೆ ಗಾಢನಿದ್ರೆ ಬರಲೆಂದು ಅವಳ ಹೂಗೆನ್ನೆಯನ್ನು ಮುದ್ದಿಸುತ್ತಿದೆ ನನ್ನ ಪ್ರೀತಿಯ ನಾಗರಾಜ" ಎಂದು.

ಕ್ಲಿಯೊಪಾತ್ರಳ ಕಥೆಯೇಕೆ? ಕೇರಳದ ಮನ್ನಾರಶಾಲೆ ಎಂಬಲ್ಲಿ ಸಾವಿತ್ರಿಯೆಂಬವಳೊಬ್ಬಳಿದ್ದಾಳೆ. ಕಳೆದ ೪೦ ವರ್ಷಗಳಿಂದಲೂ ಅವಳು ಸಾವಿರಾರು ಹಾವುಗಳನ್ನು ಸಾಕಿ ಸಲಹಿ ಅವುಗಳೊಡನೆ ಸಂಸಾರ ನಡೆಸಿದ್ದಾಳೆ.

ಅವಳಿಗಿನ್ನೂ ಹನ್ನೆರಡು ದಾಟಿರಲಿಲ್ಲ, ಆಗ ಮದುವೆಯಾಯಿತು. ಹದಿಮೂರರಿಂದ ಹದಿನಾಲ್ಕಕ್ಕೆ ಕಾಲಿಡುವುದರೊಳಗಾಗಿ ಅವಳು ಗಂಡನಿಂದ ಬೇರೆಯಾದಳು. ಇಬ್ಬರ ವಿಚಾರ ಸರಣಿಗಳು ಬೇರೆಯಾದುವು.

ಕೇರಳದಲ್ಲಿ ಒಂದು ಪಂಗಡದ ಹೆಣ್ಣು ಮದುವೆಯಾದ ಮೊದಲಿಗೆ ಒಂದು ರಾತ್ರಿ ನಾಗ

ರಾಜನೊಡನೆ ಕಳೆಯುವ ರೂಢಿಯಿದೆ. ಸಾವಿರಾರು ನಾಗಮೂರ್ತಿಗಳಿರುವ ಮಂದಿರದಲ್ಲಿ ಮದುವಣಿಗಿತ್ತಿ ಸಾವಿತ್ರಿ ಆ ಒಂದು ರಾತ್ರಿಯನ್ನು ಕಳೆದಳು. ಆಗ ಅವಳಿಗೆ ನಿಜವಾದ ನಾಗದರ್ಶನವಾಯಿತಂತೆ. ಈಗಂತೂ ಅವಳು ಆ ನಾಗಗೃಹದಲ್ಲಿಯೇ ಮನೆಮಾಡಿಕೊಂಡಿದ್ದಾಳೆ. ಅಲ್ಲಿ ಹರಿದಾಡುವ ಸಾವಿರಾರು ಸರ್ಪಗಳ ರಾಣಿಯಾಗಿ ಸಾವಿತ್ರಿ ಅಲ್ಲಿ ತನ್ನ ಜೀವನಯಾತ್ರೆ ನಡೆಸುತ್ತಿದ್ದಾಳೆ.

"ಮನ್ನಾರಶಾಲೆ" ಯ ಬಗ್ಗೆ ಒಂದು ದಂತಕಥೆ ಇದೆ. ಪುರಾಣಕಾಲದಲ್ಲಿ ಖಾಂಡವ ದಹನವಾಯಿತಂತೆ. ಕಾಡಿನ ಗಡಿಯೊಳಗೆಯೇ ಇರುವ ಮನ್ನಾರಶಾಲೆಯ ಹೆಂಗಸರು ಆಗ ಅಗ್ನಿದೇವರನ್ನು ಪ್ರಾರ್ಥಿಸಿ ತಮ್ಮ ಮನೆಗಳು ಸುಡದಂತೆ ನೋಡಿಕೊಂಡರು. ಬೆಂಕಿಯ ಭಯವಿಲ್ಲದ ಮನ್ನಾರಶಾಲೆಯ ಈ ಮನೆಗಳನ್ನು ಸರ್ಪಗಳು ಬಂದು ಸೇರಿಕೊಂಡವು. ಮನೆಯವರು ಅವುಗಳನ್ನು ಹೊರಗೆ ಹಾಕಲಿಲ್ಲ.

ಕಾಲ ಕಳೆಯಿತು. ಮನ್ನಾರಶಾಲೆಯ ಅತಿ ಚೆಲುವೆಯೊಬ್ಬಳು ಒಂದು ಸುಂದರ ನಾಗದೊಡನೆ ಪ್ರಣಯ ಬೆಳೆಸಿದಳು. ಅಂದಿನಿಂದ ಮನ್ನಾರ ಶಾಲೆಯ ಹೆಣ್ಣು ಮೊದಲು ನಾಗರಾಜನ ಸತಿಯಾಗುತ್ತಾಳೆ; ಬಳಿಕ ಮಾನವ ಪ್ರಿಯಕರನ ಕೈಹಿಡಿಯುತ್ತಾಳೆ.

ಇಂತಹ ಒಂದು ಕುಟುಂಬದಲ್ಲಿ ಜನಿಸಿದ ಸಾವಿತ್ರಿ ಇಂದು ನಾಗದೇವತೆ, ನಾಗಸ್ವಾಮಿನಿ ಎಂದು ಹೆಸರಾಗಿದ್ದಾಳೆ. ಜನರು ಅವಳನ್ನು ಪರಮಸಾಧ್ವಿ, ಸಿದ್ಧಮಹಿಳೆಯೆಂದು ನಂಬುತ್ತಾರೆ. ಮನ್ನಾರಶಾಲೆಯಲ್ಲಿ ಅವಳ ದೈನಿಕ ಕಾರ್ಯಕ್ರಮಗಳೇನು ಎಂದು ಯಾರೂ ಅರಿಯರು. ಅವಳ ದರ್ಶನಕ್ಕೆ ಮಾತ್ರ ಜನ ನಾಲ್ಕೂ ದಿಕ್ಕುಗಳಿಂದ ಧಾವಿಸಿ ಬರುತ್ತಿದ್ದಾರೆ. ಒಂದೊಂದು ವೇಳೆ ಹೀಗೆ ಧಾವಿಸಿ ಬಂದವರು ಅವಳ ಮುಖ ದರ್ಶನವಾಗದೆ ನಿರಾಶರಾಗಿ ಹಿಂತಿರುಗುತ್ತಾರೆ. ಯಾಕೆಂದರೆ ಅವಳು ಗುಡಿಸಲಿನಿಂದ ಹೊರಬೀಳುವುದೆಂಬುದೇ ಇಲ್ಲ. ಮನ್ನಾರಶಾಲೆಯ ಮಗ್ಗಲಲ್ಲಿರುವ ಕೆರೆಗೆ ಮಹಾಶ್ವೇತೆಯಂತೆ ಶ್ವೇತವಸನೆಯಾಗಿ ಸಾವಿತ್ರಿ ಸ್ನಾನಕ್ಕೆ ಬರುವ ವಾಡಿಕೆಯುಂಟು. ಹಾಗೆಂದು ಪ್ರತಿದಿನವೂ ಅಲ್ಲಿಗೆ ಬಂದೇ ಬರುತ್ತಾಳೆಂಬ ನಿಯಮವಿಲ್ಲ.

ಸಾವಿತ್ರಿಯ ರೂಪು ದಿವ್ಯವಾದುದು. ಅವಳನ್ನು ಕಂಡವರು, ಅವಳ ಮುಖಚರ್ಯೆಯನ್ನು ದಿಟ್ಟಿಸಿದವರು ಭಕ್ತಿನಮ್ರರಾಗಿಬಿಡುವರು. ಶುಭ್ರವಸ್ತ್ರಧಾರಿಣಿಯಾಗಿ ಸರ್ವಶುಕ್ಲಾ ಸರಸ್ವತಿಯಂತೆ ಕಾಣುವ ಸಾವಿತ್ರಿ ಓಲಿಗರಿಯ ಕೊಡೆ ಹಿಡಿದುಕೊಂಡು ಬರುವಾಗ ಎಂತಹ ಉನ್ಮತ್ತವಾದ ತಲೆಯೂ ಅವಳನ್ನು ನೋಡಿ ಬಾಗದೆ ಇರುವುದಿಲ್ಲ.

ಆದರೆ ಮನ್ನಾರಶಾಲೆಯನ್ನು ಸೇರಿದೊಡನೆ ಸಾವಿತ್ರಿಯನ್ನು ಯಾರೂ ನೇರಾಗಿ ನೋಡುವಂತಿಲ್ಲ. ಮನೆಯ ಹೊರಗಿನ ಗೋಡೆಗಿರುವ ಒಂದು ಸಣ್ಣ ಕಿಂಡಿಯ ಮೂಲಕವಷ್ಟೇ ಅವಳ ದರ್ಶನ ಪಡೆಯಬಹುದು. ಅದೂ ಅನುಮತಿ ಪಡೆದ ಕೆಲವೇ ಜನರು ಮಾತ್ರ ಈ ಕಿಂಡಿಯ ಮೂಲಕ ಸಾವಿತ್ರಿಯು ಧ್ಯಾನಸ್ಥಳಾಗಿ ಕುಳಿತ ದೃಶ್ಯವನ್ನು ನೋಡಿದ್ದಾರೆ.

ಮಾನವರಿಗೂ ಸರ್ಪಗಳಿಗೂ ಪ್ರಣಯ ಸಂಬಂಧ ಬೆಳೆದುದು ಕೇರಳದ ಮನ್ನಾರಶಾಲೆಯಲ್ಲಿ ಮಾತ್ರವೇ ಅಲ್ಲ. ಉತ್ತರ ಕೇರಳದ "ಪಿಪ್ಪಿನಮೆಕ್ಕಟ" ಎಂಬ ಸರ್ಪಪೂಜಕ ಕೇಂದ್ರವು ಮಾನವತರುಣಿ ಸರ್ಪವನ್ನು ಮೋಹಿಸಿ ವಿವಾಹವಾದುದರ ಸ್ಮಾರಕವಾಗಿದೆ.

ಒಮ್ಮೆ ಒಬ್ಬ ಬಡ ನಂಬೂದರಿ ಒಬ್ಬ ಮಾಪಿಳ್ಳೆಯಿಂದ ಹಣವನ್ನು ಸಾಲಪಡೆದ. ಆ ಸಾಹೇಬ ಕೆಲ ದಿನಗಳಾದ ಮೇಲೆ ಸಾಲ ಇಡು, ಇಲ್ಲವೇ ನಿನ್ನ ಮಗಳನ್ನು ಕೊಡು ಎಂದು ಆ ನಂಬೂದರಿಯನ್ನು ಪೀಡಿಸತೊಡಗಿದ. ಆಗ ಇನ್ನೊಬ್ಬ ಬ್ರಾಹ್ಮಣ ತರುಣ ಈ ನಂಬೂದರಿಯ ಮೊರೆ ಕೇಳಿ ಸಾಲಗಾರನ ಹಣವನ್ನು ಸಂದಾಯ ಮಾಡಿದ. ಆ ತರುಣನ ಉಪಕಾರವನ್ನು ಸ್ಮರಿಸಿ ನಂಬೂದರಿಯ ಮಗಳು ಅವನನ್ನು ಮದುವೆಯಾದಳು.

ಅವರಿಬ್ಬರ ಸಂಸಾರ ಸಾಗಿದ್ದಾಗ ಒಂದುರಾತ್ರಿ

ಕುಮಾರಿಗೆ ಆತನ ನಡತೆಯ ಬಗ್ಗೆ ಸಂಶಯ ಬಂತು. ಅದಕ್ಕೆ ಕಾರಣವೂ ಇತ್ತು: ಪ್ರತಿದಿನ ರಾತ್ರಿ ಒಂದೆರಡು ಗಂಟೆ ಅವನು ಹೊರಗೆ ತಿರುಗಾಡಿ ಬರುತ್ತಿದ್ದ. ಅವಳು ಒಂದು ದಿನ ಗಟ್ಟಿ ಮನಸ್ಸಿನಿಂದ ಅವನನ್ನು ಹಿಂಬಾಲಿಸಲು ನಿರ್ಧರಿಸಿದಳು.

ಆ ದಿನವೂ ಕುಮಾರ ರಾತ್ರಿ ಮನೆಯಿಂದ ಹೊರಬಿದ್ದ. ಅವನ ಹಿಂದೆ ಕುಮಾರಿ ಕಳ್ಳ ಹೆಜ್ಜೆಯಲ್ಲಿ ಸಾಗಿದಳು. ಸ್ವಲ್ಪ ದೂರ ಹೋಗುವುದರೊಳಗೆ ತನ್ನ ಪತಿ ಒಂದು ಘಟಸರ್ಪವಾಗಿ ರೂಪಾಂತರಗೊಂಡುದನ್ನು ನೋಡಿ ಅವಳ ಜೀವ ಹಾರಿದಂತಾಗಿ ಚೀರಿಕೊಂಡಳು. ಅವಳು ಎಚ್ಚರದಪ್ಪಿ ನೆಲದ ಮೇಲೆ ಬಿದ್ದಾಗ ಜನರು ಅವಳ ಸುತ್ತ ನೆರೆದಿದ್ದರು. ಆದರೆ ಆ ಸರ್ಪ ಮಾತ್ರ ಭುಸುಗುಡುತ್ತ ಯಾವುದನ್ನೂ ಗಮನಿಸದೆ ನಿಶ್ಚೇತನೆಯಾಗಿ ಬಿದ್ದ ಕುವರಿಯನ್ನು ಎತ್ತಿಕೊಂಡು ಮನೆಯ ಪಡಸಾಲೆಯಲ್ಲಿರುವ ಬಿಲದೊಳಗೆ ನುಗ್ಗಿತು.

ಆಫ್ರಿಕದಲ್ಲಿಯೂ ಸ್ತ್ರೀಯರು ಸರ್ಪಗಳನ್ನು ವರಿಸುವ ವಾಡಿಕೆಯಿದೆ ಎನ್ನುತ್ತಾರೆ. ಅಲ್ಲಿನ ಕೆಲವು ಜನಾಂಗಗಳಲ್ಲಿ ಪ್ರಾಯಕ್ಕೆ ಬಂದ ಹುಡುಗಿ ಮೊದಲು ಸರ್ಪಾರಾಧನೆಯನ್ನು ಮಾಡುತ್ತಾಳೆ. ಯುವತಿಯಾದವಳು ಒಂದು ದಿನ ಇದ್ದಕ್ಕಿದ್ದಂತೆಯೇ ಕಾಡಿನಲ್ಲಿ ಮರೆಯಾಗುವಳು. ಆ ದಿನ ಅವಳು ಅಲ್ಲಿ ಸರ್ಪದೊಡನೆ ಸಂಪೂರ್ಣ ಲೈಂಗಿಕ ಸಂಪರ್ಕವನ್ನು ಹೊಂದಿ ಹಿಂದಿರುಗುವಳು. ಈ ಸಂಪರ್ಕದ ವಿಸ್ತೃತ ವರದಿಯನ್ನು ಕೂಡ ಅವರು ಗುಪ್ತವಾಗಿ ಬರೆದಿಟ್ಟುಕೊಂಡಿರುವರೆಂದು ಹೇಳಲಾಗುತ್ತದೆ.



## ಬೆಂಬಿಡದ ಕನ್ನಡಿ

ಪ್ರತಿಯೊಬ್ಬನಿಗೂ ಜೀವಮಾನವೆಲ್ಲ ಒಂದೊಂದು ಕನ್ನಡಿ ಸಂಗಾತಿಯಾಗಿರುತ್ತದೆ. ಆ ಕನ್ನಡಿ ಅವನ ನೆರಳಿನಂತೆ ಅವನದೇ; ನೆರಳಿನಂತೆ ಅದೂ ಅವನಿಗೆ ಬಿಡಲಾರದ ಸಂಗಾತಿ.

ನಮ್ಮೆಲ್ಲರ ಕನ್ನಡಿಗಳೂ ನಮ್ಮ ಪ್ರತಿಬಿಂಬಗಳನ್ನು ವಿಕೃತಗೊಳಿಸುವ ಡೊಂಕು ಕನ್ನಡಿಗಳೇ. ಕೆಲವು ಹೆಚ್ಚು ಡೊಂಕು ಕೆಲವು ಕಡಿಮೆ—ಇಷ್ಟೇ. ಕೆಲವು ನಮ್ಮ ಪ್ರತಿಬಿಂಬವನ್ನು ಹಿಗ್ಗಿಸುತ್ತವೆ, ಕೆಲವು ಕುಗ್ಗಿಸುತ್ತವೆ; ಕೆಲವು ವಿಕಾರ, ವಕ್ರ, ಹಾಸ್ಯಾಸ್ಪದ, ಭಯಾನಕ ಪ್ರತಿಬಿಂಬಗಳನ್ನು ತೋರಿಸುತ್ತವೆ.

ಆದರೆ ನಂನಮ್ಮ ಕನ್ನಡಿಯ ಗುಣಗಳೇನೇ ಇರಲಿ ಅದು ನಾವೆಣಿಸುವಷ್ಟು ಮುಖ್ಯವಲ್ಲ. ನಾವು ಪಡೆದ ಕನ್ನಡಿಯ ಮೇಲಿಂದ ನಮ್ಮ ಯೋಗ್ಯತೆಯ ನಿಷ್ಕರ್ಷೆಯಾಗುವುದಿಲ್ಲ—ಅದನ್ನು ನಾವು ಉಪಯೋಗಿಸುವ ರೀತಿಯಿಂದ.

—ಡಬ್ಲ್ಯೂ. ಎಚ್. ಆಡೆನ್

# ನಾನು ಪ್ರಸಿದ್ಧ ಲೇಖಕ ಹೇಗಾದೆ?

**ಇಂಗ್ಲಂಡಿನಲ್ಲಿ ಪುಸ್ತಕ ಬರೆದು ಪ್ರಕಟಿಸಿದ ಲೇಖಕರೊಬ್ಬರ ಕಟು-ಮಧುರ-ಹಾಸ್ಯಮಯ ಅನುಭವಗಳು**

ತನ್ನ ಮೊದಲನೆಯ ಪುಸ್ತಕವನ್ನು ಅಚ್ಚುಹಾಕಿಸಿ ಪ್ರಕಟಿಸುವದಾಗಿ ಪ್ರಕಾಶಕನಿಂದ ಪತ್ರ ಕೈಗೆ ಬಂದಾಗ ಆದ ಅನುಭವದಷ್ಟು ಸ್ಪಷ್ಟವಾಗಿ ಬೇರಾವ ಅನುಭವವೂ ಲೇಖಕನಾದವನ ಚಿತ್ತದಲ್ಲಿ ನಿಲ್ಲುವದಿಲ್ಲ.

ಲೇಖಕನ ಮನಸಿನಲ್ಲಿ ಕೃತಜ್ಞತಾಭಾವ ಉಕ್ಕೇರಿ ತನ್ನ ಹಿತದ ಅರಿವೂ ಅವನಿಗೆ ತಪ್ಪಿಹೋಗುವದರಿಂದ ಆತ ಪ್ರಕಾಶಕನ ಕರಾರು ಪತ್ರವನ್ನು ಜಾಗರೂಕತೆಯಿಂದ ಓದಿಕೊಳ್ಳದೆ ಅದಕ್ಕೆ ಅಂಕಿತ ಹಾಕಿಬಿಡುವನು. ಅದನ್ನು ಓದುತ್ತ ಕುಳಿತರೆ ಎಲ್ಲಿ ಪ್ರಕಾಶಕ ಮನಸ್ಸು ಬದಲಾಯಿಸಿಬಿಡುತ್ತಾನೊ ಎಂದು ಆತನಿಗಿರುವ ಅಂಜಿಕೆಯೂ ಈ ರೀತಿ ಕಣ್ಮುಚ್ಚಿ ಅಂಕಿತ ಹಾಕುವದಕ್ಕೆ ಕಾರಣವಾಗುತ್ತದೆ. ಮುಂದೆ ಆ ಪುಸ್ತಕವೇನಾದರೂ ಚನ್ನಾಗಿ ಮಾರಾಟವಾಗತೊಡಗಿದರೆ ಸಾಯುವತನಕವೂ ತನ್ನ ದುಡುಕಿಗಾಗಿ ಲೇಖಕ ಪಶ್ಚಾತ್ತಾಪಪಟ್ಟುಕೊಳ್ಳುತ್ತಿರುತ್ತಾನೆ. ಎಲ್ಲ ಪ್ರಕಾಶಕರ ಮೇಲೂ ಆತನಲ್ಲಿ ಕ್ರೋಧವುಂಟಾಗಿ ಅವರನ್ನು ದೂರತೊಡಗುತ್ತಾನೆ.

ಎಷ್ಟೋ ವಿದ್ಯಾವಂತರಂತೆ ನನ್ನಲ್ಲಿಯೂ ಪುಸ್ತಕ ಬರೆಯುವ ಚಪಲವಿತ್ತು. ಅಂಥವರಲ್ಲಿ ಅನೇಕರಂತೆ ನಾನೂ ಬಹುಕಾಲ ನನ್ನ ಭಾವೀ ಪುಸ್ತಕಗಳಿಗೆ ಮುದ್ದುಮುದ್ದಾದ ಹೆಸರುಗಳನ್ನು ಕಲ್ಪಿಸುತ್ತ, ಎಲ್ಲ ಅಂಗಡಿಗಳಲ್ಲಿ ನನ್ನ ಪುಸ್ತಕಗಳು ಕಂಗೊಳಿಸುವ ಕನಸುಗಳನ್ನು ಕಾಣುವದಕ್ಕಿಂತ ಹೆಚ್ಚಿಗೆ ಏನೂ ಮಾಡಲಿಲ್ಲ. ಅನಂತರ ನಾನು ಸಣ್ಣ ಕಥೆಗಳನ್ನು ಬರೆಯತೊಡಗಿದೆ ; ಅವನ್ನು ವೃತ್ತಪತ್ರಿಕೆ ಮತ್ತು ಮಾಸಪತ್ರಿಕೆಗಳಿಗೆ ಕಳಿಸುತ್ತ ಹೋದೆ. ಮೂರು ವರ್ಷಗಳವರೆಗೆ " ಆಭಾರಪೂರ್ವಕವಾಗಿ ತಿರುಗಿಕಳಿಸಿದೆ" ಎಂಬ ಪತ್ರಗಳ ಹೊರತು ಬೇರೇನೂ ನನಗೆ ದೊರೆಯಲಿಲ್ಲ.

ನಿರಾಶೆಯ ಭರದಲ್ಲಿ ನಾನು ನನ್ನ ಎರಡು ಕಥೆಗಳನ್ನು "ಏಶಿಯದ ತಜ್ಞೆ" ಎಂದು ಹೆಸರಾಂತ ಅಮೇರಿಕದ ಮಿಸ್ ಪರ್ಲ್ ಬಕ್‌ರಿಗೆ ಕಳಿಸಿಕೊಟ್ಟೆ. "ಇವುಗಳನ್ನು ಪ್ರಕಟಿಸಬಹುದಾದಂಥ ಯಾವ ಪತ್ರಿಕೆಯನ್ನೂ ನಾನು ಹೊರಡಿಸುತ್ತಿಲ್ಲ" ಎಂದಾಕೆ ನನಗೆ ಉತ್ತರ ಬರೆದರು. ಪತ್ರದ ಕೊನೆಯಲ್ಲಿ ಅವರು ತಮಗೆ ಈ ಕಥೆಗಳು ತುಂಬ ಮೆಚ್ಚಿಗೆಯಾದವು ಎಂದು ಒಂದು ವಾಕ್ಯವನ್ನು ಸೇರಿಸಿದ್ದರು. ಬಹುಶಃ ಇದು ನಿಜವಾದ ಅಭಿಪ್ರಾಯವೆನ್ನುವದಕ್ಕಿಂತಲೂ ಕೇವಲ ಉಪಚಾರದ ಮಾತೆಂದು ತೋರುತ್ತದೆ. ಆದರೆ ಆ ಒಂದು ವಾಕ್ಯವೇ ನನ್ನ ಲೇಖಕ ಜೀವನಕ್ಕೆ ಮಂಗಲಾಚರಣೆಯನ್ನು ಮಾಡಿತು.

ಪರ್ಲ್ ಬಕ್ಕರ ಅಭಿಮತವನ್ನು ಉಲ್ಲೇಖಿಸಿ ನಾನು ಆ ಎರಡು ಕಥೆಗಳನ್ನು ಅಮೇರಿಕದ “ಹಾರ್ಪರ್ಸ್” ಪತ್ರಿಕೆಗೆ ಕಳಿಸಿದೆ. ಮೊದಲು ನನ್ನ ಕಥೆಗಳನ್ನು ನಿರಾಕರಿಸಿದ್ದ ಈ ಪತ್ರಿಕೆ ಈ ಸಲ ಅವುಗಳನ್ನು ಸ್ವೀಕರಿಸಿ ಸೋಮರಸೆಟ್ ಮಾಮರ ಕಥೆ ಪ್ರಕಟವಾದ ಸಂಚಿಕೆಯಲ್ಲಿ ಒಂದನ್ನು ಪ್ರಕಟಿಸಿತು. ಅಲ್ಲಿಂದ ನಾನು ಪರ್ಲ್ ಬಕ್ಕರ ವಾಕ್ಯವನ್ನೂ “ಹಾರ್ಪರ್ಸ್” ಪತ್ರಿಕೆಯ ಈ ಸಂಚಿಕೆಯನ್ನೂ ಹಿಂದುಮುಂದೆ ನೋಡದೆ ಧಾರಾಳವಾಗಿ ಉಪಯೋಗಿಸಿಕೊಂಡೆ. ನನ್ನ ಎಲ್ಲ ಕಥೆಗಳೂ ಮಾರಾಟವಾದವು.

ಈ ಅನುಭವದಿಂದ ಹೊರಡುವ ತಥ್ಯವನ್ನೇನೂ ನೈತಿಕವೆನ್ನಲು ಬಾರದು. ಆದರೆ ಪ್ರಕಾಶಕರ ಜಗತ್ತಿಗಿಂತಲೂ ಲೇಖಕರ ಜಗತ್ತೇನೂ ಹೆಚ್ಚು ನೀತಿಯುತವಾಗಿಲ್ಲ. ಅವೆರಡೂ ತಂತ್ರಪ್ರಪಂಚಗಳು. ಅಲ್ಲಿ ಯಶಸ್ವಿಗಳಾಗಬೇಕೆಂದಿದ್ದರೆ ನೀವೂ ತಂತ್ರಗಾರರಾಗಬೇಕಾಗುವದು. ಅಲ್ಲಿನ ಸೂತ್ರಗಳನ್ನು ಅರಿಯದ್ದಕ್ಕಾಗಿ ಅಥವಾ ಸೂತ್ರಚಾಲನೆ ಮಾಡುವ ಧೈರ್ಯವಿಲ್ಲದ್ದಕ್ಕಾಗಿ ಇಲ್ಲವೆ ಯಶಸ್ಸಿಗಾಗಿಯೇ ಆದರೂ ನಾನು ಹೂಡಿದಂಥ ತಂತ್ರವನ್ನು ಹೂಡಲು ಸ್ವಾಭಿಮಾನ ಒಪ್ಪದ್ದಕ್ಕಾಗಿ ಬೆಳಕಿಗೆ ಬಾರದೆ ಹೋಗಿರುವ ಅನೇಕಾನೇಕ ಪ್ರತಿಭಾವಂತ ಲೇಖಕರು ಇರಲಿಕ್ಕೇಬೇಕು.

ಪತ್ರಿಕೆಗಳು ಕಥೆಗಳನ್ನು ಸ್ವೀಕರಿಸುವ ಮಾತೇ ಬೇರೆ, ಸಣ್ಣ ಕಥೆಗಳ ಸಂಗ್ರಹವನ್ನು ಪ್ರಕಟಿಸಲು ಪ್ರಕಾಶಕರು ಒಪ್ಪುವ ವಿಚಾರವೇ ಬೇರೆ. ಇಂಗ್ಲೀಶ್ ಭಾಷಾ ಜಗತ್ತಿನಲ್ಲಿ ಸಣ್ಣ ಕಥೆಗಳ ಪುಸ್ತಕಕ್ಕೆ ಪೇಟೆಯಿಲ್ಲ. ಲೇಖಕನೇನಾದರೂ ಮೊದಲು ಒಳ್ಳೆಯ ಕಾದಂಬರಿಯನ್ನು ಬರೆದಿದ್ದರೆ ಮತ್ತು ಕಥಾಸಂಗ್ರಹಕ್ಕೆ ಅದು ಕಾದಂಬರಿಯಂತೆ ಭಾಸವಾಗುವಂಥ ಹೆಸರನ್ನು ಕೊಡುವಂತಿದ್ದರೆ ಮಾತ್ರ ಪ್ರಕಾಶಕನು ಸಣ್ಣ ಕಥೆಗಳ ಸಂಗ್ರಹದ ಪ್ರಕಟನೆಗೆ ಒಪ್ಪುತ್ತಾನೆ.

ನಾನೇನೂ ಕಾದಂಬರಿಯನ್ನು ಬರೆದಿರಲಿಲ್ಲ. ಆದ್ದರಿಂದ ನನ್ನ ಮೊದಲನೆಯ ಕಥಾಸಂಗ್ರಹವು ಮುಖಪತ್ರದ ಮೇಲೆ “ದಿ ಮಾರ್ಕ್ ಆಫ್ ವಿಷ್ಣು” ಎಂಬ ಹೆಸರನ್ನೂ ಒಳಗೆ ಮೂರನೆ ಪುಟದಲ್ಲಿ “ಮತ್ತು ಇತರ ಕಥೆಗಳು” ಎಂದು ಸಣ್ಣಕ್ಷರದ ವಾಕ್ಯವನ್ನೂ ಹೊತ್ತು ಪ್ರಕಾಶಿತವಾಯಿತು. ಅಲ್ಲದೆ ಅದು ಓರ್ವ ಅಪ್ರಸಿದ್ಧ ಪ್ರಕಾಶಕನಿಂದ, ಅದೂ ಯುರೋಪಿನಲ್ಲಿ ಯಾವ ಸ್ವಾಭಿಮಾನಿ ಲೇಖಕನೂ ಒಪ್ಪಲಾರದಂಥ ಕರಾರುಗಳ ಮೇಲೆ ಪ್ರಕಟಿಸಲ್ಪಟ್ಟಿತು. ತಮ್ಮ ಹೆಸರು ಅಚ್ಚಾದುದನ್ನು ಕಾಣಬೇಕೆಂಬ ಲೇಖಕರ ಹಂಬಲದ ಲಾಭವನ್ನು ಪಡೆಯುವ ಪ್ರಕಾಶನ ಸಂಸ್ಥೆಗಳು (ಕೆಲ ಪ್ರಸಿದ್ಧ ಸಂಸ್ಥೆಗಳೂ ಹೀಗಿವೆ) ಜಗತ್ತಿನಲ್ಲಿವೆ. ಲೇಖಕರೇ ತಮ್ಮ ಪುಸ್ತಕಪ್ರಕಾಶನದ ವೆಚ್ಚವನ್ನು ಹೊರುವಂತೆ ಇವು ಮಾಡುತ್ತವೆ. ಭಾರತದಲ್ಲಿಂದು ಅಧಿಕ ಸಂಖ್ಯೆಯಲ್ಲಿ ಮಾರಾಟವಾಗುತ್ತಿರುವ ಓರ್ವ ಪ್ರಸಿದ್ಧ ಧುರೀಣರ ಪುಸ್ತಕವೊಂದು ಈ ಬಗೆಯ ಕರಾರುಗಳ ಮೇಲೆಯೇ ಪ್ರಕಟವಾದ ವಿಚಾರ ನನಗೆ ಗೊತ್ತಿದೆ. ನನ್ನ ಕಥಾ ಸಂಗ್ರಹ “ದಿ ಮಾರ್ಕ್ ಆಫ್ ವಿಷ್ಣು”ವಿನಿಂದ ಪ್ರಕಾಶಕರಿಗೆ ಮಾತ್ರ ಲಾಭವಾಯಿತು. ನನಗೆ ಅದರಿಂದ ಪ್ರತಿಫಲ ಬರುವ ಮಾತೇ ಇರಲಿಲ್ಲ. ಸಾಹಿತ್ಯಜಗತ್ತಿಗೆ ಈ ಪುಸ್ತಕವು ನನ್ನ ಪರಿಚಯ ಮಾಡಿಸಿಕೊಟ್ಟಿತು ಮತ್ತು ಬಂದ ವಿಮರ್ಶೆಗಳಿಂದ ನನ್ನ ಯೋಗ್ಯತೆಯ ಬಗ್ಗೆ ನನ್ನಲ್ಲಿ ಒಂದು ಅವಾಸ್ತವ ಆತ್ಮವಿಶ್ವಾಸ ಹುಟ್ಟಿತು. ಇದನ್ನು ಬಿಟ್ಟರೆ ನನಗೆ ಈ ಕಥಾಸಂಗ್ರಹ ಪ್ರಕಾಶನದಿಂದ ಏನೂ ಪ್ರಾಪ್ತಿಯಾಗಲಿಲ್ಲ.

ಅಲ್ಲಿಂದ ಮುಂದೆ ಗಾಡಿ ಸರಾಗವಾಗಿ ಸಾಗಿತು. “ದಿ ಶೀಖ್ಸ್” ಎಂಬ ನನ್ನ ಚಿಕ್ಕ ಇತಿಹಾಸ ಪುಸ್ತಕವನ್ನು ಅಲೆನ್ ಆ್ಯಂಡ ಅನವಿನ್ ಕಂಪನಿ ಕೊಂಡಿತು. “ಟ್ರೇನ್ ಟು ಪಾಕಿಸ್ತಾನ್” ಎಂಬ ಕಾದಂಬರಿಗೆ ಒಂದು ಸಾವಿರ ಡಾಲರ ಬಹುಮಾನ ಬಂದದ್ದು ಮಾತ್ರವಲ್ಲದೆ ಅದು ಅನೇಕ ದೇಶಗಳಲ್ಲಿ ಅನೇಕ ಭಾಷೆಗಳಲ್ಲಿ ಪ್ರಕಟಿಸಲ್ಪಟ್ಟಿತು.

ಯಶವೇ ಯಶದ ಒಳಗುಟ್ಟು. ಆದರೆ ಯಶ ಬಂದಾಕ್ಷಣ “ಗುಣ” ಇದೆಯೆಂದಲ್ಲ. ನನ್ನ ಇತಿಹಾಸ ಮತ್ತು ಕಾದಂಬರಿಗಳೆರಡೂ ಮಧ್ಯಮ

ತರಗತಿಯ ಪುಸ್ತಕಗಳಾಗಿದ್ದರೂ ನನಗೆ ಹಣ ಮತ್ತು ಕೀರ್ತಿ ಎರಡೂ ಬಂದವು. ನನ್ನ ಮಿತ್ರ ಗೋವಿಂದ ದೇಸಾನಿಯವರು ಖಂಡಿತವಾಗಿಯೂ ನನಗಿಂತ ಉತ್ತಮ ಲೇಖಕರು. ಅವರ "ಆಲ್ ಅಬೌಟ್ ಮಿ. ಹ್ಯಾಟ್ಟರ್" ಎಂಬ ಕಾದಂಬರಿಯನ್ನು ಈಲಿಯಟ್ ಮತ್ತು ಬ್ಲಂಡೆನ್ ರಂಥ ಕವಿಗಳೂ ಹೊಗಳಿದ್ದಾರೆ. ಆ ಕಾದಂಬರಿ ದೇಸಾನಿಯವರಿಗೆ ತುಸು ಕೀರ್ತಿಯನ್ನೇನೊ ಕೊಟ್ಟಿತು ನಿಜ. ಆದರೆ ಆ ಪುಸ್ತಕವು ಈ ಪ್ರತಿಭಾವಂತ ಲೇಖಕನಿಗೂ ಅದರ ಇಂಗ್ಲಿಷ್ ಪ್ರಕಾಶಕನಿಗೂ ಹಾನಿಯನ್ನೇ ತಂದಿತು. ದೇಸಾನಿಯವರು ತಮ್ಮ ದೇಶದಲ್ಲಿ ಅಪ್ರಸಿದ್ಧರಾಗಿಯೆ ಉಳಿದಿದ್ದಾರೆ; ಪಶ್ಚಿಮಘಟ್ಟ ಪ್ರದೇಶದಲ್ಲಿ ಎಲ್ಲಿಯೊ ಒಂದೆಡೆ ಹಾಗೂ ಹೀಗೂ ಕಾಲಯಾಪನೆ ಮಾಡುತ್ತಿದ್ದಾರೆ.

ಯುರೋಪಿಗಿಂತಲೂ ಭಾರತದಲ್ಲಿ ಪ್ರಕಾಶನ ಕಾರ್ಯ ಹೆಚ್ಚು ತಾಪದಾಯಕವಾದದ್ದು. ಯುರೋಪ ಅಥವಾ ಅಮೇರಿಕೆಯಲ್ಲಿ ಕೇವಲ ಕೆಲವೇ ಪ್ರಕಾಶನ ಸಂಸ್ಥೆಗಳು ಪುಸ್ತಕಗಳ ಪ್ರಕಾಶನಕ್ಕೆ ಲೇಖಕರೇ ಹಣ ಒದಗಿಸಬೇಕೆಂದು ಆಗ್ರಹ ಮಾಡುತ್ತವೆ; ಅಂತೆಯೇ ಮುಂಗಡವಾಗಿಯೇ ಧಾರಾಳವಾಗಿ ಪ್ರತಿಫಲವನ್ನು ಕೊಡುವ ಅನೇಕ ಸಂಸ್ಥೆಗಳೂ ಇವೆ. ಆದರೆ ಭಾರತದ ಪ್ರಕಾಶಕರಲ್ಲಿ ಹೆಚ್ಚಿನವರು ಲೇಖಕರೇ ಹಣ ಕೊಡಬೇಕೆನ್ನುವದು ಮಾತ್ರವಲ್ಲದೆ, ಬಡ ಲೇಖಕರನ್ನು ಸಾಯಬಡಿಯುವ ವ್ಯವಹಾರ ನೀತಿಯನ್ನು ಇಟ್ಟುಕೊಂಡಿದ್ದಾರೆ. ನಾಲ್ಕು ವರ್ಷಗಳ ಹಿಂದೆ ನಾನು ಪಂಜಾಬಿ ಭಾಷೆಯಲ್ಲಿ ನನ್ನ ಖರ್ಚಿನಿಂದಲೇ ನನ್ನ ಪುಸ್ತಕವೊಂದನ್ನು ಪ್ರಕಟಿಸಿದೆ. ಈವತ್ತಿಗೂ ನಾನೆಷ್ಟೇ ಸಲ ವಿನಂತಿ ಮಾಡಿಕೊಂಡರೂ ಬೆದರಿಕೆ ಹಾಕಿದರೂ ನನಗೆ ಅದರ ಮಾರಾಟದ ಲೆಕ್ಕಪತ್ರ ಸಿಕ್ಕಿಲ್ಲ. ಹಣವೂ ಸಿಕ್ಕಿಲ್ಲ. ಪುಸ್ತಕಗಳ ಪ್ರತಿಗಳು ಕೂಡ ಸಿಕ್ಕಿಲ್ಲ. ಭಾರತದ ಭಾಷೆಗಳಲ್ಲಿ ಬರೆಯುವ ನನ್ನ ಎಷ್ಟೋ ಲೇಖಕ ಮಿತ್ರರ ಅನುಭವವೂ ಇದೇ ಬಗೆಯದಾಗಿದೆ. ವಿದೇಶಗಳಲ್ಲಿ ಪ್ರಕಾಶಕರನ್ನು ಪಡೆಯುವದು ಸಾಧ್ಯವಿದ್ದವರು ನಮ್ಮ ದೇಶದವರ ಹವ್ಯಾಸವನ್ನು ಬಿಟ್ಟುಕೊಟ್ಟು ವಿದೇಶಗಳಲ್ಲಿಯೇ ಪುಸ್ತಕವನ್ನು ಪ್ರಕಟಿಸುವದರ ಗುಟ್ಟು ಇದೇ. ಶ್ರೀಗಳಾದ ನೆಹರೂ, ರಾಧಾಕೃಷ್ಣನ್, ಹುಮಾಯೂನ ಕಬೀರ, ಮುಲ್ಕರಾಜಆನಂದ, ಆರ್. ಕೆ. ನಾರಾಯಣ ಮತ್ತು ಇನ್ನಿತರ ಲೇಖಕರೆಲ್ಲ ಈ ಯಾದಿಗೆ ಸೇರಿದವರಾಗಿದ್ದಾರೆ.

ಇದಕ್ಕೂ ದುಃಖದ ಮಾತೆಂದರೆ ಇವರ ಪುಸ್ತಕಗಳಿಗೆ ಪೇಟಿ ಹೆಚ್ಚಾಗಿ ದೊರಕುವದು ಅವು ಪ್ರಕಟವಾದ ದೇಶಗಳಲ್ಲಿ ಆಗಿರದೆ ಭಾರತದಲ್ಲೇ ಆಗಿರುವದು. ವಿದೇಶೀ ಪ್ರಕಾಶಕನು ಹಣ ಗಳಿಸುತ್ತಾನೆ ಮತ್ತು ಭಾರತೀಯ ಗ್ರಾಹಕನು ಭಾರತದಲ್ಲಿಯೆ ಈ ಪುಸ್ತಕ ಪ್ರಕಟವಾಗಿದ್ದರೆ ಕೊಡಬೇಕಾಗುತ್ತಿದ್ದುದಕ್ಕಿಂತ ಹೆಚ್ಚು ಬೆಲೆಯನ್ನು ಕೊಟ್ಟುಕೊಳ್ಳಬೇಕಾಗುತ್ತದೆ.



ಮುದಿ ಮೂರ್ಖನಂಥ ಮೂರ್ಖ ಬೇರೊಬ್ಬನಿರಲಾರನೆಂಬುದು ನಿಜ. ಆದರೆ ಅದಕ್ಕೆ ಕಾರಣ ಅವನು ಜನ್ಮಸಿದ್ಧ ಮೂರ್ಖನಾಗಿರುವುದೇ ಹೊರತು ಬೇರಲ್ಲ. ೭೦ ವರ್ಷದ ಸಂತತ ಅಭ್ಯಾಸದಿಂದ ಅವನು ಮುಪ್ಪಿನಲ್ಲಿ ಮೂರ್ಖ ಶಿಖಾಮಣಿ ಪಟ್ಟಕ್ಕೇರುತ್ತಾನೆ—ಅಷ್ಟೇ. —ಎಂ. ಕೃಷ್ಣನ್, "ಸ್ವರಾಜ್ಯ"ದಲ್ಲಿ




ಇಂದು ಶ್ರೀರಾಮನವಮಿ...ಎಲ್ಲೆಲ್ಲೂ ಸಂಗೀತ, ಭಜನೆ ಮತ್ತು ಹರಿಕಥೆ. ಪ್ರತಿಯೊಬ್ಬರ ಮನೆಯಲ್ಲೂ ಹಬ್ಬದ ಆನಂದಕ್ಕೆ ಪಾರವೇ ಇಲ್ಲ! ಆದರೆ, ಒಳ್ಳೇ ಹಬ್ಬದ ದಿನವೇ ದೊಡ್ಡ ಜಗಳ ಹತ್ತಿಕೊಂಡಿತ್ತು — ರಾಮರಾಯರ ಮನೆಯಲ್ಲಿ!

ರಾಮರಾಯರು ಹಳೆಯ ಸಂಪ್ರದಾಯದವರು...ಆಚಾರವಂತ ಮನೆತನದವರು. ಶ್ಯಾಮಣ್ಣ ದೊಡ್ಡ ಮಗ...ಸಾಕಷ್ಟು ಓದಿ ಪ್ರಪಂಚಜ್ಞಾನವಿದ್ದವನು. ಶ್ಯಾಮಣ್ಣ ಮನೆ ಮುಂದೆ ಬಾಗಿಲಿಗೆ ತೋರಣ ಕಟ್ಟುತ್ತಿದ್ದ. ರಾಮರಾಯರು, "ಮನೆಗೆ ಏನೇನು ಸಾಮಾನುಗಳು ಬೇಕೋ ಅಮ್ಮನ ಹತ್ರ ಕೇಳ್ಕೊಂಡು ಪೇಟೆಯಿಂದ ತಕ್ಕೊಂಡು ಬಾಪ್ಪ" ಅಂತ ಹೇಳಿದರು. — "ಈ ತೋರಣ ಕಟ್ಟಿದ್ದು ಮುಗಿದ ಕೂಡಲೆ [illegible] ಮನೆಗೆ ಬರಬೇಕಾದೋರ್ನೆಲ್ಲಾ ಕರೆಯೋಕೆ ಹೋಗಿ ಬರಬೇಕು...ಮಾಧೂ ಒಳಗೆ ಚಿತ್ರ ಬರೀತಾ ಕೂತಿದ್ದಾನೆ...ಅವನ್ನ ಕಳಿಸಿ ಬಿಡಪ್ಪಾ ಇವತ್ತು" ಅಂದ ಶ್ಯಾಮಣ್ಣ.

ಮಾಧೂ ರಾಮರಾಯರ ಎರಡನೆ ಮಗ. ಅವನಿಗೆ ಯಾವುದರಲ್ಲೂ ಹೆಚ್ಚು ಆಸಕ್ತಿಯಿಲ್ಲ. ಚಿತ್ರ ಬರೆಯುವುದೆಂದರೆ ಪಂಚಪ್ರಾಣ. ಶ್ಯಾಮಣ್ಣ ಮಾಧೂನ ಕೂಗಿ — "ನನಗೆ ಬಹಳ ಕೆಲಸವಿದೆ...ನನಗೋಸ್ಕರವಾದ್ರೂ ಪೇಟೆಗೆ ಹೋಗಿ ಸಾಮಾನು ತಕ್ಕೊಂಡು ಬಾ" ಅಂತ ಕೇಳಿದ. ಮಾಧೂ "ಇವತ್ತು ಸಾಯಂಕಾಲದಿಂದಲೇ ಸಂಗೀತ ಕಚೇರಿ ಪ್ರಾರಂಭ. ತ್ಯಾಗರಾಜರ ಚಿತ್ರ ಸಾಯಂಕಾಲದೊಳಗೆ ಬರೆದು ಮುಗಿಸಿ ಕಟ್ಟುಹಾಕಿಸಿ ಕೊಡದಿದ್ರೆ ನನ್ನ ಮಾನ ಉಳಿಯೋದಿಲ್ಲ. ಬೇಕಾದ್ರೆ ನೀನೇ ಹೋಗು" ಅಂದುಬಿಟ್ಟ.

ಒಂದ್ಕಡೆ ತಾಯಿ ಪಾರ್ವತಮ್ಮ — "ಹೆಸರುಬೇಳೆ, ಕಡಲೇಬೇಳೆ ಎಲ್ಲಾ ನೆಂದು ಕೂತಿವೆ. ಎದ್ದು ಸ್ನಾನ ಮಾಡಿದೋಳು ನಾನೂ ಸುಮ್ನೇನೇ ಕೂತಿದ್ದೀನಿ. ಪೇಟೆಗೆ ಹೋಗಿ [illegible] ಸಾಮಾನು ತರೋಕಾಗೋಲ್ವೆ ಮನೇಲಿ ಇಷ್ಟು ಜನ ಇದ್ಕೊಂಡು" ಅಂತ ಕೂಗಾಡಿ, ಶ್ಯಾಮಣ್ಣನ್ನೇ "ಪೇಟೇಗೆ ಹೋಗಿ ಬಾಪ್ಪಾ" ಅಂದರು. ಶ್ಯಾಮಣ್ಣ ಪೇಟೇಗೆ ಹೊರಡೋಕೆ ಸಿದ್ಧನಾದ. ಅಷ್ಟರಲ್ಲೇ "ರಾಮಭಕ್ತ ಮಂಡಳಿ" ಮುನಿರಾಜು ಮಾಧೂನ ಹುಡುಕಿಕೊಂಡು ಬಂದ ಒಂದು ಫೋಟೋನೂ ಕೈಲಿ ಹಿಡಿದುಕೊಂಡು. — "ಅಲ್ಲೋ ಮಾಧೂ! ನಿನ್ನ ನೆಚ್ಚಿಕೊಂಡು ಕೆಲಸ ಮಾಡೋದೂ ತಲೆ ಚಚ್ಚಿಕೊಳ್ಳೋದೂ ಎರಡೂ ಒಂದೇ! ಇರಬೇಕು ನಿನ್ನಂಥ ಭಕ್ತಶಿರೋಮಣಿಗಳು! ನೀನೇನು ಬರೀತಿ ನಿನ್ನ ತಲೆ! ಇಲ್ನೋಡು ಹ್ಯಾಗಿದೆ" ಅಂತ, ತಂದಿದ್ದ ಫೋಟೋ ತೋರಿಸಿದ! ಮಾಧೂ ಮುಖಕ್ಕೆ ಮಸಿ ಬಳಿದ ಹಾಗಾಯ್ತು. ಮುನಿರಾಜು ಹೋದ ಮೇಲೆ ಮಾಧೂ ಅಮ್ಮನ್ನ "ಏನೇನು ಸಾಮಾನು ಬೇಕು ಹೇಳಮ್ಮಾ" ಅಂತ ಕೇಳಿ ಪೇಟೇಗೆ ಹೊರಡೋಕೆ ಸಿದ್ಧನಾದ.

ಮಾಧೂ ಮಾರ್ಕೆಟ್ಟಿಗೆ ಹೋಗಿ ಸೌತೆಕಾಯಿ, ತೆಂಗಿನಕಾಯಿ, ಬೆಲ್ಲ, ಲಿಂಬೆಹಣ್ಣು ಮೊದಲಾದುವುಗಳನ್ನೆಲ್ಲಾ ಕೊಂಡು ಕೊಂಡು ಮನೆಗೆ ಹಿಂದಿರುಗಿದ. ಶ್ಯಾಮಣ್ಣ — "ಏನು ದುಡ್ಡಿಗೆಲ್ಲಾ ಬರೀ ಮೈಸೂರ್‌ಪಾಕ್, ಜಿಲೇಬಿ ಕೊಂಡು ಕೊಂಡು ಬಂದ್ಯೋ ಅಥವಾ ಹೇಳಿದ ತರ್ಕಾರಿ ಪರ್ಕಾರಿ ಎಲ್ಲಾ ಸರಿಯಾಗಿ ತಂದಿದ್ದೀಯೋ!" ಅಂತ ಹಾಸ್ಯ ಮಾಡಿದ್ದ.

ಮನೆಗೆ ಬಂದು ಹೋಗುವ ಬಂಧು ಮಿತ್ರರಿಗೆಲ್ಲಾ ಕೋಸುಂಬರಿ, ಪಾನಕ ಎಲೆ-ಅಡಿಕೆ, ದಕ್ಷಿಣೆ ಸಲ್ಲಿಸಿದ್ದೆಲ್ಲಾ ಮುಗಿಯಿತು.

ಆಗಲೇ ಹೊತ್ತೇರಿ ಎರಡು ಗಂಟೆ ಹೊಡೆಯುವುದರಲ್ಲಿತ್ತು. ಪಾರ್ವತಮ್ಮ ಹಬ್ಬಕ್ಕಾಗಿ ಶೀರಾ ಅಕ್ಕರೆಯಿಂದ ಬೋಂಡ, ಚಿತ್ರಾನ್ನ, ಹೋಳಿಗೆ ಎಲ್ಲವನ್ನೂ ತಯಾರಿಸಿದ್ದರು. "ಆಗಲೇ ಬಹಳ ಹೊತ್ತಾಯ್ತು ... ಊಟಕ್ಕೇಳಿ" ಅಂತ ಎಲ್ಲರನ್ನೂ ಕರೆದರು...ಎಲ್ಲರೂ ಬಂದು ಕುಳಿತದ್ದೂ ಆಯ್ತು.—ಪಾರ್ವತಮ್ಮ—"ಇದೇನು ತಕ್ಕೊಂಡು ಬಂದನೋ ಏನೋ ಈ ತುಪ್ಪ ಯಾಕೋ ಯಾವತ್ತೂ ಇದ್ದ ಹಾಗಿಲ್ಲ" ಅಂತ ಗೊಣಗಿದರು. "ಎಲ್ಲಿಂದ ತಕ್ಕೊಂಡು ಬಂದ್ಯೋ" ಅಂತ ರಾಮರಾಯರು ಕೇಳಿದ್ದಕ್ಕೆ... ಇದ್ದದ್ದನ್ನೆಲ್ಲಾ ಬೇರೆ ಪಾತ್ರೇಲಿ ಹಾಕಿ ಖಾಲಿ ಮಾಡಿದ್ದ ಡಾಲ್ಡಾ ವನಸ್ಪತಿ ಡಬ್ಬಾನ ತಂದು ತೋರಿಸಿದ ಮಾಧೂ. ರಾಮರಾಯರಿಗೆ ಡಬ್ಬವನ್ನು ಕಂಡ ಕೂಡಲೇ ಕೋಪ ಕೆಂಡವಾಯಿತು. "ಇದೇನು? ಕುರಿಕೋಣ ತಿನ್ನೋರ ಮನೆ ಕೆಟ್ಟುಹೋಯ್ತೇನು? ಯಾವ್ಯಾವ ಪ್ರಾಣಿಗಳ ಕೊಬ್ಬೆಲ್ಲಾ ಸೇರಿದ್ಯೋ ಇದ್ರಲ್ಲಿ... ನಾನೇನೂ ಇವತ್ತು ಊಟಮಾಡೋಲ್ಲ. ನಿನ್ನಂಥ ಮೂರ್ಖ ಹುಟ್ಟಿದ್ದಕ್ಕೆ ನನ್ನ ಜನ್ಮ ಸಾರ್ಥಕವಾಯ್ತು" ಅಂತ ಕೂಗಾಡೋಕೆ ಪ್ರಾರಂಭಿಸಿದರು.

ಶಿವಪೂಜೇಲಿ ಕರಡಿ ಬಿಟ್ಟಹಾಗೆ, ಪಕ್ಕದಲ್ಲಿ ಕುಳಿತಿದ್ದ ಶ್ಯಾಮಣ್ಣನ ಸ್ನೇಹಿತ ಶಂಕರ ಸುಮ್ನೆ ಇರ್ದೆ—"ಇದೇನು ಹುಚ್ಚುಗಿಚ್ಚು ಹಿಡೀತೇನು ನಿಮಗೆ? ದೇವರು ಕೊಟ್ಟಿದ್ದನ್ನು ತಿಂದ್ಕೊಂಡು ಹಾಯಾಗಿರದೆ, ಇದನ್ನು ತಿಂದು ಹೊಟ್ಟೆ ಕೆಡಿಸಿಕೊಂಡು ನರಳಬೇಕೇನು? ಇದನ್ನು ತಿಂದು ಅಜೀರ್ಣ ಆಗ್ಬಿಟ್ರೆ ನನ್ನ ಮೂಗು ಕೊಯ್ಸಿಕೋತೀನಿ ಬೇಕಾದ್ರೆ" ಅಂತ ಶ್ರುತಿಗೂಡಿಸಿದ. ಅದನ್ನು ಕೇಳಿದ ಮೇಲಂತೂ ರಾಮರಾಯರಿಗೆ ತಡೆಯೋಕಾಗದೆ "ನೀನಾದ್ರೂ ಹೇಳು ಈ ಮೂರ್ಖನಿಗೆ... ತುಪ್ಪ ತಕ್ಕೊಂಡು ಬಾರೊ ಅಂದದ್ದಕ್ಕೆ ಸುಡುಗಾಡು ಏನೋ ತಂದಿದ್ದಾನೆ" ಅಂತ ರೇಗಿದರು.

ಪಾರ್ವತಮ್ಮ—"ಅಡಿಗೆ ಮಾಡೋಕೆ ಮುಂಚೇನೆ ಹೇಳದೆ ಇದುವರೆಗೆ ಸುಮ್ಮನಿದ್ದದ್ದು ನನ್ನ ತಪ್ಪು" ಅಂದ್ರು. ಅದಕ್ಕೆ ಶ್ಯಾಮಣ್ಣ—"ತಪ್ಪೂ ಆಗ್ಲಿಲ್ಲ ಏನೂ ಆಗ್ಲಿಲ್ಲಮ್ಮಾ...ಎಲ್ಲಾ ಸರಿಯಾಗಿದೆ... ಈ ಶಂಕರ ಸುಮ್ಮನ್ನೆ ಏನೇನೋ ತಲೇಲಿಟ್ಕೊಂಡು ಬೊಗಳ್ತಿದ್ದಾನೆ...ಹೊಟ್ಟೇನೂ ಕೆಡೋದಿಲ್ಲ ಗಿಟ್ಟೇನೂ ಕೆಡೋದಿಲ್ಲ! ಈ ಮಾಧೂ ಹಾಗೆ ಬರೀ ಮೈಸೂರ್ ಪಾಕ್, ಜಿಲೇಬಿ ಮೊದಲಿಂದ ಕಡೇವರೆಗೂ ತಿಂದ್ರೆ ಅಜೀರ್ಣ ಆಗ್ದೆ ಇನ್ನೇನಾಗತ್ತೆ?...ಇಂಥಾ ಪದಾರ್ಥಗಳನ್ನ ಸಿಕ್ಕಾಪಟ್ಟೆ ತಯಾರಿಸಿ ಮಾರಿದ್ರೆ ಸರ್ಕಾರದೋರು ಕಣ್ಮುಚ್ಚಿದೇನೂ ಇರೋದಿಲ್ಲ... ವಿಶೇಷ ತಜ್ಞರಾದ ವಿಜ್ಞಾನಿಗಳು ಮತ್ತು ವೈದ್ಯರು ಮೂರು ಸಂಶೋಧನಾ ಕೇಂದ್ರಗಳಲ್ಲಿ ಮೂರು ವರ್ಷಗಳ ಕಾಲ ಸಂಶೋಧನೆ ನಡೆಸಿದರು—ವನಸ್ಪತಿಗಳ ಮೇಲೆ...ಪ್ರಾಣಿಗಳ ಕೊಬ್ಬು ಮೊದಲಾದುವೆಲ್ಲಾ ಇರೋದಿಲ್ಲಪ್ಪ—ಅದೆಲ್ಲಾ ಮೂಢ ನಂಬಿಕೆ" ಅಂದ.

ಅದೇ ಹೊತ್ತಿಗೆ ಸರಿಯಾಗಿ ಡಾಕ್ಟರು ನಂಜಪ್ಪ "ಊಟ ಆಯ್ತೇ ರಾಮರಾಯ್ರೇ"ಅಂದು ಕೊಂಡು ಬಂದ್ರು. ರಾಮರಾಯರು—"ಊಟಾನೂ ಇಲ್ಲ ಗೀಟಾನೂ ಇಲ್ಲ...ಒಳ್ಳೆ ಸಂದಿಗ್ಧ ಪರಿಸ್ಥಿತೀಲಿ ತಂದಿಟ್ಟಿದ್ದಾನೆ ಈ ನಮ್ಮ ಪುತ್ರರತ್ನ" ಅಂತ ನಡೆದದ್ದನ್ನೆಲ್ಲಾ ಹೇಳಿದರು.

ಅದಕ್ಕೆ ಡಾಕ್ಟರು—"ಅವನ್ನೆಲ್ಲಾ ನಂಬಬೇಡಿ ರಾಯ್ರೇ. ಧೈರ್ಯವಾಗಿ ಊಟಮಾಡಿ! ಏನೂ ಭಯವಿಲ್ಲ. ಡಾಲ್ಡಾ ಹೆಸರು—ಖರ್ಜೂರದ ಮರದ ಗುರುತು ಇರೋ ಡಬ್ಬದಲ್ಲಿರೋ ಡಾಲ್ಡಾದಲ್ಲಿ, ಶುದ್ಧವಾದ ಹಸನಾದ ತುಪ್ಪದಲ್ಲಿ ಇರೋಷ್ಟೇ ವಿಟಮಿನ್ 'ಎ' ಇದೆ. ಮನೇಲಿ ತುಪ್ಪಾನ ಯಾವ್ಯಾವ ರೀತೀಲಿ ಅಡಿಗೇಗೆ—ಕರಿಯೋದಕ್ಕೆ ಉಪಯೋಗಿಸ್ತೀವೋ ಅದೇರೀತಿ ಇದನ್ನೂ ಉಪಯೋಗಿಸ ಬಹುದು... ನಾನ್ಹೇಳಿದ ಮೇಲೂ ಅಪನಂಬಿಕೆ ಯಾಕೆ? ಊಟಕ್ಕೆ ಪ್ರಾರಂಭಿಸಿ" ಅಂದ್ರು.

ರಾಮರಾಯರಿಗೆ, ಬುದ್ಧಿವಂತನಾದ ಶ್ಯಾಮಣ್ಣ—ಜೊತೇಗೆ ಡಾಕ್ಟರೂ ಕೂಡಾ ಒಳ್ಳೇದು ಅಂತ ಹೇಳಿದ ಮೇಲೆ ನಂಬಿಕೆ ಉಂಟಾಯ್ತು.

ಮಾಧೂಗೆ ಎರಡು ರೆಕ್ಕೆಗಳು ಬಂದು ಬಲಿತಂತಾಯಿತು. ಎಲ್ಲರೂ ಸಂತೋಷದಿಂದ ಊಟಮಾಡಿ, ದಿನನೆಲ್ಲಾ ದುಡಿದು ದಣಿದಿದ್ದ ಮೈಯನ್ನು ನೆಲಕ್ಕೆ ಚಾಚಿ ಮಲಗಿದರು.

HVM. 299B-X29 KN

ಜಿ. ಎನ್. ಗಿಡವಾನಿ



# ಮೀನುಗಾರರ ಹುಡುಗಿ

**ಗಡಿ ಪ್ರದೇಶದ ಉಗ್ರ ಮುಸ್ಲಿಂ ಕುಲದ ಒಬ್ಬ ಹುಡುಗಿ ಜಾತಿಯ ಹೊರಗೆ ಪ್ರೀತಿ ಮಾಡಿದ್ದರ ದುರಂತ ಕಥೆ**

ರಾತ್ರಿ ಕಾಲದಲ್ಲಿ ಎಮ್ಮೆಗಳನ್ನು ಮೇಯಿಸುತ್ತಿರುವಾಗ ತನ್ನ ಕೊಳಲಿನಿಂದ ಆನಂದಭರಿತ ಹಾಡುಗಳನ್ನು ಈಗ ಖೂನಿ ಬಾರಿಸುವುದಿಲ್ಲ: ಇದೊಂದು ಮಾತನ್ನು ಬಿಟ್ಟರೆ ನಾನು ಇಲ್ಲದ ಸಮಯದಲ್ಲಿ ಶಿರಾಝಾಲದಲ್ಲಿ ವಿಶೇಷ ಬದಲಾವಣೆಯೇನೂ ಆಗಿಲ್ಲ. ತುಂಬಿದ ಹೃದಯದಿಂದ ಹಿಗ್ಗಿನ ಹಾಡುಗಳನ್ನು ಖೂನಿ ನುಡಿಸದಿರಲು ಕಾರಣವೇನು ಎಂಬ ಕುತೂಹಲ ನನಗುಂಟಾಯಿತು. ಆದ್ದರಿಂದ ಒಂದು ರಾತ್ರಿ ನಾನು ಈ ಕಾರಣ ತಿಳಿಯಲೆಂದು ಹುಲ್ಲುಗಾವಲಿಗೆ ಹೋದೆ.

ಅದು ಬೆಳದಿಂಗಳಿನ ರಾತ್ರಿ. ದೂರದಲ್ಲಿ ನನಗೆ ಕೊರಳ ಗಂಟೆಯ ಸಪ್ಪಳ ಕೇಳಿಸುತ್ತಿತ್ತು. ಖೂನಿಯ ಎಮ್ಮೆಗಳೇ ಮೇಯುತ್ತಿರಬೇಕು ಎಂದು ಯೋಚಿಸಿ ನಾನಲ್ಲಿಗೆ ಹೋದೆ.

ಎಮ್ಮೆಗಳಿಗೆ ತುಸು ದೂರದಲ್ಲಿ ನನ್ನತ್ತ ಬೆನ್ನು ಮಾಡಿ ನೆಲದ ಮೇಲೆ ಖೂನಿ ಕುಳಿತಿದ್ದಾನೆ. ಅವನ ಹೆಗಲ ಮೇಲೆ ಒಂದು ಶಾಲು ಇದೆ. ಶಾಲು ಹೊತ್ತುಕೊಳ್ಳುವಷ್ಟು ಚಳಿಯೇನೂ ಇಲ್ಲದಿದ್ದರೂ ಅವನು ಶಾಲು ಹೊತ್ತುಕೊಂಡಿದ್ದಾನೆ. ಮತ್ತೆ ಅದೂ ಎಂಥ ಶಾಲು! ಹೆಂಗಸರು ಹೊತ್ತುಕೊಳ್ಳುವಂಥದು—ಒಂಟೆ ಮತ್ತು ಮರುಭೂಮಿಯ ದೃಶ್ಯದ ಕಸೂತಿ ಬಿಡಿಸಿರುವ ಶಾಲು!

ನಾನು ಒಂದೇ ಒಂದು ಮಾರು ಸನಿಹದಲ್ಲಿ ಬಂದಿದ್ದರೂ ಖೂನಿಗೆ ಅದರ ಅರಿವಿಲ್ಲ. ಅವನ ಬೆನ್ನನು, ಬಲವಾಗಿ ಚಪ್ಪರಿಸಿ ನಾನವನನ್ನು

ತಂದ್ರಿಯಿಂದ ಎಚ್ಚರಿಸಿದೆ. ಖೂನಿ ಬೆಚ್ಚಿ ಬಿದ್ದು ತಿರುಗಿ ನೋಡಿದ. ಆದರೆ ನನ್ನ ಮುಖ ಕಂಡೊಡನೆ, "ಎಲಾ, ನೀನು ! ಜಾನಿ !" ಎಂದು ಅಲ್ಲಿಗೇ ಮಾತು ನಿಲ್ಲಿಸಿದ. ಅವನ ತುಟಿ ಕಂಪಿಸ ತೊಡಗಿತು. ಕಣ್ಣುಗಳಲ್ಲಿ ನೀರು ತುಂಬಿತು. ನಾನು ಮಾತಾಡುವಷ್ಟರಲ್ಲಿ ಆತ ಬಿಕ್ಕಿ ಬಿಕ್ಕಿ ಅಳತೊಡಗಿದ.

ಶಿರಾಝಾಲದಲ್ಲಿ ಸಂಭವಿಸಿದ ಅನೇಕ ಕರು-ಣಾಜನಕ ಕಥೆಗಳನ್ನು ನಾನು ಬಲ್ಲೆ. ಆದರೆ ಖೂನಿಯ ಕಥೆಯಂಥ ಹೃದಯದ್ರಾವಕ ಕಥೆ ಇನ್ನೊಂದಿಲ್ಲ.

ಖೂನಿ ಸರಳ ಸಾದಾ ಮನುಷ್ಯ. ಅವನ ನಿಜ ವಾದ ಹೆಸರು ಮುರಾದ. ಮುರಾದ ಎಂದರೆ ಬಯಕೆ ಎಂದರ್ಥ. ಆ ಹೆಸರು ಅವನಿಗೆ ಅನ್ವ-ರ್ಥಕವಾದುದು. ಏಕೆಂದರೆ ಕಾಜಲದ ಶಹರ ಝಾದೆಯ ಸಂಬಂಧದಲ್ಲಿ ಬಯಕೆಗಿಂತ ಮುಂದೆ ಅವನು ಹೆಜ್ಜೆಯಿಟ್ಟಿಲ್ಲ. ಈ ಜಗತ್ತಿನಲ್ಲಿ ಅವನಿ ಗಿರುವ ಏಕಮಾತ್ರ ಬಯಕೆಯೆಂದರೆ ಅವಳ ಪ್ರಾಪ್ತಿ. ಆದರೆ ಪ್ರತಿಯೊಬ್ಬನಿಗೂ ಅವನು ಖೂನಿ (ಕೊಲೆಗಡಕ) ಎಂಬ ಹೆಸರಿನಿಂದಲೇ ಪರಿಚಿತನಾಗಿದ್ದಾನೆ. ಹುಡುಗನಾಗಿದ್ದಾಗ ಎಲ್ಲಿ ಯಾದರೂ ಒಂದೆರಡು ನೊಣಗಳನ್ನು ಹುಡುಗಾ ಟಿಕೆಯಿಂದ ಕೊಂದಿದ್ದನ್ನು ಬಿಟ್ಟರೆ ಖೂನಿ ಕನಸಿ ನಲ್ಲಿ ಕೂಡ ಯಾರನ್ನೂ ಕೊಲೆ ಮಾಡಿದವನಲ್ಲ. ಆದರೂ ಅವನಿಗೆ ಖೂನಿ ಎಂಬ ಹೆಸರು ಬಂದಿದೆ.

ಖೂನಿಯ ಪ್ರಣಯ ಕಥೆ ಆರಂಭವಾದದ್ದು ಈಗೆಂಟು ವರ್ಷಗಳ ಹಿಂದೆ. ಆಗೊಂದು ದಿನ ಅವನ ಪ್ರೀತಿಯ ಎಮ್ಮೆ ಬನಿ ಮೀನುಗಾರರ ಹಳ್ಳಿಯಾದ ಕಾಜಲಕ್ಕೆ ಹೋಯಿತು. ಸಾಮಾನ್ಯ ಎಮ್ಮೆಗಳಿಗಿಂತಲೂ ಬಲು ಚುರುಕಾದದ್ದು ಬನಿ. ಅದರ ತುಂಟತನಕ್ಕೆ ಮಿತಿಯಿಲ್ಲ. ಬನಿ ಮೀನು ಗಾರ ಅಬ್ದುಲ್ಲನ ಮನೆಯ ಬೇಲಿಯನ್ನು ಮುರಿದು ಒಳಹೊಕ್ಕು ಗಡಿಗೆಗಳನ್ನು ಒಡೆದು ಹಾಕಿ ಅವು ಗಳಲ್ಲಿದ್ದ ಕಾಳುಗಳನ್ನು ಮುಕ್ಕಿತು. ಸಿಟ್ಟಿಗೆದ್ದ ಅಬ್ದುಲ್ ಅದನ್ನು ಹಿಡಿದು ಕಟ್ಟಿಹಾಕಿದ.

ಬನಿಯನ್ನು ಹುಡುಕಿಕೊಂಡು ಬಂದ ಖೂನಿಗೆ ಕಾಜಲದಲ್ಲಿ ಅದನ್ನು ಅಬ್ದುಲ್ ಕಟ್ಟಿಹಾಕಿರುವ ಸಮಾಚಾರ ತಿಳಿಯಿತು. ಅಬ್ದುಲ್ಲನ ಗುಡಿಸ ಲನ್ನು ಆತ ಸಮೀಪಿಸಿದಾಗ ಅವನಿಗೆ ಶಹರ ಝಾದೆ ಕಣ್ಣಿಗೆ ಬಿದ್ದಳು. ಅವಳು ಹದಿನಾಲ್ಕು ವರ್ಷದ ಹುಡುಗಿಯಾಗಿದ್ದರೂ ಆಗಲೇ ಹರೆ ಯದ ತರುಣಿಯಂತೆ ಕಾಣುತ್ತಿದ್ದಳು. ಅವ ಳನ್ನು ಕಂಡೊಡನೆ ಖೂನಿಗೆ ರೋಮಾಂಚನ ವಾಯಿತು. ತನಗೇನಾಯಿತು ಎಂದು ಅವನಿಗೆ ಗೊತ್ತಾಗಲಿಲ್ಲ. ತನಗಾದ ಅನುಭವವನ್ನು ಅವನು ನನ್ನ ಮುಂದೆ ವಿವರಿಸಿದಾಗ ಅವನು ಶಹರಝಾದೆಯ ಪ್ರೇಮದಲ್ಲಿ ಸಿಲುಕಿಕೊಂಡಿ ದ್ದಾನೆಂದು ನನಗೆ ಗೊತ್ತಾಯಿತು.

ಅಬ್ದುಲ್ ಹೊರಗೆ ಬರಲು ಶಹರಝಾದೆ ಒಳ ಗೋಡಿದಳು. ಅಬ್ದುಲ್ ಸಿಟ್ಟಿನಿಂದ ಖೂನಿ ಯನ್ನು ಬಯ್ಯತೊಡಗಿದ. "ನಿನ್ನ ಎಮ್ಮೆ ನನ್ನ ಗಡಿಗೆಗಳನ್ನು ಒಡೆದು ಹಾಕಿದೆ. ಕಾಳನ್ನು ಮುಕ್ಕಿದೆ. ನಿನ್ನ ಎಮ್ಮೆಗಾಗಿ ಇಲ್ಲಿ ನಿನ್ನ ಅಜ್ಜ ಕಾಳು ತಂದಿಟ್ಟಿದ್ದಾನೆಂದು ತಿಳಿದಿಯೇನು ?" ಖೂನಿ ಶಾಂತ ಮನುಷ್ಯ. ಅಬ್ದುಲ್ಲನ ವಾಕ್ಪ್ರ ಹಾರಕ್ಕೆ ಆತ ಈಡಲ್ಲ. ಆತ ಅಬ್ದುಲ್ ಹೇಳಿ ದಷ್ಟು ದಂಡ ತೆತ್ತು ಬನಿಯನ್ನು ಬಿಡಿಸಿಕೊಂಡು ಹೋದ.

ಆದರೆ ಶಹರಝಾದೆಯ ಮುಖ ಅವನಿಗೆ ಸದಾ ನೆನಪಿಗೆ ಬರುತ್ತಿತ್ತು. ಆ ಸುಂದರ ಮುಖ, ಉದ್ದನ್ನ ಕಪ್ಪು ಹುಬ್ಬುಗಳು ! ಅವಳು ತನ್ನವ ಳಾದರೆ—ಅಹಹಾ ! ಆದರೆ ಮರುಕ್ಷಣದಲ್ಲಿ ಅವನಿಗೆ ಆ ಹುಂಬ ಮೀನುಗಾರನ ನೆನಪು ಬಂದು ಆನಂದ ಕರಗಿ ತುಸು ನಿರಾಶೆಯೂ ಅಧೈರ್ಯವೂ ಉಂಟಾಗುವದು.

ಹಾಗೆಂದು ಶಹರಝಾದೆಯ ಮೇಲಿನ ಅವನ ಮೋಹ ಅಳಿಯಲಿಲ್ಲ. ದಿನೇ ದಿನೇ ಅದು ಹೆಚ್ಚುತ್ತಹೋಯಿತು. ಎಂಟು ವರ್ಷಗಳ ದೀರ್ಘ ಕಾಲ ಅವನು ಒಬ್ಬಂಟಿಗನಾಗಿಯೆ ಬಾಳಿ ತನ್ನ ಹೃದಯದಲ್ಲಿ ಶಹರಝಾದೆಯ ಮೂರ್ತಿಯನ್ನು ಸ್ಥಾಪಿಸಿಕೊಂಡು ಪೂಜಿಸುತ್ತಿದ್ದನು.

"ಲಗ್ನವಾದರೆ ಅವಳನ್ನೆ" ಎಂದು ಪ್ರತಿಜ್ಞೆ ಮಾಡಿದ ಖೂನಿ ಲಗ್ನವಾಗಲೇ ಇಲ್ಲ. ಮೀನುಗಾರರು ತಮ್ಮ ಜಾತಿಯ ಹೊರಗೆ ತಮ್ಮ ಹೆಣ್ಣು ಮಕ್ಕಳನ್ನು ಮದುವೆ ಮಾಡಿಕೊಡುವದಿಲ್ಲ. ಆದರೆ ಖೂನಿ ಹಟವಾದಿ. "ಶಹರಝಾದೆಯ ಮೇಲಿನ ನನ್ನ ಪ್ರೇಮ ನಿಜವಾದದ್ದಾದರೆ ಇಂದಲ್ಲ ನಾಳೆಯಾದರೂ ಅವಳು ಖಂಡಿತ ನನ್ನವಳಾಗುವಳು" ಎಂದಾತ ಅನ್ನುತ್ತಿದ್ದ.

ಶಹರಝಾದೆಯ ಮೇಲಿನ ಅವನ ಪ್ರೇಮ ಹೆಚ್ಚುತ್ತ ಹೋದಂತೆಲ್ಲ ಅವನ ಕೊಳಲು ಹೆಚ್ಚು ಹೆಚ್ಚು ಹಿಗ್ಗಿನ ಹಾಡುಗಳನ್ನು ನುಡಿಸುತ್ತ ಹೋಯಿತು. ಒಂದಿಲ್ಲೊಂದು ದಿನ ದೇವರು ತನ್ನ ಇಚ್ಛೆಯನ್ನು ಪೂರೈಸುವನು ಎಂಬ ಅವನ ನಂಬಿಗೆ ಬಲವಾಗುತ್ತಿತ್ತು.

ಒಂದು ಬೆಳದಿಂಗಳ ರಾತ್ರಿ ಅವನು ತನ್ನ ಎಮ್ಮೆಗಳನ್ನು ಮೇಯಿಸುತ್ತ ಹುಲ್ಲುಗಾವಲಿನಲ್ಲಿ ಕುಳಿತಿದ್ದ. ಆಹ್ಲಾದದಾಯಕವಾಗಿದ್ದ ಆ ಬೆಳದಿಂಗಳಲ್ಲಿ ಶಹರಝಾದೆಯ ಮೇಲಿನ ಪ್ರೇಮ ಹೃದಯದಲ್ಲಿ ಉಕ್ಕಿ ಹರಿಯುತ್ತಿರಲು ಖೂನಿ ಕೊಳಲಿನಲ್ಲಿ ಉನ್ಮಾದಕಾರಿಯಾದ ಸಂಗೀತವನ್ನು ನುಡಿಸುತ್ತಲಿದ್ದ. ಒಮ್ಮಿಂದೊಮ್ಮೆ ಬನಿ ಏನನ್ನೊ ಕಂಡು ಬೆಚ್ಚಿದಂತೆ ಮಾಡಿತು.

ಖೂನಿ ಕುಳಿತಲ್ಲಿಂದ ಎದ್ದು ಹೋಗಿ ಎಮ್ಮೆ ಏತಕ್ಕೆ ಬೆಚ್ಚಿತು ಎಂದು ನೋಡಿದ. ಎಲಾ! ಒಬ್ಬ ಹೆಂಗಸು ಕೈಗಳಿಂದ ಮುಖ ಮುಚ್ಚಿಕೊಂಡು ಅಳುತ್ತ ಕುಳಿತಿದ್ದಾಳೆ. ಇಂಥ ರಾತ್ರಿಯಲ್ಲಿ ಹುಲ್ಲುಗಾವಲಿನಲ್ಲಿ ಏಕಾಂಗಿಯಾಗಿ ಹೆಂಗಸೊಬ್ಬಳು ಅಳುತ್ತ ಕೂಡ್ರುವದೆಂದರೇನು? ಖೂನಿಗೆ ತಾನೇನು ಎಚ್ಚರಾಗಿರುವೆನೊ, ಸ್ವಪ್ನ ಕಾಣುತ್ತಿರುವೆನೊ ಎಂದು ಭ್ರಮೆಯಾಯಿತು.

ಖೂನಿ ಕೆಮ್ಮಿದ. ಆದರೆ ಅವಳೇನೂ ಅಳುವದನ್ನು ನಿಲ್ಲಿಸಿ ಮುಖ ಮೇಲಕ್ಕೆತ್ತಲಿಲ್ಲ. ಖಂಡಿತವಾಗಿಯೂ ಇವಳೊಬ್ಬ ಕಷ್ಟದಲ್ಲಿ ಸಿಲುಕಿದ ಪ್ರಾಣಿ ಎಂದು ಖೂನಿಗೆ ಅನಿಸಿತು. ಜೀವ ತೆತ್ತಾದರೂ ಅವಳ ದುಃಖ ನೀಗಿಸಬೇಕೆಂಬ ಹುರುಪು ಅವನಲ್ಲಿ ಉಂಟಾಯಿತು. ಕಷ್ಟದಲ್ಲಿ ಸಿಲುಕಿದ ರಮಣಿಯರನ್ನು ಪಾರುಮಾಡಿ ಧನ್ಯರಾದ ವೀರರ ಕಥೆಗಳನ್ನು ಕೇಳಿ ಬಲ್ಲ ಆತನಿಗೆ ತನಗೂ ಅಂಥ ಸುಯೋಗ ಒದಗಿತಲ್ಲ ಎಂದೆನಿಸಿ ಸ್ಫೂರ್ತಿಯುಂಟಾಯಿತು. ಆತ ಆ ತರುಣಿಯ ಭುಜವನ್ನು ಹಿಡಿದು ಅಲ್ಲಾಡಿಸಿ, "ರಮಣೀ, ನೀನಾರು? ಹಾದಿ ತಪ್ಪಿರುವಿಯಾ ಅಥವಾ ನಿನ್ನ ಮೇಲೇನಾದರೂ ಸಂಕಟ ಬಂದಿದೆಯೆ?" ಎಂದು ಕೇಳಿದ.

ಆ ತರುಣಿ ಈಗ ಮುಖವನ್ನು ಮೇಲಕ್ಕೆತ್ತಿದಳು. "ಆಂ! ಇದೇನು ಸತ್ಯವೊ ಸ್ವಪ್ನವೋ! ನೀನು ನಿಜವಾಗಿಯೂ ಶಹರಝಾದೆಯೆ ಅಥವಾ ನಾನು ಸ್ವಪ್ನ ಕಾಣುತ್ತಿರುವೆನೇ?" ಎಂದು ಖೂನಿ ಅವಳ ಮುಖವನ್ನು ದಿಟ್ಟಿಸಿ ನೋಡತೊಡಗಿದ. ಬೆಳದಿಂಗಳಿನ ಮಂದ ಪ್ರಕಾಶದಲ್ಲಿ ತಾನು ಕಲ್ಪಿಸಿದ್ದಕ್ಕಿಂತ ಹೆಚ್ಚು ಸುಂದರಿಯಾಗಿ ಅವಳು ಅವನಿಗೆ ಕಂಡಳು. ಅವಳ ಸೌಂದರ್ಯ ದಾಘಾತದಿಂದ ಮೂರು ನಾಲ್ಕು ನಿಮಿಷಗಳವರೆಗೆ ಖೂನಿ ಮೂಕನಾಗಿ ಹೋದ.

"ಶಹರಝಾದೆ, ನೀನಿಲ್ಲಿ? ಈ ರಾತ್ರಿಯಲ್ಲಿ?"

"ಹೌದು. ನಾನು ಹತಭಾಗಿನಿ. ನಿನ್ನ ಹಾದಿ ಹಿಡಿದು ಹೋಗು. ನನ್ನೊಡನೆ ಇರುವದರಿಂದ ನಿನಗೇನೂ ಒಳ್ಳೆಯದಾಗದು" ಆ ತರುಣಿ ಹೇಳಿದಳು.

"ಆದರೆ ನಿನಗೇನು ದುಃಖವುಂಟಾಗಿದೆ ಹೇಳು?" ಖೂನಿ ಬಿನ್ನವಿಸಿದ.

ತರುಣಿ ಮಾತಾಡಲಿಲ್ಲ. ಖೂನಿಯೇ ಮತ್ತೆ "ಹೇಳು ಶಹರಝಾದೆ. ಅಲ್ಲಾನ ಆಣೆಯಿದೆ. ಹೇಳು. ನನ್ನಿಂದಾದ ಸಹಾಯವನ್ನು...."

ಅಳುತ್ತಲೇ ಇದ್ದ ಶಹರರಝಾದೆ ನಡುವೆಯೆ "ನನ್ನನ್ನು ನನ್ನ ಪಾಡಿಗೆ ಬಿಟ್ಟು ಹೋಗು" ಎಂದಳು.

ಖೂನಿ ಬಿಡಲಿಲ್ಲ. ನಾನಾ ಸಾಂತ್ವನದ ನುಡಿಗಳನ್ನಾಡಿ ಅವಳನ್ನು ರಮಿಸಿದ. ಕೊನೆಗೆ ಶಹರಝಾದೆ ಹೇಳಿದಳು; "ನಾನು ಮಂಗಾರ ಜಾತಿಯವಳು. ಮೀನುಗಾರರಲ್ಲಿ ನಮ್ಮದೇ ಶ್ರೇಷ್ಠ ಜಾತಿ. ನಮ್ಮ ಜಾತಿಯಲ್ಲಿ ಮಂಗಾರ

ಹೆಣ್ಣು ಭಾವನೊಬ್ಬನಿದ್ದರೆ ಅವನನ್ನು ಬಿಟ್ಟು ಮತ್ತಾರನ್ನೂ ಲಗ್ನವಾಗಲಾರಳು. ಮೂಕನೂ ಕುಂಟನೂ ವೃದ್ಧನೂ ಆದ ಭಾವನೊಬ್ಬ ನನಗಿದ್ದಾನೆ. ನಾಳೆ ಅವನಿಗೆ ನನ್ನನ್ನು ಕೊಟ್ಟು ಲಗ್ನ ಮಾಡುತ್ತಾರೆ. "

ಖೂನಿ ಏನನ್ನು ಮಾಡಿಯಾನು? ಎಮ್ಮೆ-ಕೋಣಗಳನ್ನು ಆತ ಹದಕ್ಕೆ ತರಬಲ್ಲ ನಿಜ. ಆದರೆ ಈ ಮೀನುಗಾರರೋ? ಬಲು ಹುಂಬರು. ಎಂಟು ವರ್ಷಗಳ ಹಿಂದೆ ಬನಿಯನ್ನು ಕಟ್ಟಿ ಹಾಕಿದ ಅಬ್ದುಲ್ಲನ ಸಿಟ್ಟನ್ನೂ ಬಯ್ಗಳನ್ನೂ ಅವನಿನ್ನೂ ಮರೆತಿರಲಿಲ್ಲ. ಆದರೆ ಹಾಗೆಂದು ಶಹರಝಾದೆಯನ್ನು ಅವಳ ಸಂಕಟ ಕಾಲದಲ್ಲಿ ಕೈಬಿಡುವದೇ? ಊಂಹುಂ, ಸಾಧ್ಯವಿಲ್ಲ.

ಅದೂ ಅಲ್ಲದೆ ಇದರಲ್ಲಿ ದೇವರ ಕೈಯಿರಬೇಕು. ಅವನ ಕನಸು ಸತ್ಯವಾದಂತೆಯೆ ಆಗಿದೆ. ಶಹರಝಾದೆ ಅವನ ಬಳಿಗೆ ಬಂದಿ-ದ್ದಾಳೆ. ಅವನ ಹೃದಯದ ಪ್ರೇಮದ ಶಕ್ತಿ ಅವಳನ್ನು ಇಲ್ಲಿಗೆ ಎಳೆದು ತಂದಿದೆ. ಅವನ ಇಚ್ಛಿತ ವಸ್ತುವನ್ನು ದೈವ ಕರತಂದು ಅವನ ಕೈಗೆ ಹಾಕಿದೆ. ಈಗ ಅದನ್ನು ಇಟ್ಟುಕೊಳ್ಳದೆ ಇರುವದೆಂತು?

" ಶಹರಝಾದೆ, ನನ್ನ ಎಮ್ಮೆ ಬನಿ ಇಲ್ಲಿದೆ. ಅದು ನಮ್ಮಿಬ್ಬರನ್ನೂ ನದಿಯಾಚೆ ಕೊಂಡೊಯ್ಯುವದು. ನಡುನೀರಿನಲ್ಲಿ ಅದೆಂದೂ ಮುಣುಗು ಹಾಕಿ ನಮ್ಮನ್ನು ಮುಳುಗಿಸುವದಿಲ್ಲ. ನಾನು ನಿನ್ನನ್ನು ನದಿಯ ಆಚೆ ದಡದಲ್ಲಿ ಬಿಟ್ಟು ಬರುತ್ತೇನೆ. ನೀನು ಮೀನುಗಾರರ ಕೈಯಿಂದ ಪಾರಾಗುವೆ. ನಿನ್ನ ಅನ್ನ-ವಸತಿಗಳ ಏರ್ಪಾಡನ್ನು ನಾನು ಮಾಡಿಕೊಡುತ್ತೇನೆ. ಆಗಾಗ ಬಂದು ನಿನ್ನನ್ನು ಭೆಟ್ಟಿಯಾಗುವೆ. "

" ಅಲ್ಲಾ ನಿನಗೆ ದೀರ್ಘಾಯುಷ್ಯವನ್ನು ಕರುಣಿಸಲಿ. ನೀನೇ ನನ್ನ ರಕ್ಷಕ " ಎಂದು ಹರಸಿದ ಶಹರಝಾದೆಯ ಮೃದು ಹಸ್ತವನ್ನು ಒಂದು ಕೈಲಿ ಹಿಡಿದುಕೊಂಡು ಬನಿಯ ಕಿವಿಯನ್ನು ಇನ್ನೊಂದು ಕೈಲಿ ಹಿಡಿದುಕೊಂಡು ಖೂನಿ ನದಿ ದಂಡೆಗೆ ಹೊರಟ.

ಬನಿ ನೀರಿಗಿಳಿದೊಡನೆ ಖೂನಿ ಶಹರಝಾದೆಯನ್ನು ಹೂವನ್ನೆತ್ತುವಂತೆ ಎತ್ತಿ ಬನಿಯ ಬೆನ್ನ ಮೇಲೆ ಕೂಡ್ರಿಸಿದ. ಬಳಿಕ ತಾನು ಅವಳ ಹಿಂದೆ ಕುಳಿತು ಅವಳು ಬೀಳದಿರಲೆಂದು ಅವಳನ್ನು ಗಟ್ಟಿಯಾಗಿ ಬಾಹುಪಾಶದಲ್ಲಿ ಬಿಗಿದುಕೊಂಡ.

ಬನಿ ನೀರಿನಲ್ಲಿ ಈಸುತ್ತ ನಡೆಯಿತು. ಖೂನಿಗೆ ಇದುವರೆಗೂ ಸ್ತ್ರೀದೇಹ ಸ್ಪರ್ಶದ ಅನುಭವವಿರಲಿಲ್ಲ. ಶಹರಝಾದೆಯ ಸ್ಪರ್ಶದಿಂದ ಅವನಿಗೆ ಅಮಲೇರಿದಂತಾಗಿತ್ತು.

ಅವನಲ್ಲಿ ಭಾವನೆಗಳ ತರಂಗಗಳೆದ್ದವು. ಏಕಕಾಲಕ್ಕೆ ಒಮ್ಮೆಂದೊಮ್ಮೆ ಇಷ್ಟೊಂದು ಭಾವನಾ ತರಂಗಗಳು ಮನುಷ್ಯನಲ್ಲಿ ಮೂಡಬಹುದೆಂಬ ಕಲ್ಪನೆ ಕೂಡ ಅವನಿಗಿರಲಿಲ್ಲ.

ಶಹರಝಾದೆ ತನ್ನ ಆಲಿಂಗನದಲ್ಲಿದ್ದಾಳೆಂಬದನ್ನು ನಂಬುವದು ಆತನಿಗೆ ಕಠಿಣವಾಗುತ್ತಿತ್ತು. ಆದರೆ ಅವಳನ್ನು ಅವನು ಅಪ್ಪಿಕೊಂಡಿರುವದು ನಿಜವಾಗಿತ್ತು. ಬಯಸಿದ್ದ ಭಾಗ್ಯ ಅಕಸ್ಮಾತ್ತಾಗಿ ಬಂದಿದ್ದರಿಂದ ಖೂನಿ ಹುಚ್ಚನಂತಾಗಿ ಹೋಗಿದ್ದ. ಆತ ಒಂದೂ ಶಬ್ದವನ್ನಾಡಲಾರದವನಾಗಿದ್ದ. ಆದರೆ ಅವನ ಬಾಹುಗಳ ಹಿಡಿತ ಮಾತ್ರ ಬಿಗಿಯಾಗುತ್ತ ನಡೆಯಿತು.

ನಡು ಹೊಳೆಗೆ ಬಂದಾಗ ಶಹರಝಾದೆ ತನ್ನ ತಲೆಯನ್ನು ಅವನ ಭುಜದ ಮೇಲೊರಗಿಸಿದಳು. ತಾನೇನು ಮಾಡುತ್ತಿರುವೆನೆಂಬ ಅರಿವಿಲ್ಲದೆಯೆ ಖೂನಿ ಅವಳ ಮೃದು ತುಟಿಗಳನ್ನು ಚುಂಬಿಸಿದ. ಮತ್ತೆ ಅಸ್ಫುಟವಾಗಿ, " ಶಹರಝಾದೆ, ಏಳೆಂಟು ವರ್ಷಗಳಿಂದ ನಿನ್ನನ್ನು ಪ್ರೀತಿಸುತ್ತಿದ್ದೇನೆ. ಒಂದಿಲ್ಲೊಂದು ದಿನ ನೀನು ಬಂದೇ ಬರುವಿಯೆಂದು ಆಶೆಯನ್ನಿಟ್ಟುಕೊಂಡಿದ್ದೆ. ಅಲ್ಲಾ ದೊಡ್ಡವನು. ಕೃಪೆ ಮಾಡಿದನು '' ಎಂದ.

ತುಸು ತಡೆದು ಖೂನಿ ಹೇಳಿದ. " ಈ ಎಂಟು ವರ್ಷಗಳಲ್ಲಿ ನಾನು ಬೇರೆ ಹೆಂಗಸಿನ ವಿಚಾರವನ್ನು ಮಾಡಲಿಲ್ಲ. ಲಗ್ನವಾದರೆ ನಿನ್ನನ್ನೆ ಎಂದು ಪ್ರತಿಜ್ಞೆ ಮಾಡಿದ್ದೆ. ಸಾಯುವವರೆಗೂ ನನ್ನವಳಾಗಿರುವಿಯೆಂದು ವಚನಕೊಡು, ಶಹರಝಾದೆ. "

ಶಹರಝಾದೆ ತನ್ನ ಗಲ್ಲವನ್ನು ಅವನ ಗಲ್ಲಕ್ಕೆ ಆನಿಸಿ "ಖೂನಿ, ಈ ನದಿಯ ನೀರಿನ ಆಣೆಯಾಗಿ ನಿನ್ನನ್ನಲ್ಲದೆ ಇನ್ನಾರನ್ನೂ ಪ್ರೀತಿಸುವದಿಲ್ಲ" ಎಂದಳು.

ಬನಿಗೆ ತನ್ನ ಬೆನ್ನ ಮೇಲೆ ನಡೆದಿರುವ ಈ ಪ್ರಣಯದಾಟದ ಅರಿವಿಲ್ಲ. ಅದು ತನ್ನ ಪಾಡಿಗೆ ತಾನು ಈಸುತ್ತಲೇ ಇತ್ತು. ಪ್ರೇಮಿಗಳಿಬ್ಬರೂ ಪರಸ್ಪರ ನಿಷ್ಠೆಯ ಆಣೆ-ಭಾಷೆಗಳನ್ನು ಮಾಡಿ ಕೊಂಡರು.

ದಂಡೆ ಬಂದಿತು. ಖೂನಿ ಮೊದಲು ಕೆಳಗಿ ಳಿದು ಶಹರಝಾದೆಯನ್ನು ಇಳಿಸಿಕೊಂಡ. ಅವಳ ಒದ್ದೆಯಾದ ಕಪೋಲವನ್ನು ತನ್ನ ಕೈಗ ಳಿಂದ ಒರೆಸಿ ಕೆದರಿದ ಅವಳ ತಲೆಗೂದಲನ್ನು ತೀಡಿದ.

"ಅಹಾ! ನಿನ್ನ ತಲೆಗೂದಲು ಎಷ್ಟು ಸುಂದರ! ನನ್ನ ಬನಿಯ ಬಾಲದಷ್ಟೇ ಉದ್ದವಾಗಿರುವ ಈ ಕೂದಲಿನ ಅಂದವನ್ನೇನು ಹೇಳಲಿ" ಎಂದು ಅವಳನ್ನಾಲಿಂಗಿಸಿಕೊಂಡ ಖೂನಿ.

"ಖೂನಿ, ಅಲ್ಲಾನ ದೃಷ್ಟಿಯಲ್ಲಿ ನಾವೀರ್ವರೂ ಈಗ ಸತಿಪತಿಗಳು," ಎಂದಳು ಶಹರಝಾದೆ.

ಪ್ರೇಮಾಲಾಪದಲ್ಲಿ ಅವರು ಜಗತ್ತನ್ನೆ ಮರೆತಿ ದ್ದರು. ಚಂದ್ರನೀಗ ಆಕಾಶದ ಅಂಚಿಗೆ ಬಂದಿದ್ದ. ಖೂನಿ ಮರಳಿ ಹೋಗಬೇಕು. ಆದರೆ ಶಹರ ಝಾದೆಯನ್ನು ಅಡಗಿಸುವದೆಲ್ಲಿ? ಅಕಸ್ಮಾತ್ತಾಗಿ ಅವನಿಗೆ ಅಡವಿಯಲ್ಲಿ ಒಳಗೆ ದೂರದಲ್ಲಿರುವ ಒಂದು ಹಾಳು ಮಸೀದೆಯ ನೆನಪಾಯಿತು. "ನಡೆ, ಶಹರಝಾದೆ, ಇಂಥದೇ ಪ್ರಸಂಗದಲ್ಲಿ ಮನೆಬಿಟ್ಟು ಓಡಿದ್ದ ನನ್ನ ಅಜ್ಜಿಯನ್ನು ಅವಳ ಪ್ರಿಯಕರ ಅಡಗಿಸಿಟ್ಟ ಒಂದು ಹಾಳು ಕಟ್ಟಡ ಇಲ್ಲಿದೆ. ಮೊದಲೊಮ್ಮೆ ಅದು ಮಸೀದೆಯಾ ಗಿತ್ತು. ಅಲ್ಲಿನ್ನೂ ಅಲ್ಲಾನ ಉಸಿರು ಆಡುತ್ತಿದೆ. ಅದು ನಿರಾಶ್ರಿತರಿಗೆ ಆಶ್ರಯಸ್ಥಾನವಾಗಿದೆ."

ಅವರಿಬ್ಬರೂ ಆ ಮಸೀದೆಗೆ ಹೊರಟರು. ಶಹರಝಾದೆಯ ಕಾಲಿಗೆ ನಟ್ಟ ಮುಳ್ಳನ್ನು ತೆಗೆದುಹಾಕುತ್ತ ಖೂನಿ "ನಿನ್ನೊಬ್ಬಳನ್ನೇ ಬಿಟ್ಟು ಹೇಗೆ ಹೋಗಲಿ?" ಎಂದ. "ಹಾಗಾದರೆ ಏಕೆ ಹೋಗುತ್ತಿ?" ಎಂದು ಶಹರಝಾದೆ ಕೇಳಿ ದಳು.

ಎದ್ದು ನಿಂತು ಖೂನಿ ಮತ್ತೆ ಅವಳನ್ನಾ ಲಿಂಗಿಸಿಕೊಂಡ. ಶಹರಝಾದೆಯೆ ಮೊದಲು ಈ ಉನ್ಮಾದದಿಂದ ಎಚ್ಚತ್ತು "ಖೂನಿ, ಒಂದೇ ರಾತ್ರಿಯಲ್ಲಿ ನಾವಿಬ್ಬರೂ ಕಾಣೆಯಾದೆವೆಂದರೆ ನಿನ್ನ ಮೇಲೆ ಸಂಶಯ ಬರುವದು. ಮಂಗಾರ ಮೀನುಗಾರರು ಬಲು ದುಷ್ಟರು, ಕ್ರೂರರು. ಖೂನಿ, ನನ್ನ ಜೀವಕ್ಕಿಂತಲೂ ನಾನು ನಿನ್ನನ್ನು ಹೆಚ್ಚಾಗಿ ಪ್ರೀತಿಸುತ್ತೇನೆ. ಅಲ್ಲಾ ನಿನ್ನನ್ನು ರಕ್ಷಿಸಲಿ" ಎಂದು ತಾನು ಹೊತ್ತುಕೊಂಡ ಶಾಳನ್ನು ಖೂನಿಗೆ ಹೊದಿಸಿದಳು.

ಸುಂದರವಾದ ಆ ಶಾಲಿನ ಮೇಲೆ ಒಂಟೆ ಹಾಗು ಮರುಭೂಮಿಯ ದೃಶ್ಯದ ಕಸೂತಿ ಹಾಕಲ್ಪಟ್ಟಿತ್ತು.

ಶಹರಝಾದೆ ಖೂನಿಯ ಮುಖವನ್ನು ತನ್ನ ಕೈಗಳಲ್ಲಿ ಹಿಡಿದುಕೊಂಡು ಹೇಳಿದಳು "ಖೂನಿ, ಇದು ನನ್ನ ಶಾಲು. ಇದನ್ನು ಸದಾ ಹೊತ್ತು ಕೊಂಡಿರು. ಈ ಶಾಲು ನಿನಗಂಟಿಕೊಂಡಿರುವ ವರೆಗೂ ಶಹರಝಾದೆ ನಿನ್ನನ್ನಂಟಿಕೊಂಡಿರು ತ್ತಾಳೆ. ಈಗ ನೀನೊಬ್ಬನೇ ತಿರುಗಿ ಹೋಗುವ ದಿಲ್ಲ. ಈ ಶಾಲು ನಿನ್ನ ಜೊತೆಯಿದ್ದರೆ ಶಹರ-ಝಾದೆ ಇದ್ದಂತೆಯೆ."

ಖೂನಿಗೆ ಹೋಗುವ ಮನಸ್ಸಿಲ್ಲ. "ಖೂನಿ, ನೀನು ನನ್ನನ್ನು ನಿಜವಾಗಿಯೂ ಪ್ರೀತಿಸುತ್ತಿದ್ದರೆ ತಿರುಗಿ ಹೋಗು. ಬೆಳಗಾಗುತ್ತಿದೆ. ಇಂದು ರಾತ್ರಿ ತಿರುಗಿ ಬಾ. ಹಗಲನ್ನು ಹೇಗಾದರೂ ಕಳೆಯುತ್ತೇನೆ" ಎಂದಳು ಶಹರಝಾದೆ.

ಖೂನಿ ಅವಳನ್ನು ದೀರ್ಘವಾಗಿ ಮುತ್ತಿಟ್ಟು "ಈ ಕೊಳಲೊಂದೇ ನಿನ್ನ ಮೇಲಿನ ನನ್ನ ಗಾಢ ಪ್ರೇಮಕ್ಕೆ ಸಾಕ್ಷಿ. ಈಗೆಂಟು ವರ್ಷಗ ಳಿಂದ ನಿನ್ನ ಮೇಲಿನ ನನ್ನ ಪ್ರೇಮವನ್ನು ಅದು ನುಡಿಸುತ್ತ ಬಂದಿದೆ. ಇದು ನಿನ್ನ ಬಳಿ ಇರಲಿ. ಅದಿದ್ದರೆ ನಾನಿದ್ದಂತೆಯೆ" ಎಂದ.

ಹೊರಡಲಾರದೆ ಹೊರಟು ನಿಂತ ಖೂನಿ. "ಈ ಕ್ಷಣದಿಂದ ನಾವೆಲ್ಲಿಯೇ ಇರಲಿ, ನಮ

ಗೇನೇ ಆಗಲಿ, ನಾವೀರ್ವರೂ ಒಂದೇ'' ಎಂದು ಶಹರಝಾದೆ ಅವನನ್ನು ಬೀಳ್ಕೊಟ್ಟಳು.

ಕಾಜಲದಿಂದ ಶಹರಝಾದೆಯನ್ನು ಹುಡುಕಿಕೊಂಡು ಜನ ಬಂದರು. ಶಿರಾಝಾಲದಲ್ಲಿ ಒಬ್ಬರಿಗೂ ಶಹರಝಾದೆಯ ಸಮಾಚಾರ ಗೊತ್ತಿಲ್ಲ. ಹುಡುಕಲು ಬಂದವರು ಮುಂದಿನ ಹಳ್ಳಿಗೆ ಹೋದರು.

ಎಮ್ಮೆಗಳನ್ನು ಹೊಡೆದುಕೊಂಡುಬಂದು ಅವುಗಳನ್ನು ಹಿಂಡತೊಡಗಿದ ಖೂನಿಗೆ ಈ ಜನರು ಬಂದುಹೋದ ಸಂಗತಿ ತಿಳಿಯಲೇ ಇಲ್ಲ.

ಮುಂದಿನ ಹಳ್ಳಿಯಲ್ಲಿ ಮೀನಿನ ಎಣ್ಣೆ ಕೊಳ್ಳಲು ಒಬ್ಬ ವ್ಯಾಪಾರಿ ಬಂದಿದ್ದ. ಶಹರಝಾದೆಯನ್ನು ಹುಡುಕಲು ಬಂದವರನ್ನು ಕಂಡೊಡನೆ ಆ ವ್ಯಾಪಾರಿ, "ನದಿಯಾಚೆಯ ಅಡವಿಯ ಹಾಳು ಮಸೀದೆಯಲ್ಲಿ ನನ್ನ ಕಣ್ಣಿಗೆ ಬಿದ್ದ ಸುಂದರಳಾದ ಮೀನುಗಾರರ ಹುಡುಗಿಯನ್ನು ನೀವು ಹುಡುಕುತ್ತಿಲ್ಲವಷ್ಟೆ?" ಎಂದ.

ಆ ಜನರು ಒಂದು ಶಬ್ದವನ್ನೂ ಆಡದೆ ಆ ವ್ಯಾಪಾರಿಯನ್ನು ದೋಣಿಯಲ್ಲಿ ಕೂಡ್ರಿಸಿಕೊಂಡು ಹೊರಟರು.

ವ್ಯಾಪಾರಿ ಆ ಹಾಳು ಮಸೀದೆಗೆ ಅವರನ್ನು ಕರೆದೊಯ್ದ. ಅಬ್ದುಲನ ಕಣ್ಣೇ ಮೊದಲಿಗೆ ಶಹರಝಾದೆಯನ್ನು ಕಂಡಿತು. ಆತ ಹುಲಿ ತನ್ನ ಬೇಟೆಯ ಮೇಲೆ ಎರಗುವಂತೆ ಅವಳ ಮೇಲೆ ಜಗಿದ. ಅವಳ ಕೂದಲನ್ನು ಹಿಡಿದೆಳೆದು ದನ ಬಡಿದಂತೆ ಬಡಿದ. ಮೈಮೇಲೆ ಬಾಸುಂಡೆಗಳೆದ್ದರೂ ಶಹರಝಾದೆ ತುಟಿ ಬಿಚ್ಚಲಿಲ್ಲ. ಅಬ್ದುಲ್ಲನ ಹೊಡೆತದಿಂದ ಶಹರಝಾದೆ ಮೂರ್ಛೆ ಹೋದಳು. ಅವಳನ್ನೆತ್ತಿ ದೋಣಿಯಲ್ಲಿ ಹಾಕಿ ಕಾಜಲಕ್ಕೆ ಕರತಂದರು.

ಇಷ್ಟಾದರೂ ಅಬ್ದುಲ್ಲನ ಕೋಪ ಇಳಿದಿರಲಿಲ್ಲ. ಮನೆಗೆ ಬಂದೊಡನೆ ಮೂರ್ಛಿತಳಾದ ಶಹರಝಾದೆಯನ್ನು ಜಂತಿಗೆ ಆತ ತಲೆಕೆಳಗಾಗಿ ನೇತು ಹಾಕಿದ. "ನೀನು ಹುಟ್ಟದಿದ್ದರೇ ಚನ್ನಾಗಿತ್ತು. ನನ್ನ ಮನೆತನದ, ಮಂಗಾರ ಕುಲದ ಮರ್ಯಾದೆಯನ್ನು ನೀನು ಕಳೆದೆ. ನಾವಿನ್ನು ತಲೆಯೆತ್ತುವದೆಂತು? ಹೇಳು, ನಿನ್ನನ್ನು ಅಲ್ಲಿಗೆ ಕರೆದೊಯ್ದ ದುಷ್ಟನಾರು?" ಅಬ್ದುಲ್ ಗರ್ಜಿಸಿದ. ಆದರೆ ಎಚ್ಚರ ತಪ್ಪಿದ್ದ ಶಹರಝಾದೆ ಉತ್ತರ ಕೊಡುವದಾದರೂ ಹೇಗೆ?

ಶಹರಝಾದೆ ಹಾಗೆಯೆ ನೇತು ಬಿದ್ದಿದ್ದಳು ಅವಳಿಗೆ ಎಚ್ಚರ ಬರುವ ಮೊದಲೇ ಅದು ಹೇಗೊ ಹಗ್ಗ ಹರಿದು ಅವಳು ಕೆಳಗೆ ಬಿದ್ದಳು. ಬಿದ್ದ ರಭಸಕ್ಕೆ ಅವಳ ತಲೆ ಒಡೆಯಿತು. ಅವಳ ಪ್ರಾಣಪಕ್ಷಿ ಹಾರಿಹೋಯಿತು.

ಪ್ರತಿ ರಾತ್ರಿ ಅವಳ ಗೋರಿಯ ಮೇಲೆ ಖೂನಿ ತನ್ನ ಊಟದಲ್ಲಿ ಅರ್ಧ ಪಾಲನ್ನು ಇಟ್ಟು ಬರುತ್ತಾನೆ. ಶಹರಝಾದೆಯ ಹೆಸರಿನಲ್ಲಿ ಬಡಬಗ್ಗರು ಅದನ್ನು ಉಣ್ಣುತ್ತಾರೆ.

"ಎಲ್ಲಿಯೇ ಇರಲಿ, ಏನೇ ಆಗಲಿ, ನಾವೀರ್ವರೂ ಒಂದೇ. ಒಟ್ಟಾಗಿಯೇ ಇರುತ್ತೇವೆ'' ಎಂದು ಶಹರಝಾದೆ ಆಡಿದ್ದ ಮಾತುಗಳ ನೆನಪೇ ಖೂನಿಯ ಸಮಾಧಾನದ ಆಸರ.



**ಲೈಂಗಿಕ ಸಂಬಂಧವು ವೈಯಕ್ತಿಕ ಸಂಬಂಧವಲ್ಲ. ಇತರ ಯಾವುದೇ ಒಂದು ದಿನದಲ್ಲಿ ಪರಸ್ಪರ ಯಾವ ಸಂಬಂಧವನ್ನೂ ಸಹಿಸಿಕೊಳ್ಳಲಾರದ ಇಬ್ಬರ ನಡುವೆ ಅದು ಅನಿವಾರ್ಯವಾಗಿ ಅಪೇಕ್ಷಿತವಾಗಿ ಬರಬಹುದು ಮತ್ತು ಅತಿ ಪ್ರಸನ್ನತೆಯೊಂದಿಗೆ ಮುಕ್ತಾಯಗೊಳ್ಳಬಹುದು.**

**—ಬರ್ನಾರ್ಡ್ ಷಾ**

# ಗುರು ಗ್ರಹ

**ಹನ್ನೆರಡು ಚಂದ್ರರನ್ನಾಳುವ ಈ ಗ್ರಹ ಸೂರ್ಯನ ಸಂಸಾರದಲ್ಲೇ ಅತಿ ದೊಡ್ಡದು**

ಗುರು ಎಂದರೇನೇ ದೊಡ್ಡದು, ಭಾರವಾದದ್ದು ಎಂದರ್ಥ. ಗುರುಗ್ರಹಕ್ಕೆ ಈ ಹೆಸರು ಅನ್ವರ್ಥಕವಾಗಿದೆ. ಸೂರ್ಯನಿಂದ ೫೦ ಕೋಟಿ ಮೈಲು ದೂರದಲ್ಲಿ ಪ್ರದಕ್ಷಿಣೆ ಹಾಕುತ್ತಿರುವ ಈ ಮಹಾಗ್ರಹವು ಭೂಮಿಗಿಂತ ೧,೩೦೦ ಪಾಲು ದೊಡ್ಡದು; ಉಳಿದೆಲ್ಲ ಗ್ರಹಗಳನ್ನು ಒಟ್ಟುಹಾಕಿದರೆ ಗುರುವಿನ ತೂಕದ ಅರ್ಧವಷ್ಟೇ ಆದೀತು. ಆದ್ದರಿಂದಲೇ ಪುರಾತನರು ದೇವತೆಗಳ ಗುರುವಾದ ಬೃಹಸ್ಪತಿಯ ಹೆಸರನ್ನು ಅದಕ್ಕೆ ಕೊಟ್ಟರು. ಸೂರ್ಯನನ್ನು ಬಿಟ್ಟರೆ ಜ್ಯೋತಿಷ್ಯ ಶಾಸ್ತ್ರದಲ್ಲಿ ಗುರುವಿಗೇ ಎಲ್ಲ ಗ್ರಹಗಳಿಗಿಂತ ಮಹತ್ವ ಕೊಡುತ್ತಾರೆ.

ಇಷ್ಟು ದೂರವಿದ್ದರೂ ಗುರು ಅತ್ಯಂತ ಪ್ರಕಾಶಮಾನವಾಗಿ ಕಾಣಿಸುತ್ತದೆ. ಭೂಮಿಗೆ ಸಮೀಪವಾಗಿರುವ ಶುಕ್ರ (ಮತ್ತು ಕೆಲ ವೇಳೆ ಮಂಗಳ) ಹೊರತು ಮತ್ತಾವ ಗ್ರಹವೂ ಗುರುವಿನಷ್ಟು ಪ್ರಕಾಶಮಾನವಾಗಿಲ್ಲ.

ಇಷ್ಟು ದೊಡ್ಡ ಕಾಯ ಹೊತ್ತುಕೊಂಡು ಸೂರ್ಯನಿಗೆ ಒಂದು ಪ್ರದಕ್ಷಿಣೆ ಹಾಕಲು ಗುರುವಿಗೆ ನಮ್ಮ ೧೨ ವರ್ಷಗಳಷ್ಟು ಕಾಲ ಬೇಕಾಗುತ್ತದೆ. ಅಂದರೆ ಗುರುಗ್ರಹದಲ್ಲಿ ನಾವಿದ್ದರೆ ಅಲ್ಲಿನ ಯುಗಾದಿಯಿಂದ ಯುಗಾದಿಗೆ ನಡುವೆ ಭೂಮಿಯ ೧೨ ವರ್ಷಗಳು ಸಂದುಹೋಗುವವು.

ಗುರುವಿನ ವ್ಯಾಸ ವಿಷುವಪ್ರದೇಶದಲ್ಲಿ ಭೂಮಿಗಿಂತ ೧೧ ಪಟ್ಟು ಹೆಚ್ಚು, ಅರ್ಥಾತ್ ೮೮,೭೦೦ ಮೈಲು ಇದೆ. ಆದರೂ ಅದು ತನ್ನ ಸುತ್ತ ಅಗಾಧ ವೇಗದಿಂದ ತಿತ್ತಿರಿತಿರುಗುತ್ತಿರುತ್ತದೆ. ಭೂಮಿ ೨೪ ತಾಸಿಗೊಂದು ಸುತ್ತು ತಿರುಗಿದರೆ ಗುರು ಹತ್ತೇ ತಾಸಿನಲ್ಲಿ ಒಂದು ಸುತ್ತು ತಿರುಗಿಬಿಡುತ್ತದೆ. ಈ ವೇಗದ ಫಲವಾಗಿ ವಿಷುವ ಪ್ರದೇಶದಲ್ಲಿ ಉಂಟಾಗುವ ಅತಿಶಯವಾದ ಕೇಂದ್ರಾಪಗಾಮಿ ಶಕ್ತಿಯಿಂದ ಆ ಭಾಗ ಉಬ್ಬುತ್ತದೆ, ಧ್ರುವಪ್ರದೇಶಗಳು ತಗ್ಗುತ್ತವೆ. ಇದರಿಂದ ಗುರುವು ಜಬ್ಬಿಯಾದ ಕಿತ್ತಳೆ ಹಣ್ಣಿನಂತೆ ಕಾಣುತ್ತದೆ.

ನಮ್ಮ ಭೂಮಿಯ ಮೇಲ್ಭಾಗ ಗಟ್ಟಿಯಾಗಿ ಪರ್ವತ, ಕಂದರ, ಮರಳುಕಾಡುಗಳಿಂದ ಕೂಡಿದೆ; ಮೇಲೆ ತೆಳ್ಳನ್ನ ವಾತಾವರಣದ ಮುಸುಕು ಇದೆ. ಆದರೆ ಗುರುವನ್ನು ದುರ್ಬೀನಿನಲ್ಲಿ ನೋಡಿದರೆ ಸದಾ ಚಂಚಲವಾದ ಮೋಡಗಳ ಮುಸುಕೇ ಕಾಣುವುದಲ್ಲದೆ ಹಳ್ಳತಿಟ್ಟುಗಳ ಲಕ್ಷಣವೇ ಇಲ್ಲ. ಆದ್ದರಿಂದ ಗುರುವಿನ ಮೇಲ್ಭಾಗ ಭೂಮಿಯಂತೆ ಗಟ್ಟಿಯಾಗಿಲ್ಲೆಂದು ಅರ್ಥವಾಗುತ್ತದೆ.

ಗುರುವಿನ ಗಾತ್ರ ಭೂಮಿಗಿಂತ ೧,೩೦೦ ಪಟ್ಟು ಹೆಚ್ಚಾಗಿದ್ದರೂ ಅದರ ತೂಕ ಭೂಮಿಯ ೩೧೭ ಪಟ್ಟು ಮಾತ್ರ ಇದೆ. ತನ್ನ ಆಕಾರವಾನದಿಂದ ಗುರು ಹಗುರ ಗ್ರಹವೇ ಸೈ. ಗುರುವಿನಿಂದ ಭೂಮಿಯಷ್ಟು ದೊಡ್ಡ ಭಾಗವನ್ನು ಹೊರ ತೆಗೆದರೆ ಆ ಭಾಗ ಭೂಮಿಯ ಕಾಲುವಾಸಿ ಭಾರವಾಗಬಹುದಷ್ಟೇ.

ಗುರುವಿನ ಮೇಲಿನ ಮೋಡಗಳಾಗಲಿ ವಾತಾವರಣವಾಗಲಿ ಭೂಮಿಯಲ್ಲಿರುವಂತಿಲ್ಲ. ಅದು ಅಮೋನಿಯಾ ಮತ್ತು ಮೆಥೇನ್ ಎಂಬ ದುರ್ವಾಸನಾಮಯವಾದ, ಅಸಹ್ಯವಾದ ಅನಿಲಗಳಿಂದ ತುಂಬಿದೆ. ಇವೆರಡೂ ಜಲಜನಕ ವಾಯುವಿನ ಸಂಯುಕ್ತಗಳು. ಸೃಷ್ಟಿಯ ಆದಿಯಲ್ಲಿ ಗುರುಗ್ರಹದಲ್ಲಿದ್ದ ಜಲಜನಕದ ಬಹುಭಾಗವು ಇತರ ಧಾತುಗಳೊಡನೆ ಸೇರಿ ಅಮೋನಿಯಾ ಮತ್ತು ಮೆಥೇನುಗಳಾಗಿ ರೂಪಾಂತರ ಹೊಂದಿರಬಹುದು. ಉಳಿದ ಜಲಜನಕವು ಪ್ರಾಣವಾಯು (ಆಕ್ಸಿಜನ್) ವಿನೊಡನೆ ಸೇರಿ ನೀರಾಗಿ

ರೂಪಾಂತರಗೊಂಡಿರಬಹುದು. ಆದ್ದರಿಂದ ಮೇಲಿನ ವಿಷಗಾಳಿಯ ಆವರಣದ ಕೆಳಗೆ ಗುರು ಗ್ರಹದ ಮೇಲೆ ದಪ್ಪವಾದ ಬರ್ಫದ ಕವಚವಿರ ಬೇಕೆಂದು ತರ್ಕಿಸುತ್ತಾರೆ.

ಆದರೆ ಇದು ತರ್ಕವಷ್ಟೇ. ಗುರುವಿನ ಮೈಮೇ ಲಿನ ಅನಿಲಗಳ ಹೊದಿಕೆಯೆಷ್ಟು ದಪ್ಪವಾಗಿದೆ ಯೆಂದರೆ ಅದರಾಚೆಗೆ ಏನಿದೆಯೆಂದು ಕಾಣುವಂ ತೆಯೇ ಇಲ್ಲ. ಯೇಲ್ ವಿಶ್ವವಿದ್ಯಾಲಯದ ರೂಪರ್ಟ್ ವೈಲ್ಡರ ಊಹೆಯಂತೆ ಗುರುಗ್ರಹ ದೊಳಗೆ ಲೋಹ ಮತ್ತು ಶಿಲಾಮಯವಾದ ತಿರುಳು, ಅದರ ಮೇಲೆ ಬರ್ಫದ ಕವಚ, ಅದರ ಮೇಲೆ ಅನಿಲಗಳ ದಪ್ಪನ್ನ ಮುಸುಕು—ಹೀಗಿರ ಬೇಕು.

ಗುರುಗ್ರಹದ ಮೇಲ್ಭಾಗದ ಉಷ್ಣತೆಯನ್ನು ವಿಜ್ಞಾನಿಗಳು ಅಳೆದಿದ್ದಾರೆ. ಅದು—೨೦೦° ಫೆರ ನ್ಹೈಟನಷ್ಟಿದೆ. ಇಷ್ಟು ಚಳಿಯಲ್ಲಿ ಅಮೋನಿಯಾ ಅನಿಲವು ಗಟ್ಟಿಯಾಗುತ್ತದೆ. ಆದ್ದರಿಂದ ನಮ್ಮ ವಾತಾವರಣದ ಮೋಡಗಳಲ್ಲಿ ನೀರಿನ ಆಣೆ ಕಲ್ಲುಗಳು ತೇಲುತ್ತಿರುವಂತೆ ಗುರುವಿನ ವಾತಾ ವರಣದ ಮೇಲೆ ಅಮೋನಿಯದ ಆಣೆಕಲ್ಲುಗಳು ತೇಲುತ್ತಿರಬೇಕು.

ಡಾ. ಡಬ್ಲ್ಯೂ.ಆರ್.ರ‍್ಯಾಮ್ಸೆಯವರು ವೈಲ್ಡರ ಅಭಿಪ್ರಾಯವನ್ನೊಪ್ಪುವುದಿಲ್ಲ. ಗುರುವಿನಲ್ಲಿ ಹೆಚ್ಚು ಭಾಗ ಜಲಜನಕವೇ ಇದೆಯೆಂದು ಅವರ ಅಭಿಪ್ರಾಯ. ಇದು ನಿಜವಾದರೆ ಗುರುವಿನ ಕೇಂದ್ರದಲ್ಲಿರುವ ಜಲಜನಕವು ಅಸಹನೀಯ ಒತ್ತಡಕ್ಕೊಳಪಟ್ಟು ಅನಿಲದ ಬದಲು ಲೋಹ ದಂತೆ ವರ್ತಿಸುತ್ತಿರಬಹುದು.

ಈ ಎರಡು ಅಭಿಪ್ರಾಯಗಳಲ್ಲಿ ಯಾವುದು ಸರಿಯೆಂದು ಹೇಳುವುದು ಕಷ್ಟ. ಎರಡರ ಲ್ಲೊಂದು ಸರಿಯಾಗಿರಬಹುದು. ಏನಿದ್ದರೂ ಗುರು ಗ್ರಹದ ರಚನೆ ನಮ್ಮ ಭೂಮಿಯಂತಿಲ್ಲ. ಅಲ್ಲಿನ ಸ್ಥಿತಿಗತಿಗಳಲ್ಲಿ ಯಾವ ತರದ ಜೀವವೂ ಇರುವುದು ಅಸಾಧ್ಯವೇ ಸೈ.

೨೦ನೇ ಶತಮಾನದ ಪ್ರಾರಂಭದ ವರೆಗೂ ಗುರುಗ್ರಹವು ಸ್ವಲ್ಪ ಮಟ್ಟಿಗೆ ಸ್ವಯಂಪ್ರಕಾಶ ವಾದ ಗ್ರಹವೆಂದೂ ಇತರ ಗ್ರಹಗಳಂತೆ ಅದು ಸೂರ್ಯನ ಪ್ರಕಾಶದಿಂದಲೇ ಹೊಳೆಯುತ್ತಿ ಲ್ಲೆಂದೂ ಭಾವಿಸಿದ್ದರು. ಆದರೆ ಈಗ ಗುರುವೂ ನಮ್ಮ ಭೂಮಿಯಷ್ಟೇ ಪ್ರಕಾಶರಹಿತ ಗ್ರಹ ವೆಂದು ಖಂಡಿತವಾಗಿದೆ.

ದುರ್ಬೀನಿನಿಂದ ಗುರುಗ್ರಹವನ್ನು ನೋಡು ವುದು ತುಂಬ ಕೌತುಕದ ಕೆಲಸ. ಅದು ನಸು ಹಳದಿ ಬಣ್ಣದ ಗ್ರಹ. ಅದರ ಮುಖದ ಮೇಲೆ ಅಡ್ಡಕ್ಕೆ ನೇರವಾಗಿ ಮೋಡದ ರೇಷೆಗಳು ಹಬ್ಬಿ ಗುರುವೇನು ಭಸ್ಮಧಾರಿಯೋ ಎನಿಸುವಂತೆ ಮಾಡಿವೆ. ಮೊದಲ ನೋಟಕ್ಕೆ ಇವು ಕಪ್ಪನೆಯ ಕ್ರಮಬದ್ಧ ರೇಖೆಗಳಂತಿದ್ದರೂ ಸೂಕ್ಷ್ಮವಾಗಿ ನೋಡಿದಾಗ ಅಕ್ರಮವಾಗಿಯೇ ಕಾಣಿಸುವವು. ಕೆಲ ಭಾಗ ಹೆಚ್ಚು ಪ್ರಭೆಯನ್ನೂ ಕೆಲವು ಮಂದ ಪ್ರಕಾಶವನ್ನೂ ಬೀರುವುವಲ್ಲದೆ ಅಲ್ಲಲ್ಲಿ ಗಂಟು ಗಳು, ಬೊಟ್ಟುಗಳು, ಕೊಂಡಿಗಳು ಇರುವಂತೆ ಭಾಸವಾಗುತ್ತದೆ. ಇವು ಬದಲಾಗುತ್ತಲೇ ಇದ್ದರೂ ಕೆಲ ವೇಳೆ ಅನೇಕ ದಿನಗಳ ವರೆಗೆ ಏಕರೂಪವಾಗಿರುವುದುಂಟು.

ಗುರುವಿನ ಮುಖದ ಮೇಲೆ ಅನೇಕ ಬೊಟ್ಟು ಗಳಿದ್ದರೂ ಹಲ ವರ್ಷಗಳಿಗೊಮ್ಮೆ ಕಾಣಿಸಿ ಕೊಳ್ಳುವ “ ಮಹಾ ರಕ್ತಬಿಂದು ” ಎಲ್ಲಕ್ಕಿಂತ ಮಹತ್ವದ್ದು. ೧೮೭೮ರಲ್ಲಿ ನಸುಗೆಂಪಾಗಿ ಉದ ಯಿಸಿದ ಈ ಬಿಂದುವು ಬರಬರುತ್ತ ಕಡು ಕೆಂಪಾ ಯಿತಲ್ಲದೆ ೩೦,೦೦೦ ಮೈಲುದ್ದ ೭,೦೦೦ ಮೈಲು ಅಗಲದ ಪ್ರದೇಶವನ್ನು ಆವರಿಸಿತು. ಮುಂದೆ ಗುರು ಮುಖದ ಈ ಅಡ್ಡ ಕುಂಕುಮ ೧೮೯೦ ರಷ್ಟಕ್ಕೆ ಮಸಕಾಗುತ್ತ ಹೋಗಿ ಕೊನೆಗೆ ಕಂದು ಬಣ್ಣ ಧರಿಸಿತು. ೧೯೩೬ರಲ್ಲಿ ಮತ್ತೆ ಈ ಸಿಂಧೂರ ಬಿಂದು ಕಾಣಿಸಿಕೊಂಡಿತು. ಈಗ ಅದು ಮತ್ತೆ ಕಂದಾಗಿ ಹೋಗಿದೆ.

ಈ ಬೊಟ್ಟು ಒಂದೇ ಸ್ಥಳದಲ್ಲಿ ಇರುವುದಿಲ್ಲ. ಮೇಲೂ ಕೆಳಗೂ ಸುಮಾರು ೨೦,೦೦೦ ಮೈಲು ಗಳ ವರೆಗೆ ಚಲಿಸುತ್ತದೆ. ಬಹುಶಃ ವಾತಾ ವರಣದಲ್ಲಿ ತೇಲುವ ಘನಪದಾರ್ಥವಿದಾಗಿರಬ

ಹುದೆಂದು ಪರಿಶೀಲಕರು ಅಭಿಪ್ರಾಯಪಡುತ್ತಾರೆ. ಗುರುವಿನ ಮೇಲೆ ಕಾಣಿಸುವ ಇತರ ಕಲೆಗಳು ಕೆಲ ದಿನ ಇಲ್ಲವೆ ತಿಂಗಳುಗಳೊಳಗೆ ಮಾಯವಾಗಿಬಿಡುವಂಥವು.

ಈ ಗೆರೆಗಳು ಮತ್ತು ಬೊಟ್ಟುಗಳು ಹೇಗೆ ಉಂಟಾಗಿರಬಹುದೆಂಬುದು ಬರಿ ಊಹಾ ಪ್ರಪಂಚಕ್ಕೆ ಸೇರಿದ ಮಾತು. ಗುರು ಗ್ರಹದಲ್ಲಿದ್ದ ಪ್ರಚಂಡಜ್ವಾಲಾಮುಖಿಗಳ ಉತ್ಪಾತ ಇದಕ್ಕೆ ಕಾರಣವೆಂದು ಕೆಲವರನ್ನುತ್ತಾರೆ. ಆದರೆ ಗುರುವಿನ ಗರ್ಭದಲ್ಲೇನಿದೆಯೆಂದರಿಯದೆ ಊಹೆಗಳು ನಿರರ್ಥಕವೇ ಸೈ.

ಮಂಗಳನ ಮೇಲೆ ಇಳಿಯಲು ನಾವು ಭೂಮಿಜಾತರು ಆಶಿಸುತ್ತೇವೆ. ಆದರೆ ಗುರುವಿನ ಮೇಲೆ ಇಳಿಯುವ ಯೋಚನೆ ಮಾತ್ರ ಯಾರಿಗೂ ಇಲ್ಲ. ಅಲ್ಲಿನ ವಿಷಗಾಳಿ, ಆ ಅಸಾಧ್ಯ ಚಳಿ, ಇವು ಅಂತಿರಲಿ; ಅಲ್ಲಿ ಒಮ್ಮೆ ಇಳಿದರೆ ತಿರುಗಿ ಬರುವುದು ಅಶಕ್ಯವೇ. ಭೂಮಿಯನ್ನು ಬಿಟ್ಟು ಹಾರಿ ಹೋಗಲು ಸೆಕಂದಿಗೆ ೭ ಮೈಲು ವೇಗ ಸಾಕು; ಅದೇ ನಮಗೆ ಇನ್ನೂ ಸಾಧಿಸದಾಗಿದೆ. ಗುರುವಿನಿಂದ ಹೊರಗೆ ಹಾರಬೇಕಾದರೆ ಸೆಕಂದಿಗೆ ೩೭ ಮೈಲು ವೇಗ ಬೇಕು. ಇದನ್ನು ಹೇಗೆ ಸಾಧಿಸುವುದು? ಸಾಲದ್ದಕ್ಕೆ ಇಲ್ಲಿ ೧೦೦ ಪೌಂಡು ತೂಗುವ ಕೃಶಜೀವಿಯು ಅಲ್ಲಿ ಹೋದರೆ ೨೫೭ ಪೌಂಡು ಭಾರದ "ಗಾಮಾ" ಆಗಿಬಿಡುವುದರಿಂದ ತಾನೇ ತನ್ನನ್ನು ಹೊರಲಾರದವನಾಗುತ್ತಾನೆ.

ಗುರು ಗ್ರಹದ ಹತ್ತಿರ ಹೋಗಿ ನೋಡಬೇಕೆಂದಿದ್ದರೆ ಅದರ ಸುತ್ತ ತಿರುಗುವ ಒಂದು "ಚಂದ್ರ"ನ ಮೇಲೆ ಇಳಿಯುವುದು ಸುಖ. ಗುರುವಿಗೆ ಭೂಮಿಯಂತೆ ಒಂದು ಚಂದ್ರನಲ್ಲ ನಾಲ್ಕು ದೊಡ್ಡ ಚಂದ್ರರಿದ್ದಾರೆ. ೧೬೧೦ರಲ್ಲಿ ಗೆಲಿಲಿಯೋ ತನ್ನ ದುರ್ಬೀನಿನಲ್ಲಿ ಮೊದಲು ಇವುಗಳನ್ನು ಕಂಡು ಕಾಲಿಸ್ಟೊ, ಗನಿಮೀಡ್, ಅಯೋ ಮತ್ತು ಯುರೋಪಾ ಎಂದು ಹೆಸರಿಟ್ಟನು.

ಚಿಕ್ಕ ದುರ್ಬೀನಿನಲ್ಲಿ ಕೂಡ ಈ ಉಪಗ್ರಹಗಳನ್ನು ಕಾಣಬಹುದು. ಕೆಲವರು ಬರಿಗಣ್ಣಿಂದಲೂ ಕಂಡಿದ್ದಾರೆ. ಇವುಗಳಲ್ಲಿ ಮೊದಲ ಮೂರು ನಮ್ಮ ಚಂದ್ರನಿಗಿಂತ ದೊಡ್ಡವು; ಯುರೋಪಾ ಮಾತ್ರ ಸಣ್ಣದು.

ಅಯೋ ಎಂಬುದು ಗುರುಗ್ರಹಕ್ಕೆ ಅತಿ ಹತ್ತಿರ, ಕೇವಲ ೨,೬೨,೦೦೦ ಮೈಲು (ನಮ್ಮ ಭೂಮಿಯಿಂದ ಚಂದ್ರನಿರುವಷ್ಟೇ ಅನ್ನಿರಿ) ದೂರದಲ್ಲಿದೆ. ಅದರ ಗಾತ್ರವೂ (ವ್ಯಾಸ ೨,೩೧೦ ಮೈಲು) ಚಂದ್ರನಿಗಿಂತ ತುಸು ಹೆಚ್ಚು. ಆದರೆ ಗುರುವಿನ ಪ್ರಚಂಡ ಗುರುತ್ವಾಕರ್ಷಣೆಯ ದೆಸೆಯಿಂದ ಈ ಉಪಗ್ರಹವು ಕೇವಲ ೧ ದಿನ ೧೮॥ ತಾಸುಗಳಲ್ಲಿ ಗುರುವಿಗೆ ಒಂದು ಸುತ್ತು ಬರುತ್ತದೆ. ನಮ್ಮ ಭೂಮಿಯ ಚಂದ್ರ ೨೮ ದಿನಗಳಿಗೊಂದು ಸುತ್ತು ಬರುವ ಮಂದಗಾಮಿ.

ಯುರೋಪಾ ಅತಿ ಚಿಕ್ಕದಾದರೂ (ವ್ಯಾಸ ೧,೯೫೦ ಮೈಲು) ನಮ್ಮ ಚಂದ್ರನಷ್ಟೇ ತಳತಳಿಸುವ ಉಪಗ್ರಹ. ಸೂರ್ಯಪ್ರಭೆಯನ್ನು ಬಹಳ ಮಟ್ಟಿಗೆ ಪ್ರತಿಬಿಂಬಿಸಬಲ್ಲ ಗಾಜಿನಂಥ ಪದಾರ್ಥ ಈ ಉಪಗ್ರಹವನ್ನು ಮುಚ್ಚಿರುವುದರಿಂದಲೇ ಅದು ಇಷ್ಟು ಉಜ್ವಲವಾಗಿ ಕಾಣುತ್ತಿರಬೇಕು.

೩,೨೦೦ ಮೈಲು ವ್ಯಾಸವುಳ್ಳ ಗನಿಮೀಡ್ ಗುರುವಿನ ಉಪಗ್ರಹಗಳಲ್ಲಿ ಅತ್ಯಂತ ಪ್ರಕಾಶಮಾನವಾದುದು. ಅದು ನೋಡಲು ಬುಧಗ್ರಹಕ್ಕಿಂತ ದೊಡ್ಡದಾದರೂ ತೂಕದಲ್ಲಿ ಅಯೊಕ್ಕಿಂತ ಒಂದುವರೆ ಪಟ್ಟುಮಾತ್ರ ಇದೆ. ನೋಡಲು ಮತ್ತು ಗಾತ್ರದಲ್ಲಿ ಅದು ಮಂಗಳನಂತೆ ಕಂಡರೂ ಅದರಲ್ಲಿ ಚಳಿ ವಿಪರೀತವಾಗಿದೆಯಲ್ಲದೆ ಗಾಳಿಯೇ ಇಲ್ಲದಿರುವದರಿಂದ ಯಾವ ಜೀವವೂ ಅಲ್ಲಿರಲಾರದು.

ಎಲ್ಲಕ್ಕಿಂತ ದೊಡ್ಡ ಕಾಲಿಸ್ಟೋ (ವ್ಯಾಸ ೩,೨೨೦ ಮೈ) ಉಪಗ್ರಹ ಎಲ್ಲಕ್ಕಿಂತ ಹಗುರವಾಗಿದೆ. ಅದರ ತೂಕ ನಮ್ಮ ಚಂದ್ರನ ಅರ್ಧದಷ್ಟು ಮಾತ್ರ ಇದೆ. ಗುರುವಿನ ಉಪಗ್ರಹಗಳ ವೈಶಿಷ್ಟ್ಯವೆಂದರೆ ಅವುಗಳಲ್ಲಿ ಗುರುವಿಗೆ ಹತ್ತಿರವಾಗಿರುವವು ಒಂದು ದಿಕ್ಕಿಗೆ ಚಲಿಸುತ್ತಿದ್ದರೆ ದೂರವಾಗಿರುವವು ವಿರುದ್ಧ ದಿಕ್ಕಿಗೆ ತಿರುಗುವುದು.

ಈ ನಾಲ್ಕು ಮುಖ್ಯ "ಚಂದ್ರ" ರಲ್ಲದೆ ಬೇರೆ ಎಂಟು ಚಿಕ್ಕ ಉಪಗ್ರಹಗಳು ಗುರುವಿಗೆ ಪ್ರದಕ್ಷಿಣೆ ಹಾಕುತ್ತಿವೆ. ದೊಡ್ಡ ದುರ್ಬೀನಿಗೆ ಮಾತ್ರ ಕಾಣಿಸುವ ಇವುಗಳಿಗೆ ಇನ್ನೂ ನಾಮಕರಣ ವಿಲ್ಲ. ಐದನೆಯ ಉಪಗ್ರಹಕ್ಕೊಂದಕ್ಕೇ ಅಮಾಲ್ತೀ ಎಂದು ಹೆಸರಿಟ್ಟಿದ್ದಾರೆ.

ಅಮಾಲ್ತಿ ಗುರುವಿನಿಂದ ೭೦,೦೦೦ ಮೈಲು ದೂರದಲ್ಲಿದ್ದು ಎಲ್ಲಕ್ಕೂ ಹತ್ತಿರದ ಉಪಗ್ರಹವಾಗಿದೆ. ಅದರ ವ್ಯಾಸ ಬರಿ ೧೫೦ ಮೈಲು. ೧೨ ತಾಸಿನಲ್ಲಿ ಅದು ಗುರುವಿಗೊಂದು ಪ್ರದಕ್ಷಿಣೆ ಹಾಕುತ್ತದೆ. ಅದರ ಮೇಲೆ ನಿಂತರೆ ಗುರುವು ನಿಜವಾಗಿ ಅದ್ಭುತವಾಗಿ ಕಾಣಿಸುವುದು. ಅಲ್ಲಿಂದ ಗುರುವು ದೃಶ್ಯ ಆಕಾಶದ ಕಾಲುಭಾಗವನ್ನು ಮುಚ್ಚಿದಂತೆ ತೋರುವುದು. ಗುರುವಿನ ಮೇಲಣ ಎಲ್ಲ ಮೇಘಗಳೂ ಪಟ್ಟಿಗಳೂ ಬಿಂದುಗಳೂ ಅಲ್ಲಿ ಎದ್ದು ಕಾಣುವವು. ಭವಿಷ್ಯತ್ಕಾಲದಲ್ಲಿ ಎಂದಾದರೂ ಮಾನವನು "ಅಮಾಲ್ತಿ" ಯ ಮೇಲಿಳಿದು ಈ ಗುರುಗಂಭೀರ ದೃಶ್ಯವನ್ನು ನಕ್ಷತ್ರ ಖಚಿತ ಆಕಾಶದ ಹಿನ್ನೆಲೆಯಲ್ಲಿ ನೋಡಬಹುದೇನೋ. ಅದನ್ನು ನೋಡಲು ೪೦ ಕೋಟಿ ಮೈಲು ಪ್ರಯಾಣ ಮಾಡುವುದು ಸಾರ್ಥಕವಾದ ಸಾಹಸವೇ.

ಆದರೆ ಅನೇಕ ತಲೆಮಾರುಗಳ ವರೆಗೆ ನಾವು ಇದರ ಕನಸು ಕಾಣಬೇಕಷ್ಟೇ. ಅಷ್ಟು ದೂರ ಹೋಗಿ ಬರಲು ಏನಿಲ್ಲೆಂದರೂ ಆರೇಳು ವರ್ಷ ಬೇಕು. ಎಂದಾದರೂ ಇದು ಸಾಧ್ಯವಾದೀತೇ ಎಂಬುದೂ ಸಂಶಯಾಸ್ಪದ. ಆದರೆ ಆ ವರೆಗೆ ಗುರುವಿನ ಮುಸುಕಿನಾಚೆಗೇನಿದೆಯೆಂಬ ಸಮಸ್ಯೆಗೆ ಉತ್ತರ ದೊರೆಯುವುದೂ ಸಾಧ್ಯವಿಲ್ಲ. ಆ ಪ್ರಚಂಡ ಗ್ರಹದ ಭವ್ಯ ರೂಪ, ಬಲು ದೊಡ್ಡ ಸಂಸಾರ ಇವುಗಳನ್ನು ನೋಡಿಯೇ ಸಮಾಧಾನ ಹಚ್ಚಿಕೊಳ್ಳಬೇಕಷ್ಟೇ.



## ಸಮರ್ಪಕ ಉತ್ತರ

ಆ ದಿನ ಕೋರ್ಟಿನಲ್ಲಿ ಜನ ಕಿಕ್ಕಿರಿದು ನೆರೆದಿತ್ತು. ಅಂದು ಪ್ರಸಿದ್ಧ ವ್ಯಕ್ತಿಯೊಬ್ಬನು ಅಪರಾಧಿಯ ಸ್ಥಾನದಲ್ಲಿದ್ದ. ಆತ ತನ್ನ ಪರವಾಗಿ ಮುಂಬಯಿಯಿಂದ ಬ್ಯಾರಿಸ್ಟರನನ್ನು ಕರೆಯಿಸಿದ್ದ. ದಿನಕ್ಕೆ ೧೫೦೦ ರೂ.ಗಳನ್ನು ತೆಗೆದುಕೊಳ್ಳುವ ಆತನ ಮುಖಾವಲೋಕನವನ್ನಾದರೂ ಮಾಡೋಣ ಎಂದು ಎಲ್ಲರೂ ಆತನ ಆಗಮನಕ್ಕಾಗಿ ಕಾದಿದ್ದರು. ಕೇಸು ವಿಚಾರಣೆಗಾರಂಭವಾಯಿತು. ಎಲ್ಲರೂ ತಮ್ಮ ತಮ್ಮ ಸ್ಥಳಗಳನ್ನಲಂಕರಿಸಿದರು. ಬ್ಯಾರಿಸ್ಟರ ತನ್ನ ಸ್ಥಳದ ಮೇಲೆ ಕುಳಿತ. ಕೋರ್ಟು ಸ್ತಬ್ಧವಾಯಿತು. ಸಾಕ್ಷಿಗಳು ತಮ್ಮ ಹೇಳಿಕೆಗಾರಂಭಿಸಿದರು. ಹೀಗಿರುವಾಗ ಬ್ಯಾರಿಸ್ಟರ ಎದ್ದು ನಿಂತು ಗಂಭೀರ ಭಾವದಿಂದ ಸಾಕ್ಷಿಯೊಬ್ಬನನ್ನು ಕುರಿತು ಪ್ರಶ್ನಿಸಲಾರಂಭಿಸಿದ. ಆತ ಕೇಳಿದ—

"ನೀವು ಅಪರಾಧಿಯ ಮನೆಗೆ ಹೋದೊಡನೆ ಏನು ಮಾಡಿದಿರಿ?"

ಸಾಕ್ಷಿ ಅವನಿಗಿಂತ ಗಂಭೀರನಾಗಿ ಹೇಳಿದ— "ಚಪ್ಪಲು ಕಳಚಿದೆ."

ಇಡೀ ಕೋರ್ಟಿಗೆ ಕೋರ್ಟೇ ಗೊಳ್ಳೆಂದಿತು.

—ವೆಂಕಟರಮಣ, ಬೆಳಗಾಂವಿ.

# ಆಳವಾಗಿ ಉಸಿರಾಡಿಸಿರಿ

**ಆರೋಗ್ಯಕ್ಕೆ, ಮನೋಧೈರ್ಯಕ್ಕೆ, ಸೌಂದರ್ಯಕ್ಕೆ**
**ಅದೊಂದು ದಾರಿಗಂಬ**

ಸರಿಯಾಗಿ ಉಸಿರಾಡಿಸಿರಿ—ಅಂದರೆ ಆರೋಗ್ಯವಂತರಾಗುವಿರಿ, ಸುಂದರಾಂಗರಾಗುವಿರಿ, ನೆಟ್ಟಗೆ ನಿಲ್ಲುವಿರಿ, ನೆಟ್ಟಗೆ ಮಾತಾಡುವಿರಿ, ನೆಟ್ಟಗಿರುವಿರಿ. ಇದು ಎಲ್ಲರೂ ಒಪ್ಪಿದ ಮಾತು.

ಭಾರತೀಯರು ಮೊದಲಿನಿಂದಲೂ ಸರಿಯಾಗಿ ಉಸಿರಾಡಿಸುವ ಮಹತ್ವವನ್ನು ಅರಿತಿದ್ದರು. ಪ್ರಾಣಾಯಾಮವು ಸರಿಯಾಗಿ ಉಸಿರಾಡಿಸುವ ಪ್ರಾಥಮಿಕ ಸಾಧನೆಯಾಗಿದೆ. ಚೆನ್ನಾಗಿ ಉಸಿರಾಡಿಸಬಲ್ಲವನು ಚೆನ್ನಾಗಿ ಬಾಳಬಲ್ಲನು ಎಂದು ನಮ್ಮ ಹಿರಿಯರು ಹೇಳಿದ್ದಾರೆ.

ಶ್ವಾಸೋಚ್ಛ್ವಸದ ಮಹಿಮೆ ಇಲ್ಲಿಗೇ ನಿಲ್ಲಲಿಲ್ಲ. ನಿಮ್ಮ ದನಿಯ ಹಿರಿಮೆ ನಿಮ್ಮ ಉಸಿರಾಟವನ್ನೇ ಅವಲಂಬಿಸುತ್ತದೆ. ಇದು ಕಂಠತಜ್ಞರ ಖಚಿತಾಭಿಪ್ರಾಯ. ನಿಮ್ಮನಿಲುವಿಕೆಗೆ ಗಾಂಭೀರ್ಯ ಬರಬೇಕಾದರೆ ನಿಮ್ಮ ಶ್ವಾಸಕೋಶಗಳನ್ನು ತುಂಬಿಕೊಳ್ಳಬೇಕೆಂಬುದು ವ್ಯಾಯಾಮ ತಜ್ಞನ ಪ್ರಥಮ ಪಾಠ. ನಿಮ್ಮ ಸೌಂದರ್ಯ ವೃದ್ಧಿಯಾಗಬೇಕೆಂದಿದ್ದರೆ ನಿತ್ಯ ಮಾಲೀಸು ಮಾಡಿಸಿಕೊಳ್ಳಬೇಕಾಗಿಲ್ಲ; ಸರಿಯಾಗಿ ಉಸಿರಾಡಿಸುವ ಅಭ್ಯಾಸ ಮಾಡಿದರೆ ದೇಹದ ಅಂಗಾಂಗಗಳಲ್ಲಿ ರಕ್ತ ಪ್ರವಾಹ ಹೆಚ್ಚಾಗಿ ತೇಜಸ್ವಿಗಳಾಗುತ್ತೀರಿ ಎಂದು ಸೌಂದರ್ಯತಜ್ಞರು ಹೇಳುತ್ತಾರೆ.

ಮನಶ್ಶಾಸ್ತ್ರಜ್ಞನೂ ಅದನ್ನೇ ಹೇಳುತ್ತಾನೆ: ಆಳವಾಗಿ ಉಸಿರಾಡಿಸದೆ ಇರುವವರು ಅಳ್ಳೆದೆಯವರಾಗುವರು; ನೈಚ್ಯಾನುಸಂಧಾನಕ್ಕೆ ಅದೂ ಒಂದು ಕಾರಣವಾಗುತ್ತದೆ. ಡಾಕ್ಟರರಂತೂ ಉಸಿರಾಡಿಸುವುದೇ ಜೀವನದ ಪ್ರಥಮ ಕ್ರಿಯೆಯೆಂದು ಹೇಳಿಯೇ ಹೇಳುವರು.

ಆದರೆ ನಮ್ಮಲ್ಲನೇಕರು ಬದುಕಲು ಬೇಕಷ್ಟು ಉಸಿರಾಡಿಸುತ್ತಾರೆಯೇ ಹೊರತು ಸತ್ವಯುತರಾಗಿ ಬಾಳಲು ಬೇಕಾದಷ್ಟು ಉಸಿರಾಡಿಸುವುದಿಲ್ಲ; ಅರೆಹೊಟ್ಟೆಯ ಮೇಲೆ ಬದುಕುವವರಂತೆ ನಮ್ಮ ಸ್ಥಿತಿ ಇರುತ್ತದೆ. ಹಲಕೆಲವರಿಗಂತೂ ಒಮ್ಮೆಲೇ ಆಳವಾಗಿ ಉಸಿರಾಡಿಸಿದರೆ ತಲೆ ತಿರುಗುವಂತಾಗುತ್ತದೆ—ಅರೆ ಉಪವಾಸದಲ್ಲಿದ್ದವನು ಕಂಠಪೂರ್ಣ ಭೋಜನವಾದಾಗ ಸುಸ್ತಾಗುವ ಹಾಗೆ.

ನಮ್ಮಲ್ಲಿ ಬಹುಜನರು ಉಸಿರಾಡಿಸುವಾಗ ಶ್ವಾಸಕೋಶದ ಮೇಲ್ಭಾಗವನ್ನಷ್ಟೇ ತುಂಬಿಕೊಳ್ಳುತ್ತೇವೆ. ಎದೆಯ ಅರ್ಧದ ವರೆಗಷ್ಟೇ ಶ್ವಾಸಕೋಶ ಇರುತ್ತದೆಂಬ ಭಾಸ ಇದರಿಂದ ನಮಗಾಗುವುದು. ಆದರೆ ನಿಜವಾಗಿ ಶ್ವಾಸಕೋಶಗಳು ಎದೆಯ ಎರಡೂ ಪಕ್ಕಗಳಲ್ಲಿ ಕೆಳಗೆ ಪಕ್ಕೆಲುಬುಗಳ ಕೊನೆಯ ವರೆಗೂ ಇಳಿದಿರುತ್ತವೆ. ಈ ಕೆಳಭಾಗ ತುಂಬುವಂತೆ ಉಸಿರಾಡಿಸುವ ಅಭ್ಯಾಸವಿಟ್ಟುಕೊಳ್ಳದ ಹೊರತು, ನಮಗೆ ಅಲ್ಪಾಯುಷ್ಯದ ಭಯ ತಪ್ಪಿದ್ದಲ್ಲ; ನಾವು ತೇಜಸ್ವಿಗಳಾಗಿ, ಕಾಂತಿಯುಕ್ತರಾಗಿ ಬಾಳುವ ಸಂಭವವೂ ಕಡಿಮೆ.

ಕೆಲವರ ದನಿ ಗಂಭೀರವೂ ಮನೋಹರವೂ ಆಗಿರುವಾಗ ಇತರರ ದನಿ ನಿರ್ವಿಶೇಷವಾಗಿರುವುದೇಕೆಂಬ ಪ್ರಶ್ನೆ ನಿಮ್ಮ ಮನದಲ್ಲಿ ಉದ್ಭವಿಸಿರಬಹುದು. ಇದಕ್ಕೆ ಅವರವರ ಉಸಿರಾಟದಲ್ಲೇ

ಉತ್ತರವಿದೆ. ಆಳವಾಗಿ ಉಸಿರೆಳೆದುಕೊಳ್ಳುವವನ ದನಿಯೂ ಗಂಭೀರವಾಗಿರುತ್ತದೆ. ಹಗುರಾಗಿ ಉಸಿರಾಡಿಸುವವನ ದನಿಯಲ್ಲಿ ಲಘುತ್ವ, ನೀರಸತ್ವ, ಕೀರಲುತನ ಬಂದುಬಿಡುತ್ತದೆ.

ನಿಮ್ಮ ಮನಸ್ಸನ್ನು ಹಿಡಿತದಲ್ಲಿಟ್ಟುಕೊಳ್ಳಲು ಉಸಿರಾಟ ನೆರವಾಗಬಲ್ಲದು. ತಡೆಯಲಾರದ ಸಿಟ್ಟು ಬಂದಾಗ, ಅಥವಾ ಅಪಧೈರ್ಯ ನಿಮ್ಮನ್ನಾವರಿಸಿದಾಗ, ಇಲ್ಲವೆ ಮನಸ್ಸು ಉತ್ತೇಜಿತವಾದಾಗ ಆಳವಾಗಿ ಉಸಿರೆಳೆದುಕೊಳ್ಳಿರಿ. ನಿಮ್ಮ ಮನಸ್ಸು ತಾನಾಗಿ ಶಾಂತವಾಗುವುದನ್ನು ನೋಡುವಿರಿ.

ಸಭಾಕಂಪದಿಂದ ನಿಮಗೆ ಭಾಷಣ ಮಾಡುವಾಗ ನಾಲಿಗೆ ಏಳದಂತಾದರೆ ಒಮ್ಮೆ ಆಳವಾಗಿ ಉಸಿರಾಡಿಸಿರಿ ; ನಿಮ್ಮ ಧೈರ್ಯ ಮರಳುವುದು. ಮೊದಲನೇ ಬಾರಿ ರಂಗಕ್ಕೆ ಬಂದ ನಟನಟಿಯರೂ ಸಂಗೀತಗಾರರೂ ಗಾಢವಾಗಿ ಶ್ವಾಸವನ್ನೆಳೆದುಕೊಂಡಾಗ ಮೈನಡುಕ ಕಡಿಮೆಯಾಗುವುದೆಂದು ಅನುಭವದಿಂದ ಕಂಡುಕೊಂಡಿದ್ದಾರೆ.

ಆಳವಾಗಿ ಉಸಿರೆಳೆದುಕೊಂಡು ಶ್ವಾಸಕೋಶವನ್ನು ತುಂಬಿಕೊಳ್ಳುವವರು ನೆಟ್ಟಗೆ ನಿಲ್ಲುತ್ತಾರೆ. ಕುಗ್ಗಿದ ಎದೆಯನ್ನು ಸರಿಪಡಿಸಲು ಶ್ವಾಸೋಚ್ಛ್ವಾಸ ಸಾಧನೆ ಮೊದಲನೇ ಕ್ರಮವಾಗಿದೆ.

ವಿಮೆಗಾಗಿ ಆರೋಗ್ಯ ಪರೀಕ್ಷೆ ಮಾಡುವ ಡಾಕ್ಟರರು ಉಸಿರುಬಿಟ್ಟಾಗೊಮ್ಮೆ ಉಸಿರೆಳೆದುಕೊಂಡಾಗೊಮ್ಮೆ ನಿಮ್ಮ ಎದೆಯ ಸುತ್ತಳತೆ ತೆಗೆದುಕೊಳ್ಳುವುದು ಸುಮ್ಮನಲ್ಲ. ಅಲ್ಲಿ ನಿಮ್ಮ ಆರೋಗ್ಯದ, ನಿಮ್ಮ ಆಯುಷ್ಯದ ಕಲ್ಪನೆ ಅವರಿಗೆ ದೊರೆಯುತ್ತದೆ. ಈ ಎರಡು ಅಳತೆಗಳ ಅಂತರ ಹೆಚ್ಚಾಗಿದ್ದರೆ ನಿಮ್ಮ ಭವಿಷ್ಯ ಚೆನ್ನಾಗಿದೆಯೆಂದರ್ಥ.

ಸರಿಯಾಗಿ ಉಸಿರಾಡಿಸುವುದು ಹೇಗೆ? ನೀವು ಉಸಿರೆಳೆದುಕೊಂಡಾಗ ಎದೆ–ಹೊಟ್ಟೆಗಳ ಮುಂಭಾಗ ಮಾತ್ರ ತುಂಬಿಕೊಂಡು ಉಬ್ಬಿದರೆ ಸಾಲದು. ಎದೆ, ಹೊಟ್ಟೆ, ಪಕ್ಕಗಳು, ಬೆನ್ನು ಇವೆಲ್ಲವೂ ಉಬ್ಬಿದರೆನೇ ಅದು ಸರಿಯಾದ ಉಸಿರಾಟವೆನ್ನಬೇಕು. ನೀವು ಸರಿಯಾಗಿ ಉಸಿರೆಳೆದುಕೊಳ್ಳುತ್ತಿರೋ ಇಲ್ಲವೋ ಎಂದು ನೋಡಲು ಈ ಕೆಳಗಿನ ಕ್ರಮವನ್ನು ಅನುಸರಿಸಬಹುದು. ಕಿಬ್ಬೊಟ್ಟೆಯ ಪಕ್ಕಗಳಲ್ಲಿ ನಿಮ್ಮ ಎರಡೂ ಕೈಗಳನ್ನು ಹೆಬ್ಬೆರಳುಗಳು ಮುಂದಿರುವ ಹಾಗೆ ಇರಿಸಿಕೊಳ್ಳಿರಿ. ನಿಮ್ಮ ನಡುಬೆರಳುಗಳು ಬೆನ್ನಹಿಂದೆ ಒಂದಕ್ಕೊಂದು ತಗಲುವಂತಿರಲಿ. ಈ ಭಂಗಿಯಲ್ಲಿ ನಿಂತು ಉಸಿರನ್ನು ಸಂಪೂರ್ಣ ಖಾಲಿ ಮಾಡಿರಿ. ನಿಮ್ಮ ಕೈಗಳು ಆದಷ್ಟು ಬಿಗಿಯಾಗಿ ನಡುವನ್ನು ಒತ್ತಿಹಿಡಿದಿರಲಿ. ಆ ಮೇಲೆ ಆಳವಾಗಿ ಉಸಿರೆಳೆದುಕೊಳ್ಳಿರಿ. ಈಗ ನಿಮ್ಮ ಬೆನ್ನಹಿಂದೆ ಸಂಧಿಸಿದ ಬೆರಳುಗಳು ಎಷ್ಟು ದೂರ ಬೇರ್ಪಡಿಸಲ್ಪಟ್ಟರೆ ಅಷ್ಟು ಒಳಿತು. ಉಸಿರೆಳೆದುಕೊಂಡಾಗ ಪಕ್ಕೆಲುಬುಗಳ ಹಿಂಭಾಗದ ವರೆಗೆ ಗಾಳಿ ತುಂಬಿತು ಎಂದು ನಿಮಗೆ ಭಾಸವಾದರೆ ನೀವು ಸರಿಯಾದ ರೀತಿಯಲ್ಲಿ ಉಸಿರಾಡಿಸುತ್ತಿದ್ದೀರೆಂದು ತಿಳಿದುಕೊಳ್ಳಬಹುದು.

ಸಾಮಾನ್ಯವಾಗಿ ಉಸಿರಾಡಿಸುವ ಕ್ರಿಯೆ ನಮಗರಿಯದಂತೆ ನಡೆಯುತ್ತಿರಬೇಕು. ಆದರೆ ನಿತ್ಯವೂ ಆಳವಾಗಿ ಉಸಿರಾಡಿಸುವ ವ್ಯಾಯಾಮವನ್ನು ಸ್ವಲ್ಪಹೊತ್ತು ಮಾಡಬೇಕು. ಹಗಲೆಲ್ಲ ಒಳಗೇ ಕೆಲಸ ಮಾಡುವ ಜನರಿಗೆ ಆಳವಾಗಿ ಉಸಿರಾಡಿಸುವ ವ್ಯಾಯಾಮದಿಂದ ಎಷ್ಟೋ ಮಟ್ಟಿಗೆ ಹುರುಪು ತುಂಬಿ ಬರಬಹುದು. ಅವಕಾಶವಾದಾಗೆಲ್ಲ ಬಯಲು ಹವೆಗೆ ಬಂದು ಹತ್ತುಹನ್ನೆರಡು ಸಲ ಆಳವಾಗಿ ಉಸಿರಾಡಿಸುವುದು ಒಳಿತು.

ನಾವು ಚಿಕ್ಕಮಕ್ಕಳಾಗಿದ್ದಾಗ ಸರಿಯಾಗಿಯೇ ಉಸಿರಾಡಿಸುತ್ತಿರುತ್ತೇವೆ. ನಿದ್ರಿಸುವಾಗಲೂ ಹಾಗೆಯೆ. ಆದರೆ ಬೆಳೆದು ದೊಡ್ಡವರಾದ ಮೇಲೆ ಅಥವಾ ಎಚ್ಚತ್ತ ಮೇಲೆ ನಮ್ಮ ಕುಸಂಸ್ಕಾರಗಳ ಫಲವಾಗಿ ನಮಗೆ ಸರಿಯಾದ ಕ್ರಮದಲ್ಲಿ ಉಸಿರಾಡಿಸಲಾಗುವುದಿಲ್ಲ. ಗಂಡಸರ ಎದೆಯನ್ನು ಹೊಟ್ಟೆಯಿಂದ ಪ್ರತ್ಯೇಕಿಸುವ ಭಿತ್ತಿಯು ( Diaphragm ) ಹೆಂಗಸರಿಗಿಂತ ಕೆಳಗಿರುವುದರಿಂದ ಗಂಡಸರ ಎದೆಯಲ್ಲಿ ಉಸಿರಾಟಕ್ಕೆ ಹೆಂಗಸರಿಗಿಂತ ಹೆಚ್ಚು ಎಡೆಯಿದೆ. ಗಂಡಸರ

ಗಡುಸುತನಕ್ಕೆ ಇದೂ ಒಂದು ಕಾರಣ. ಹೆಚ್ಚು ಪರಿಶ್ರಮದ ಕೆಲಸ ಮಾಡುವುದರಿಂದಲೂ ಆಳವಾಗಿ ಉಸಿರಾಡಿಸುವುದು ಅವರಿಗೆ ಸಹಜವಾಗಿರುತ್ತದೆ. ಹೆಂಗಸರಿಗೆ ಹೆಚ್ಚಾಗಿ ಆಳವಾಗಿ ಉಸಿರಾಡಿಸುವ ಅಭ್ಯಾಸವಿರುವುದಿಲ್ಲ.

ಒಮ್ಮೆ ಉಸಿರಾಡಿಸುವ ಸದೋಷ ರೀತಿ ಅಭ್ಯಾಸವಾಗಿ ಹೋದರೆ ಅದನ್ನು ಸರಿಪಡಿಸಲು ಒಳ್ಳೇ ಉಪಾಯವೆಂದರೆ, ನೆಲದ ಮೇಲೆ ಅಂಗಾತ ಮಲಗಿ ಚಿಂತೆಯನ್ನೆಲ್ಲ ಬದಿಗಿಟ್ಟು ಶ್ವಾಸಕೋಶ ಮತ್ತು ಶ್ವಾಸಾಂಗಗಳ ಸ್ನಾಯುಗಳಿಗೆ ತಮ್ಮ ನೈಸರ್ಗಿಕ ರೀತಿಯಿಂದ ಕೆಲಸ ಮಾಡಲು ಅವಕಾಶ ಕೊಡುವುದಾಗಿದೆ. ಪ್ರತಿದಿನ ಕೆಲ ಹೊತ್ತಾದರೂ ಹೀಗೆ ಮಾಡಿದರೆ ಕಾಲಾಂತರದಲ್ಲಿ ಅದು ಅಭ್ಯಾಸವಾಗಿ ನಿಂತಾಗಲೂ ಸರಿಯಾಗಿಯೇ ಉಸಿರಾಡಿಸಲು ಸಾಧ್ಯವಾಗುತ್ತದೆ.

ಪ್ರಾಣವಾಯು (ಆಮ್ಲ ಜನಕ) ನಮ್ಮ ಜೀವನದ ಆಧಾರವಾಗಿದೆ. ಅದಿಲ್ಲದಿದ್ದರೆ ನಾವು ಕೆಲ ನಿಮಿಷಗಳಲ್ಲೇ ಸಾಯುವೆವು. ಉಸಿರಾಟದ ಉದ್ದೇಶ ಈ ಪ್ರಾಣವಾಯುವನ್ನು ದೇಹಕ್ಕೆ ಒದಗಿಸುವುದೇ ಆಗಿದೆ. ನಾವು ಆಳವಾಗಿ ಉಸಿರಾಡಿಸಿ ಅಂಗಾಂಗಗಳಿಗೆ ಹೆಚ್ಚು ಪ್ರಾಣವಾಯುವಿನ ಪೂರೈಕೆಯಾಗುವಂತೆ ಮಾಡಿದಷ್ಟೂ ನಮ್ಮ ಮೈಯಲ್ಲಿ ಸತ್ವ ಉತ್ಸಾಹಗಳು ಅಧಿಕವಾಗುವುವು, ಮುಖದ ಕಳೆಯೇರುವುದು, ವರ್ತನೆ ಚುರುಕಾಗುವುದು.

ಮನಸ್ಸು ನಿರುಲ್ಲಾಸವಾಗಿದ್ದರೆ, ಮೈ ಬಸವಳಿದಿದ್ದರೆ, ಬುದ್ಧಿ ಓಡದಂತಾದರೆ ಆಳವಾಗಿ ಉಸಿರಾಡಿಸಿರಿ. ಅಂದರೆ ಹೊಸ ಹುರುಪು ಮೈದುಂಬಿ ಬರುವುದನ್ನು ನೋಡುವಿರಿ.



## ಭಾಷಾ ಸಮಸ್ಯೆ

ಒಂದು ದಿನ ನಾನು ನನ್ನ ಗೆಳೆಯನ ಮನೆಗೆ ಹೋಗಿದ್ದೆ. ಅವನ ತಂದೆ ಡಾಕ್ಟರರು ಆಗಲೇ ದವಾಖಾನೆಗೆ ಹೋಗಿದ್ದರಾದುದರಿಂದ ನಾವು ಚಾವಡಿಯಲ್ಲಿ ಕುಳಿತು ನಿರ್ಭಯವಾಗಿ ಹರಟುತ್ತಿದ್ದೆವು.

ಅಷ್ಟರಲ್ಲಿ ಒಬ್ಬ ಮುದುಕ ಬಂದು ಹಿಂದಿಯಲ್ಲಿ "ಡಾಕ್ಟರ ಹೈ ಕ್ಯಾ ಜೀ?" ಎಂದು ಕೇಳಿದ. ನನ್ನ ಗೆಳೆಯ ಹರಟೆಯ ಮಧ್ಯದಿಂದಲೇ "ದವಾಖಾನೆ ಗಯೇ ಹೈಂ" ಎಂದ.

ಸ್ವಲ್ಪ ಹೊತ್ತಾದೊಡನೆಯೇ ಆ ಮುದುಕ ತಿರುಗಿ ಬಂದು ಕೇಳಿದ: "ಅಭೀ ತಕ್ ನಹೀ ಆಯೇ. ಕಿತನೆ ದವಾ ಖಾತೆ ಹೈಂ ಜೀ?" ನನ್ನ ಗೆಳೆಯ ನಗು ನುಂಗಿಕೊಂಡು "ದವಾಖಾನೆ ಗಯೇ ಹೈ ಜೀ, ಜೋ ಬಾಜಾರ ಮೇ ಹೈ ನಾ?" ಎಂದ. ಮುದುಕ ನಗುತ್ತ "ಜೀ ಮೈ ಉಲಟಾ ಸಮಝಾ ಗಯಾ ಥಾ" ಎಂದುಕೊಂಡು ಹೊರಟುಹೋದ.

—ಕೆ. ಬಿ. ಮಲ್ಲಿಕಾರ್ಜುನ

ವಿಶ್ವನಾಥ ಸತ್ಯನಾರಾಯಣ



# ಮಾಕ್ಲಿ ದುರ್ಗದ ನಾಯಿ

## (ತೆಲುಗು ಕಥೆ)

'ಆಡಲು ವೇದಾಂತ, ತಿನ್ನಲು ಬದನೇಕಾಯಿ'—ಇದೇ ವ್ಯವಹಾರದಲ್ಲಿ ಕಾಣುವ ನೀತಿ.

ಗುಂತಕಲ್—ಬೆಂಗಳೂರು ರಸ್ತೆಯಲ್ಲಿ ಮಾಕಿ ದುರ್ಗವೆಂಬ ರೇಲ್ವೆ ನಿಲ್ದಾಣವಿದೆ. ಇದು ಬಹಳ ಚಿಕ್ಕನಿಲ್ದಾಣ. ನಿಲ್ದಾಣದ ಹೊರಗೆ ಸಣ್ಣ ಅಂಗಡಿಯೊಂದಿದೆ. ಗಾಡಿ ಬರುವ ಸಮಯವಾದಾಗ ಈ ಅಂಗಡಿ ತೆರೆಯಲ್ಪಡುತ್ತದೆ. ಅಂಗಡಿ ತೆರೆಯಿತು ಅನ್ನುವಷ್ಟರಲ್ಲಿ ಒಂದು ನಾಯಿ ಎಲ್ಲಿಂದಲೋ ಬಂದು ಅಂಗಡಿಯ ಸಮೀಪದಲ್ಲಿ ಬಿದ್ದುಕೊಳ್ಳುತ್ತದೆ. ಅಂಗಡಿಯಲ್ಲಿಟ್ಟಿರುವ ತಿಂಡಿಯ ಪದಾರ್ಥಗಳನ್ನು ದಿಟ್ಟಿಸಿ ನೋಡುತ್ತ ಮೌನ ತಪಸ್ವಿಯೋಪಾದಿಯಲ್ಲಿ ಅದು ಸಾಧನೆ ನಡೆಸಿರುತ್ತದೆ,—ಅಂಗಡಿ ಉಡುಗುವಾಗಾಗಲಿ ಇಲ್ಲವೆ ಗಿರಾಕಿಗಳ ಕೈಯಿಂದ ಜಾರಿ ಬಿದ್ದಾಗಾಗಲಿ ಒಂದು ಚೂರು ತಿಂಡಿ ಸಿಗಬಹುದು ಎಂಬ ಪ್ರತೀಕ್ಷೆಯಿಂದ. ಆದರೆ ಹಾಗಾಗುವ ಸಂಭವವೂ ಇಲ್ಲಿ ತೀರ ಕಡಿಮೆ.

ಗಾಡಿ ಹೊರಟು ಹೋದೊಡನೆಯೇ ಅಂಗಡಿ ಮುಚ್ಚುತ್ತದೆ. ನಾಯಿಯೂ ಅಲ್ಲಿಂದ ಎದ್ದು ಹಳ್ಳದ ನೀರನ್ನು ಕುಡಿದು ಹೊಟ್ಟೆಯ ಕೂಗನ್ನು ಶಾಂತಪಡಿಸುವ ಪ್ರಯತ್ನವನ್ನು ಮಾಡುತ್ತದೆ. ಬಳಿಕ ಕಾಲುಗಳನ್ನು ಚಾಚಿಕೊಂಡು ಮತ್ತನ್ನ

"ನವನೀತ"ದಿಂದ

ಹುಲ್ಲು ನೆಲದ ಮೇಲೆ ಮಲಗುತ್ತದೆ. ಯಾವಾಗಾದರೊಮ್ಮೆ ಹೊಲದಲ್ಲಿ ಕಾಣಿಸಿಕೊಳ್ಳುವ ಯಾವುದಾದರೊಂದು ಪ್ರಾಣಿಯನ್ನು ಬೆನ್ನಟ್ಟಿಕೊಂಡು ಹೋಗುವ ಚೇಷ್ಟೆಯನ್ನೂ ಮಾಡುತ್ತದೆ.

ನೋಡಲು ನಾಯಿ ಬಲಿಷ್ಠವಾಗಿದೆ. ಮೈಲುಗಟ್ಟಲೆ ದೂರ ಸಹಜವಾಗಿ ಓಡುತ್ತದೆ. ಶುದ್ಧ ಹವೆ, ಹಳ್ಳದ ನೀರು, ಬಯಲು ವಾಸ ಎಲ್ಲವೂ ಕೂಡಿ ಹೊಟ್ಟೆತುಂಬ ಅನ್ನವಿಲ್ಲದಿದ್ದರೂ ಅದನ್ನು ಬಲಿಷ್ಠವನ್ನಾಗಿ ಮಾಡಿವೆ.

ಈ ಚಿಕ್ಕ ನಿಲ್ದಾಣದಲ್ಲಿ ಹೇಳಿಕೊಳ್ಳುವಂಥ ಸಂಗತಿಯೊಂದೂ ಯಾವಾಗಲೂ ನಡೆದಿಲ್ಲ. ಗಾಡಿ ಬರುತ್ತದೆ, ನಾಲ್ಕೈದು ನಿಮಿಷ ನಿಲ್ಲುತ್ತದೆ, ಮತ್ತು ಹೋಗಿಬಿಡುತ್ತದೆ.

ಆದರೆ ಒಂದು ದಿನ ಮಧ್ಯಮ ವಯಸ್ಸಿನ ಗೃಹಸ್ಥರೊಬ್ಬರು ತಾವು ಸಾಕಿದ ಹೆಣ್ಣು ನಾಯಿಯೊಡನೆ ಈ ನಿಲ್ದಾಣದಲ್ಲಿಳಿದರು. ಹೆಣ್ಣು ನಾಯಿ ಕಣ್ಣಿಗೆ ಬಿದ್ದೊಡನೆ ನಿಲ್ದಾಣದ ನಾಯಿ ಅದರ ಸನಿಯದಲ್ಲಿ ಸುಳಿಯತೊಡಗಿತು. ಆ ಹೆಣ್ಣು ನಾಯಿ ಕೂಡ ಪ್ರಥಮ ನೋಟಕ್ಕೇ ನಿಲ್ದಾಣದ ಈ ಬಿಡಾಡಿ ನಾಯಿಗೆ ತನ್ನ ಮನವನ್ನರ್ಪಿಸಿ ಬಿಟ್ಟಿತು. ಬಿಡಾಡಿ ನಾಯಿ ಮಾತ್ರ ಆ ಗೃಹಸ್ಥರ ಕೈಲಿದ್ದ ಬೆತ್ತವನ್ನು ಕಂಡು ತನ್ನ ಪ್ರೇಯಸಿಯ ಬಳಿಗೆ ಹೋಗಲು ಅಳುಕುತ್ತಿತ್ತು. ಜನ ತನ್ನನ್ನು ನಾಚಿಕೆಗೆಟ್ಟ ನಾಯಿ ಎನ್ನಬಾರದು ಎಂದೇನೋ ಅದು ಕಳ್ಳ ನೋಟದಿಂದ ಪ್ರೇಯಸಿಯನ್ನು ನೋಡುತ್ತಿತ್ತು. ಆದರೆ ನಗರವಾಸಿಯಾದ ಆ ಹೆಣ್ಣುನಾಯಿ ತವರುಮನೆಯಲ್ಲಿರುವ ಅವಿವಾಹಿತೆಯಂತೆ ಯಾವ ಭಯಸಂಕೋಚಗಳಿಲ್ಲದೆ ಬಿಡಾಡಿ ನಾಯಿಯನ್ನು ನೋಡುತ್ತಲಿತ್ತು. ಕೆಲ ಸಮಯದ ನಂತರ ಆ ಗೃಹಸ್ಥ ತನ್ನ ನಾಯಿಯನ್ನು ಅಲ್ಲಿಯೆ ಒಂದು ಕಂಬಕ್ಕೆ ಕಟ್ಟಿಹಾಕಿ ಸ್ಟೇಶನ್ ಮಾಸ್ತರರೊಂದಿಗೆ ಮಾತಾಡುತ್ತ ಅವರ ಕೋಣೆಗೆ ತೆರಳಿದಾಗ ಈ ಪ್ರಣಯಿಗಳ ಮಧುರಮಿಲನಕ್ಕೆ ಅವಕಾಶ ದೊರೆಯಿತು.

ಸ್ಟೇಶನ್ ಮಾಸ್ತರರು ಬಹಳೇನೂ ಓದಿಕೊಂಡವರಲ್ಲ. ಮಾತಾಡುತ್ತ ಮಾತಾಡುತ್ತ ಅವರೀರ್ವರಲ್ಲಿ ಆಧುನಿಕ ಸಾಮಾಜಿಕ ಸಿದ್ಧಾಂತಗಳ ಮೇಲೆ ಚರ್ಚೆ ಪ್ರಾರಂಭವಾಯಿತು. ಸ್ಟೇಶನ್ ಮಾಸ್ತರರು ಹೇಳಿದರು: "ನೋಡಿ, ವರ್ಣವ್ಯವಸ್ಥೆಯ ಉಚ್ಚಾಟನೆಯನ್ನು ನಾವು ಮಾಡಲಾರೆವು. ಹಾಗೆ ಮಾಡುವದು ಉಚಿತವೂ ಅಲ್ಲ. ಇದು ನಮ್ಮ ಪೂರ್ವಜರು ಮಾಡಿಟ್ಟ ವ್ಯವಸ್ಥೆ. ಯಾವ ಉದ್ದೇಶದಿಂದ ಅವರು ಈ ವ್ಯವಸ್ಥೆಯನ್ನೇರ್ಪಡಿಸಿದರೆಂಬುದನ್ನು ಸರಿಯಾಗಿ ತಿಳಿದುಕೊಂಡ ವಿನಾ ಅದರ ವಿರುದ್ಧ ಗದೆಯೆತ್ತುವದು ಸರಿಯಾಗದು."

ಆ ಗೃಹಸ್ಥರು ಈ ಮಾತನ್ನೊಪ್ಪಲಿಲ್ಲ. ಅವರೆಂದರು: "ಆಗಿನ ಮತ್ತು ಈಗಿನ ಕಾಲದಲ್ಲಿ ಮಹದಂತರವಿದೆ. ಇಂದಿನದು ವಿಕಾಸ ಮತ್ತು ಪ್ರಗತಿಯ ಯುಗವಾಗಿದೆ. ನಿಮ್ಮ ಈ ಹಳೆಯ ಟೊಳ್ಳು ವ್ಯವಸ್ಥೆಯಿಂದ ಎಷ್ಟೊಂದು ಹಾನಿಯಾಗಿದೆ ಎಂದು ನೀವು ಎಂದಾದರೂ ಯೋಚಿಸಿದ್ದೀರಾ? ಮನುಷ್ಯ ಮನುಷ್ಯರ ನಡುವೆ ಅಡಗೋಡೆಗಳು ಎದ್ದು ನಿಂತಿವೆ. ಪ್ರತಿಯೊಬ್ಬನೂ ತನಗಿಂತಲೂ ಕೆಳಗಿನ ವರ್ಣದವರ ಮೇಲೆ ದಬ್ಬಾಳಿಕೆ ನಡೆಸುತ್ತಿದ್ದಾನೆ. ಎಲ್ಲಿಯವರೆಗೆ ಈ ಭೇದಭಾವ ಅಳಿಯುವದಿಲ್ಲವೋ ಮತ್ತು ಬೇರೆ ಬೇರೆ ಜಾತಿಯವರಲ್ಲಿ ಸಹಭೋಜನ, ವಿವಾಹಾದಿಗಳು ನಡೆಯುವದಿಲ್ಲವೋ ಅಲ್ಲಿಯ ವರೆಗೆ ದೇಶದ ಉನ್ನತಿಯಾಗಲಾರದು."

"ವ್ಯಕ್ತಿ-ವ್ಯಕ್ತಿಗಳಲ್ಲಿ ಉಚ್ಚನೀಚ ಎಂಬ ಭೇದವಿರಬಾರದೆಂದು ನಾನೊಪ್ಪುತ್ತೇನೆ. ಆದರೆ ಅಂತರ್ಜಾತೀಯ ವಿವಾಹವನ್ನು ನಾನು ಖಂಡಿತವಾಗಿಯೂ ಒಪ್ಪುವದಿಲ್ಲ. ವಿವಾಹ ಮುಂತಾದವುಗಳಿಂದ ನಾವು ಈ ಭೇದಭಾವವನ್ನು ಅಳಿಸಬಲ್ಲೆವು ಎಂದು ನನಗೇನೂ ಅನಿಸುವದಿಲ್ಲ. ಅದಕ್ಕಾಗಿ ಶುದ್ಧ ಹೃದಯ ಮತ್ತು ಮನಸ್ಸು ಬೇಕಾಗುವದು" ಎಂದರು ಸ್ಟೇಶನ್ ಮಾಸ್ತರರು.

ಆ ಗೃಹಸ್ಥರು ತಿರಸ್ಕಾರದ ಸಣ್ಣ ನಗುವೊಂದನ್ನು ನಕ್ಕರು. ಇಂಥ ಕುಗ್ರಾಮದ, ಅಷ್ಟಕ್ಕಷ್ಟೇ ಓದಿಕೊಂಡ ಸ್ಟೇಶನ್ ಮಾಸ್ತರರೊಂದಿಗೆ

ವಾದಿಸಿ ಪ್ರಯೋಜನವಾದರೂ ಏನು? ಅವರು ತಮ್ಮ ಬೆತ್ತವನ್ನು ತಿರುಗಿಸುತ್ತ ಹೊರಗೆ ಬಂದರು.

ಅವರ ದೃಷ್ಟಿ ತಮ್ಮ ನಾಯಿಯ ಮೇಲೆ ಬಿತ್ತು. ಅದು ಕೂಡ ತನ್ನ ಒಡೆಯನಂತೆ ಅಂತರ್ಜಾತೀಯ ವಿವಾಹವನ್ನು ಪುರಸ್ಕರಿಸುತ್ತಿರಬೇಕು. ಜಾತಿ-ಮತಗಳ ಭೇದ ಭಾವಗಳಿಗೆ ಅದು ನಿಲ್ದಾಣದ ಬಿಡಾಡಿ ನಾಯಿಯೆದುರು ತಿಲಾಂಜಲಿಯನ್ನಿತ್ತಿತ್ತು. ಆದರೆ ಆ ಗೃಹಸ್ಥರಿಗೆ ಇದು ಸೇರಲಿಲ್ಲ. ಬಹುಶಃ ನಾಯಿಗಳ ಮಟ್ಟಿಗೆ ಪ್ರಾಚೀನ ಕಾಲದ ವರ್ಣವ್ಯವಸ್ಥೆಯೇ ಯೋಗ್ಯವೆಂದು ಅವರ ನಂಬಿಕೆಯಿದ್ದಿರಬೇಕು. ಅವರು ಕ್ರೋಧ ಪರವಶರಾಗಿ ಕೈಲಿದ್ದ ಬೆತ್ತದಿಂದ ಬಿಡಾಡಿ ನಾಯಿಯನ್ನು ಬಡಿದರು. ಅದು ಕುಯ್ಯೊ ಎಂದು ಕೂಗಿ ತನ್ನ ವಿರೋಧವನ್ನು ಪ್ರಕಟಿಸಿದರೂ ಕೇಳದೆ ಆ ಗೃಹಸ್ಥರು ರಪರಪನೆ ಪ್ರಹಾರ ಮಾಡಿದರು. ನಾಯಿಯ ಟೊಂಕವೇ ಮುರಿದು ಹೋಯಿತು. ಅದು ಕಿರಿಚುತ್ತ ತೆವಳುತ್ತ ಅಲ್ಲಿಂದ ಜಾರಿತು.

ಸ್ಟೇಶನ್ ಮಾಸ್ತರರು ಕೋಣೆಯ ಹೊರಗೆ ಬಂದರು. ಅವರನ್ನು ಕಂಡು ಗೃಹಸ್ಥರು ತಮ್ಮ ಕೃತಿಯನ್ನು ಸಮರ್ಥಿಸಿಕೊಂಡರು: "ನೋಡಿ, ನನ್ನ ನಾಯಿ ಬಹು ಶ್ರೇಷ್ಠ ಜಾತಿಯದು. ಇದೇ ಜಾತಿಯ ಗಂಡು ನಾಯಿಯನ್ನು ಸಂಪಾದಿಸಲು ತುಂಬ ಪ್ರಯತ್ನಿಸಿದೆ. ಆದರೆ ಸಿಗಲಿಲ್ಲ. ಈಗ ಇದನ್ನು ಬೆಂಗಳೂರಿಗೆ ಒಯ್ಯುತ್ತಿದ್ದೇನೆ."

ಸ್ಟೇಶನ್ ಮಾಸ್ತರರು ತಲೆಯಲ್ಲಾಡಿಸುತ್ತ ತುಟಿಯಲ್ಲೆ ನಕ್ಕರು. ಅದನ್ನು ಕಂಡು ಗೃಹಸ್ಥರು ಮನಸ್ಸಿನಲ್ಲಿಯೇ ಕುಗ್ಗಿ ಹೋದರು. ಆದರೆ ಅಷ್ಟರಲ್ಲಿ ಸ್ಟೇಶನ್ ಮಾಸ್ತರರು ನಾಯಿಯ ವಿಷಯವನ್ನೆತ್ತಿದ್ದರಿಂದ ಪಾರಾದೆ ಎಂದು ಅವರಂದುಕೊಂಡರು. ಹೆಣ್ಣು ನಾಯಿ ನಿಜವಾಗಿಯೂ ಬಹು ಸುಂದರವಾಗಿತ್ತು. ನಾಯಿಯನ್ನು ವರ್ಣಿಸುತ್ತ ಸ್ಟೇಶನ್ ಮಾಸ್ತರು "ಇದು ಮರಿಹಾಕಿದಾಗ ನನಗೆ ಒಂದು ಮರಿ ಕೊಡಿ, ಸ್ವಾಮಿ" ಎಂದರು.

ಗೃಹಸ್ಥರು ಕೊಡುವದಾಗಿ ವಚನವಿತ್ತು ತಮ್ಮ ನಾಯಿಯತ್ತ ದೃಷ್ಟಿ ಬೀರಿದರು. ಬಿಡಾಡಿ ನಾಯಿಯ ಸಂಪರ್ಕದಿಂದ ಅದಕ್ಕೆ ಮೈಲಿಗೆಯಾಗಿರಬೇಕೆಂದು ಭಾವಿಸಿ ಸಾಬೂನು ಹಚ್ಚಿ ತಿಕ್ಕಿತಿಕ್ಕಿ ಅದಕ್ಕೆ ಸ್ನಾನ ಮಾಡಿಸಿದರು. ಟಾವೆಲ್ಲಿನಿಂದ ಮೈ ಒರೆಸಿದರು. ಗಾಡಿ ಬಂದೊಡನೆ ನಾಯಿಯನ್ನೆತ್ತಿಕೊಂಡು ಒಂದು ಡಬ್ಬಿಯನ್ನೇರಿ ಕುಳಿತರು. ನಾಯಿ ಮಾತ್ರ ಒಂದೇ ಸವನೆ ಕಿರಿಚಿಕೊಳ್ಳುತ್ತಿತ್ತು. ಬಿಡಾಡಿ ನಾಯಿ ದೂರದಲ್ಲಿ ನಿಂತು ಸ್ನೇಹದೃಷ್ಟಿಯಿಂದ ಅದನ್ನು ನೋಡುತ್ತಲಿತ್ತು.

ಗಾಡಿ ಹೊರಟೊಡನೆ ಹೆಣ್ಣು ನಾಯಿ ತನ್ನ ಯಜಮಾನನ ಕೈಯಿಂದ ನುಣುಚಿಕೊಂಡು ಕಿಡಕಿಯತ್ತ ಹೋಗಲು ಚಡಪಡಿಸತೊಡಗಿತು. ಗೃಹಸ್ಥರು ಸ್ನೇಹದಿಂದ ಅದರ ಬೆನ್ನಮೇಲೆ ಕೈಯಾಡಿಸುತ್ತ ಅದರ ಮುಖದ ಬಳಿ ತಮ್ಮ ಮುಖವನ್ನೊಯ್ದು "ಛೀ! ಛಿ! ಲಿಲ್ಲಿ, ಇಂಥ ಕೆಲಸ ನಿನಗೆ ಶೋಭಿಸುವದೇ?" ಎಂದರು. ಆಶ್ಚರ್ಯ! ಶೀಲವತಿಯಾದ ಕುಮಾರಿಯಂತೆ ಹೆಣ್ಣು ನಾಯಿ ಮುಖ ಕೆಳಗೆ ಹಾಕಿಕೊಂಡು ತಣ್ಣಗೆ ಕುಳಿತಿತು.

ಗಾಡಿ ಕಣ್ಮರೆಯಾದ ನಂತರ ಬಿಡಾಡಿ ನಾಯಿ ನಿಲ್ದಾಣವನ್ನು ಬಿಟ್ಟು ಹೊರಟಿತು. ಹಳ್ಳದ ದಂಡೆಯ ಕೆಸರಲ್ಲಿ ಹೊರಳಾಡಿ, ಸೊಪ್ಪು ಸದೆಗಳ ಮೇಲೆ ತಿಕ್ಕಿ ತಿಕ್ಕಿ, ಬಿಸಿಲಿನಲ್ಲಿ ಮಲಗಿ ಮುರಿದ ಟೊಂಕವನ್ನು ಅದು ೧೫ ದಿನಗಳಲ್ಲಿ ಗುಣಪಡಿಸಿಕೊಂಡಿತು.

೧೬ನೆಯ ದಿನ ಮತ್ತೆ ಅದು ನಿಲ್ದಾಣದ ಬಳಿಯ ಆ ಅಂಗಡಿಯ ಸಮೀಪದ ತನ್ನ ಸ್ಥಾನದಲ್ಲಿ ಬಂದು ಕುಳಿತಿತು. ಅಂದು ಅಂಗಡಿಯಲ್ಲಿ ಯಾರೋ ಇಬ್ಬರು ಯುವಕರು ಕುಳಿತು ಏನನ್ನೋ ತಿನ್ನುತ್ತಿದ್ದರು. ನಾಯಿ ಆಶೆಯಿಂದ ನೋಡುತ್ತ ಬಾಲವನ್ನು ಅಲ್ಲಾಡಿಸುತ್ತ ಅವರ ಸಮೀಪಕ್ಕೆ ಬಂದಿತು.

ಆ ತರುಣರಲ್ಲೊಬ್ಬ ಹೇಳುತ್ತಿದ್ದ: "ಎಂಥ ಕಾಲ ಬಂತು! ದಯೆ, ಧರ್ಮ, ಮಾನವೀ

ಯತಿಗಳ ಗಂಧಗಾಳಿ ಕೂಡ ಉಳಿಯಲಿಲ್ಲ. ಅಧಿಕಾರ ಲಾಲಸೆ ಜನರಲ್ಲಿ ಎಷ್ಟೊಂದು ಬೆಳೆದು ಬಿಟ್ಟಿದೆ! ಸಾಮಾನ್ಯರ ದುಃಖ-ಕಷ್ಟಗಳ ಮಾತಿಗೆ ಕಿವಿಗೊಡಲು ಒಬ್ಬರೂ ಸಿದ್ಧರಿಲ್ಲ. ನನ್ನನ್ನು ನೋಡು, ಎಷ್ಟು ಕಷ್ಟದಿಂದ ಬಿ. ಎ. ಡಿಗ್ರಿ ಪಡೆದೆ. ಆದರೆ ಇಂದು ೨೫ ರೂಪಾಯಿ ಸಂಬಳಕ್ಕಾಗಿ ಬೀದಿ ನಾಯಿಯಂತೆ ಅತ್ತಿತ್ತ ಅಲೆದಾಡುತ್ತಿರಬೇಕಾಗಿದೆ."

ಸಮ್ಮತಿದರ್ಶಕವಾಗಿ ತಲೆಯಲ್ಲಾಡಿಸುತ್ತ ಅವನ ಮಿತ್ರ ಹೇಳಿದ: "ಎಲ್ಲರೂ ಸ್ವಾರ್ಥಿಗಳು. ಒಂದು ಮುಷ್ಟಿ ಭಿಕ್ಷೆ ಹಾಕಲು ಕೂಡ ಯಾರೂ ಸಿದ್ಧರಿಲ್ಲ. ನಾಯಿಯ ಎದುರು ಸಂತೋಷದಿಂದ ಬಿಸಾಡುವದನ್ನು ಕೂಡ ಮನುಷ್ಯರಿಗೆ ಅವರು ಬೇಡಿದರೂ ಕೊಡುವದಿಲ್ಲ."

ನಾಯಿಗೆ ಅವರಾಡುವ ದೊಡ್ಡ ದೊಡ್ಡ ಮಾತುಗಳು ತಿಳಿದವೊ ಏನೋ, ಅದು ಅವರ ಸಮೀಪಕ್ಕೆ ಇನ್ನಿಷ್ಟು ಸರಿದು ಅವರನ್ನು ಆಶೆಯ ಕಂಗಳಿಂದ ನೋಡತೊಡಗಿತು. ಅದನ್ನು ಕಂಡೊಡನೆ ಯುವಕರಲ್ಲೊಬ್ಬ ತನ್ನ ಬೂಟುಗಾಲಿನಿಂದ ಒದ್ದ. ನಾಯಿ ಜಿಗಿದು ಒಂದಿಷ್ಟು ದೂರ ಬಿತ್ತು. ನಾಲ್ಕು ದಿನಗಳಿಂದ ಉಪವಾಸವಿದ್ದ ನಾಯಿ ಹೊಡೆತದ ನೋವಿನಿಂದ ಕೂಗಿಕೊಂಡು ಓಡಿತು. ೧೦ ನಿಮಿಷಗಳ ವರೆಗೂ ಅದು ನೋವಿನಿಂದ ನರಳಿತು. ಯುವಕರು ಪರಸ್ಪರರನ್ನು ನೋಡಿಕೊಂಡು ನಾಯಿಯತ್ತ ತಿರಸ್ಕಾರದ ದೃಷ್ಟಿ ಬೀರಿ ಮತ್ತೆ ಮಾತಿನಲ್ಲಿ ಮಗ್ನರಾದರು.

ಅಂದಿನ ದಿನವೇ ನಾಯಿಗೆ ದುರ್ದೈವದ ದಿನವಾಗಿತ್ತು. ಹಗಲಿಡೀ ಅಲೆದಾಡಿ ಅದು ರಾತ್ರಿ ಅಂಗಡಿಯ ಬಳಿ ಇದ್ದ ಒಂದು ಗವಿಯಂಥ ತಗ್ಗಿನಲ್ಲಿ ಹೊಕ್ಕು ಬಿದ್ದುಕೊಂಡಿತು. ಅಷ್ಟರಲ್ಲಿ ಒಂದು ತೋಳ ಎಲ್ಲಿಂದಲೋ ಅಲ್ಲಿಗೆ ಬಂತು. ಜನ ಹೆದರಿ ಚೀರಿದರು. ನೋಡನೋಡುವಷ್ಟರಲ್ಲಿ ನಿಲ್ದಾಣ ನಿರ್ಜನವಾಯಿತು. ತೋಳಕ್ಕೆ ನಾಯಿಯ ವಾಸನೆ ಬಡಿದಿತ್ತಾದ್ದರಿಂದ ಅದು ಅದರ ಪ್ರತೀಕ್ಷೆಯಲ್ಲಿ ಅಲ್ಲೇ ಕುಳಿತಿತು. ಬಹಳ ಹೊತ್ತು ಕಾದು ಬೇಸತ್ತು ಕೊನೆಗೆ ತೋಳ ಆ ತಗ್ಗಿನಲ್ಲಿ ಮುಖದೂಡಲು ನಾಯಿ ಅದನ್ನು ಕಚ್ಚಿತು. ತೋಳ ನೋವಿನಿಂದ ಕೂಗಿ ತಿರುಗಲು ನಾಯಿ ಮೆಲ್ಲಗೆ ಮುಖ ಹೊರಗೆ ಹಾಕಿ ಅದರ ಹಿಂಗಾಲುಗಳನ್ನು ಕಡಿಯಿತು. ತೋಳ ಜಿಗಿದು ಮತ್ತೆ ತಗ್ಗಿನತ್ತ ಮುಖ ಹಾಕಿ ನಿಂತಿತು. ಜೀವದಾಶೆಯಿಂದ ನಾಯಿಯಲ್ಲಿ ಅದೆಂಥ ಕಸುವು ಬಂದಿತ್ತೋ! ಅದು ಒಮ್ಮಿಂದೊಮ್ಮೆ ಹೊರ ಜಿಗಿದು ತೋಳದ ಕುತ್ತಿಗೆಯನ್ನು ಕಚ್ಚಿ ಹಿಡಿಯಿತು. ಆ ಹಿಡಿತದಿಂದ ತಪ್ಪಿಸಿಕೊಳ್ಳಲು ತೋಳ ಒದ್ದಾಡಿತು. ಆದರೆ ನಾಯಿಯ ಹಿಡಿತ ಬಲವಾಗುತ್ತಲೇ ಹೋಯಿತು. ತೋಳ ಒದ್ದಾಡಿ ಪ್ರಾಣ ಬಿಟ್ಟಿತು.

ಮರುದಿನದಿಂದ ನಾಯಿಗೆ ಸನ್ಮಾನ ದೊರೆಯತೊಡಗಿತು. ಸ್ವತಃ ಸ್ಟೇಶನ್‌ಮಾಸ್ತರರೇ ಪ್ರತಿನಿತ್ಯ ಅದಕ್ಕೆ ಅನ್ನ ಹಾಕಬೇಕೆಂದು ಆಜ್ಞಾಪಿಸಿದರು. ಒಂದು ದಿನವಂತೂ ಅಂಗಡಿಕಾರನಿಗೆ ಅದರ ಮೇಲೆ ಅಭಿಮಾನ-ಕನಿಕರಗಳು ಉಕ್ಕೇರಿ ಆತ ತನ್ನ ಇಡೀ ಜೀವನದ ಜಿಪುಣತೆಯನ್ನು ಮರೆತು ಮಿಠಾಯಿಯ ತಾಟನ್ನೇ ಅದರೆದುರಿಟ್ಟನು. ಎಣ್ಣೆಯಲ್ಲಿ ಕರಿದ ಮಿಠಾಯಿಗಳನ್ನು ವರ್ಷವಿಡೀ ನಾಲಿಗೆಯಲ್ಲಿ ನೀರೂರಿಸುತ್ತ ಬರೇ ನೋಡಿ ತೃಪ್ತಿಹೊಂದಿದ್ದ ನಾಯಿ ತಾಟನ್ನು ಕಂಡೊಡನೆ ಹಸಿದ ಹುಲಿಯಂತೆ ಅದರ ಮೇಲೆರಗಿತು.

ಆದರೆ ಅಂದು ರಾತ್ರಿಯೆಲ್ಲ ಜನರಿಗೆ ಅದರ ರೋದನ ಕೇಳಿಸುತ್ತಿತ್ತು. ಮತ್ತಾವುದೋ ತೋಳದೊಡನೆ ಅದು ಹೋರಾಡುತ್ತಿರಬೇಕು ಎಂದು ಜನ ಅಂದುಕೊಂಡರು. ಆದರೆ ನಾಯಿಗೆ ಏನೋ ರೋಗವಾಗಿತ್ತು. ಅದು ಹೊಲ-ತೋಟಗಳಲ್ಲಿ ಅಲೆಯತೊಡಗಿತು. ಈ ಸಲ ಅದಕ್ಕೆ ಎಲೆಗಳು, ಕೆಸರು ಪ್ರಯೋಜನಕ್ಕೆ ಬರಲಿಲ್ಲ. ಹಳ್ಳದ ನೀರು ಕೂಡ ಗುಣಕೊಡಲು ಅಸಮರ್ಥವಾಯಿತು. ಒಂದು ವಾರದಮೇಲೆ ಅದು ತುಸು ಚೇತರಿಸಿಕೊಂಡಿತು. ಆದರೆ ಆಗ ಅದರ ಎಲವು-ಚರ್ಮ ಮಾತ್ರ ಉಳಿದಿತ್ತು. ಜನ ಮತ್ತೆ ಅದನ್ನು ತಿರಸ್ಕ

ರಿಸತೊಡಗಿದರು. ನಾಯಿ ಮತ್ತೆ ಹೇಗೋ ತನ್ನ ಜೀವನವನ್ನು ಸಾಗಿಸತೊಡಗಿತು.

ಆರು ತಿಂಗಳನಂತರ ಮತ್ತೆ ಆ ಶ್ರೇಷ್ಠ ಜಾತಿಯ ಹೆಣ್ಣು ನಾಯಿಯ ಮಾಲಕ ಗೃಹಸ್ಥರು ನಿಲ್ದಾಣಕ್ಕೆ ಬಂದಾಗ ಸ್ಟೇಶನ್ ಮಾಸ್ತರರು ನಾಯಿಯ ಮರಿಯ ಪ್ರಸ್ತಾಪವನ್ನೆತ್ತಲು ಮರೆಯಲಿಲ್ಲ. ಗೃಹಸ್ಥರು ಸಿಡುಕಿನಿಂದಲೇ, "ಈ ನಿಲ್ದಾಣದಲ್ಲಿಯ ಹಾಳು ನಾಯಿ ಅದನ್ನು ಪೂರಾ ಹಾಳು ಮಾಡಿತು. ಬೆಂಗಳೂರಿಗೆ ಹೋದದ್ದು ನಿಜ. ಆದರೆ ಅಲ್ಲಿ ಒಂದು ನಾಯಿಯನ್ನೂ ನನ್ನ ನಾಯಿ ಹತ್ತಿರ ಬರಗೊಡಲಿಲ್ಲ. ಆದರೂ ಅದು ಎರಡು ಮರಿ ಹಾಕಿದೆ. ಒಂದನ್ನು ನಿಮಗೆ ತಂದು ಕೊಡುತ್ತೇನೆ," ಎಂದರು.

ಅವರು ಮಾತಾಡುತ್ತಿದ್ದಾಗಲೇ ನಿಲ್ದಾಣದ ನಾಯಿ ಅತ್ತ ಕಡೆಯಿಂದ ಬಂತು. ಗೃಹಸ್ಥರು ಅದನ್ನು ಕಂಡವರೇ ಬೆತ್ತವನ್ನೆತ್ತಿಕೊಂಡು ಅದರತ್ತ ಓಡಿದರು. ನಾಯಿ ಓಡುವ ಮೊದಲೆ ಬೆತ್ತದೇಟು ಅದರ ಮೇಲೆ ಬಿತ್ತು. ಮೊದಲೇ ಸಾಯಲಾಗಿದ್ದ ಆ ನಾಯಿ ನೋವನ್ನು ಸಹಿಸಲಾರದೆ ಹೊರಳಾಡಿ ಕೂಗತೊಡಗಿತು. ನಿಲ್ದಾಣದ ಕೂಲಿ ಆಳುಗಳು ಅದನ್ನು ಕಾಲಿನಿಂದೊದೆಯುತ್ತ ನಿಲ್ದಾಣದ ಹೊರಗೆ ಹಾಕಿದರು. ಅಂದೇ ರಾತ್ರಿ ನಿಲ್ದಾಣದಿಂದ ತುಸು ದೂರದಲ್ಲಿ ನಾಯಿ ಒಂದು ಗಾಡಿಯ ಕೆಳಗೆ ಸಿಕ್ಕು ಅರ್ಧ ತಾಸಿನ ಪರ್ಯಂತ ಚೀರುತ್ತ ಒದ್ದಾಡುತ್ತ ಪ್ರಾಣ ಬಿಟ್ಟಿತು.

ಮತ್ತೆ ನಾಲ್ಕು ತಿಂಗಳುಗಳು ಕಳೆದವು. ಆ ಗೃಹಸ್ಥರು ಮತ್ತೆ ಬಂದು ಸ್ಟೇಶನ್‌ಮಾಸ್ತರರಿಗೆ "ತೆಗೆದುಕೊಳ್ಳಿ, ಈ ಮರಿಯನ್ನು. ನನ್ನ ನಾಯಿ ಹಾಕಿದ ಎರಡು ಮರಿಗಳಲ್ಲಿ ಒಂದು ಸತ್ತು ಹೋಯಿತು. ಇದನ್ನು ನೀವಿಟ್ಟುಕೊಳ್ಳಿ" ಎಂದರು.

ಸ್ಟೇಶನ್ ಮಾಸ್ತರರು ಆ ಮರಿಯನ್ನು ಸಾಕಿದರು. ಆರುತಿಂಗಳಲ್ಲಿ ಅದು ಬೆಳೆದು ದೊಡ್ಡ ನಾಯಿಯಾಯಿತು. ಬಹು ತ್ವರಿತವಾಗಿ ಓಡುತ್ತಿತ್ತು ಈ ನಾಯಿ. ಭಯವೆಂಬುದೇ ಅದಕ್ಕೆ ಗೊತ್ತಿರಲಿಲ್ಲ. ಆದರೆ ಯಾರೇ ಆಗಲಿ, ಮಿಠಾಯಿಯನ್ನು ಮುಂದೆ ಹಿಡಿದೊಡನೆ ಅವರನ್ನು ಕಚ್ಚಲು ಹೋಗುತ್ತಿತ್ತು. ಎಷ್ಟೋ ಹೆಣ್ಣು ನಾಯಿಗಳು ಪ್ರೇಮಯಾಚನೆ ಮಾಡಿದರೂ ಅದು ಅವುಗಳನ್ನು ಕಣ್ಣೆತ್ತಿ ಕೂಡ ನೋಡಲಿಲ್ಲ. ಯಾರಾದರೂ ಉದ್ದುದ್ದ ವೇದಾಂತ-ತತ್ತ್ವಗಳ ಮಾತುಗಳನ್ನಾಡುವದನ್ನು ಕೇಳಿದಾಗ ತಿರಸ್ಕಾರದ ದೃಷ್ಟಿಯಿಂದ ನೋಡುತ್ತಿತ್ತು. ಅದರ ತಾಯಿಯನ್ನು ಸಾಕಿದ ಗೃಹಸ್ಥರು ಬಂದು ಅಂತರ್ಜಾತೀಯ ವಿವಾಹಾದಿ ಸಮಸೆಗಳನ್ನು ಸ್ಟೇಶನ್ ಮಾಸ್ತರರ ಹತ್ತರ ಮಾತನಾಡುವಾಗ ಅವರನ್ನು ಕಚ್ಚಿ ಹರಿದುತಿನ್ನಬೇಕೆಂಬಂತೆ ದಿಟ್ಟಿಸುತ್ತಿತ್ತು.



## ಮಹಾ ಅನ್ಯಾಯ

ಬಸ್ ಕಂಪನಿ ದರಗಳನ್ನಿಳಿಸಿತ್ತು. ಇದನ್ನು ಕೇಳಿ ಸ್ಕಾಟ್ ಜನರು ಒಂದು ಪ್ರತಿಭಟನಾ ಸಭೆ ಕರೆದರು.

ಸಭೆಯಲ್ಲಿ ಈ ಗೊತ್ತುವಳಿ ಸರ್ವಾನುಮತದಿಂದ ಪಾಸಾಯಿತು : "ಬಸ್ ಕಂಪನಿ ದರಗಳನ್ನು ಇಳಿಸಿದ್ದರಿಂದ ನಮಗೆ ಮಹಾ ಅನ್ಯಾಯವಾಗಿದೆ. ಈ ಮೊದಲು ನಾವು ನಡೆದರೆ ನಮಗೆ ಎರಡಾಣೆ ಲಾಭವಾಗುತ್ತಿತ್ತು ; ಈಗ ಒಂದೇ ಆಣೆ ಲಾಭವಾಗುತ್ತದೆ."

ಜಿ. ಜಿ. ಹೆಗಡೆ

# ಟೆಲಿಪ್ರಿಂಟರ್ : ಆಧುನಿಕ ಯಂತ್ರವಿದ್ಯೆಯ ಅದ್ಭುತ

**ಪತ್ರಿಕಾ ಕಚೇರಿಗಳಿಗೆ ಸುದ್ದಿ ತರಲು ತಯಾರಿಸಿದ ಯಂತ್ರ ಇಂದು ಹಲವು ಉಪಯೋಗಗಳಿಗೆ ಬರುತ್ತಿದೆ**

ಆಧುನಿಕ ಪತ್ರಿಕಾ ಕಚೇರಿಯೊಂದನ್ನು ಸಂದರ್ಶಿಸಿದರೆ ಸಂಪಾದಕರ ಕೋಣೆಯ ಬಳಿ ಟಕ್ ಟಕ್ ಸದ್ದಿನೊಡನೆ, ಅತಿ ವೇಗವಾಗಿ, ಒಂದೇ ಸವನೆ, ತಂತಾನೇ ಟೈಪು ಹೊಡೆಯುತ್ತಿರುವ ಒಂದು ದೊಡ್ಡ ಟೈಪ್‌ರೈಟರಿನಂಥ ಯಂತ್ರವನ್ನು ಕಾಣುವಿರಿ. ಅದು ಮನುಷ್ಯ ಸಹಾಯವಿಲ್ಲದೆ ಭೂತಚಾಲಿತವೆಂಬಂತೆ ತಾನೇ ಟೈಪು ಹೊಡೆಯುವುದಲ್ಲದೆ, ಒಂದು ಸಾಲು ಮುಗಿದೊಡನೆ ಸರ್ರನೆ ಮುಂದಿನ ಸಾಲಿನ ಬುಡಕ್ಕೆ ಕಾಗದವನ್ನು ತಿರುಗಿಸುತ್ತದೆ. ಹೀಗೆ ಮೇಲೆ ಮೇಲೆ ಹೋದ ಕಾಗದ ಹನುಮಂತನ ಬಾಲದಂತೆ ಹೊರಗೆ ಬರುತ್ತಲೇ ಇರುತ್ತದೆ. ಈ ಅದ್ಭುತ ಯಂತ್ರವೇ ಟೆಲಿಪ್ರಿಂಟರ್—ಇಂದು ವರ್ತಮಾನ ಪತ್ರಿಕೆಗಳಿಗೆ ಅಧಿಕಾಂಶ ಸುದ್ದಿಗಳನ್ನು ತರುವ ಯಾಂತ್ರಿಕ ನಾರದ.



ಟೆಲಿಪ್ರಿಂಟರ್ ಒಂದು ಕಡೆಯಲ್ಲಿ ಟೈಪು ಮಾಡಿದ ಸಂಗತಿಗಳನ್ನು ಇನ್ನೊಂದು ಕಡೆಯಲ್ಲಿ ಇದ್ದಕ್ಕಿದ್ದಂತೆ ಟೈಪು ಮಾಡುವ ಯಂತ್ರ. ಅದು ಟೆಲಿಗ್ರಾಫ್ ಯಂತ್ರದ ತತ್ವದ ಮೇಲೆಯೇ ಕೆಲಸ ಮಾಡುತ್ತದೆ; ಅದರಂತೆ ಇದರಲ್ಲಿಯೂ ತಂತಿಯಿಂದಲೇ ಸಮಾಚಾರಗಳು ಕಳಿಸಲ್ಪಡುತ್ತವೆ. ( ಈಗ ತಂತಿಯಿಲ್ಲದೆ ರೇಡಿಯೋ ಅಲೆಗಳ ಮುಖಾಂತರ ನಡೆಯುವ "ಹೆಲಿಪ್ರಿಂಟರು" ಗಳೂ ಬಂದಿವೆ.) ಆದರೆ ಟೆಲಿಗ್ರಾಫಿನಲ್ಲಿ ಸಮಾಚಾರಗಳು ಕಡ-ಕಟ್ಟ ಎಂಬ ಐದು ಬಗೆಯ ಸಂಕೇತಗಳ ಮೂಲಕ ಹೋಗುತ್ತಿದ್ದರೆ ಟೆಲಿಪ್ರಿಂಟರಿನಲ್ಲಿ ಅವೇ ಸಂಕೇತಗಳು ಮರಳಿ ಅಕ್ಷರಗಳಾಗಿ ಮಾರ್ಪಟ್ಟು ತಂತಾವೇ ಟೈಪಾಗಿ ಬರುತ್ತವಷ್ಟೇ. ಟೆಲಿಗ್ರಾಫ್ ಯಂತ್ರದಂತೆ ಇದರಲ್ಲಿಯೂ ಸಮಾಚಾರ ಕಳಿಸಲು ಬೇರೆ, ತೆಗೆದುಕೊಳ್ಳಲು ಬೇರೆ ಯಂತ್ರಗಳಿವೆ.

ಜಗತ್ತಿನಲ್ಲಿ ಇಂದು ೨,೫೦,೦೦೦ ಕ್ಕಿಂತ

ಹೆಚ್ಚು ಜನ ಟೆಲಿಪ್ರಿಂಟರ್ ವರ್ಗಣಿದಾರರಿದ್ದಾರೆ. ಭಾರತದಲ್ಲಿ ಟೆಲಿಪ್ರಿಂಟರ್ ಸುದ್ದಿ ಸಾಗಿಸುವ ತಂತಿಗಳನ್ನು ಟಪಾಲು ಖಾತೆಯವರೇ ತಮ್ಮ ಟೆಲಿಗ್ರಾಫ್ ಮತ್ತು ಟೆಲಿಫೋನ್ ತಂತಿಗಳ ಸಂಗಡ ನಡೆಸುತ್ತಾರೆ. ಟೆಲಿಪ್ರಿಂಟರ್ ವರ್ಗಣಿದಾರರು ಅವರಿಂದ ಈ "ಲೈನು"ಗಳನ್ನು ಬಾಡಿಗೆಗೆ ಪಡೆಯುತ್ತಾರೆ.

ಟೆಲಿಪ್ರಿಂಟರ್ ಸೌಕರ್ಯವನ್ನು ಮುಖ್ಯವಾಗಿ ಉಪಯೋಗಿಸುವವರು ವರ್ತಮಾನ ಪತ್ರಗಳಿಗೆ ಸುದ್ದಿ ಕಳಿಸುವ ಪ್ರೆಸ್ ಟ್ರಸ್ಟ್, ಯುನೈಟೆಡ್ ಪ್ರೆಸ್ ಮುಂತಾದ ಸಂಸ್ಥೆಗಳು. ಇವು ದೂರದೂರದ ಪತ್ರಿಕೆಗಳಿಗೆ ಸುದ್ದಿಗಳನ್ನು ಒದಗಿಸುತ್ತವೆ. ಇವಲ್ಲದೆ ದೊಡ್ಡ ಪತ್ರಿಕೆಗಳು ತಮ್ಮವೇ ಲೈನುಗಳನ್ನು ಟಪಾಲಿನವರಿಂದ ಬಾಡಿಗೆಗೆ ಹಿಡಿಯಬಹುದು. "ಟೈಮ್ಸ್", "ಹಿಂದು" ಮುಂತಾದ ಪ್ರಮುಖ ಪತ್ರಿಕೆಗಳು ಸುದ್ದಿ ಸಂಸ್ಥೆಗಳ ಟೆಲಿಪ್ರಿಂಟರಿಗೆ ವರ್ಗಣಿದಾರರಾಗಿರುವುದಲ್ಲದೆ ಪ್ರಮುಖ ನಗರಗಳಲ್ಲಿರುವ ತಮ್ಮ ಕಚೇರಿಗಳ ನಡುವೆ ಪ್ರತ್ಯೇಕ ಟೆಲಿಪ್ರಿಂಟರ್ ಸಂಪರ್ಕವನ್ನು ಹಾಕಿಕೊಂಡಿವೆ. ಕರ್ನಾಟಕದಲ್ಲಿ "ಸಂಯುಕ್ತ ಕರ್ನಾಟಕ" ಪತ್ರಿಕೆಯವರು ಪ್ರೆಸ್ ಟ್ರಸ್ಟ್ ವರ್ಗಣಿದಾರರಾಗಿರುವರಲ್ಲದೆ ಈಗ ತಮ್ಮ ಬೆಂಗಳೂರು ಮತ್ತು ಹುಬ್ಬಳ್ಳಿ ಕಚೇರಿಗಳ ನಡುವೆ ನೇರವಾದ ಟೆಲಿಪ್ರಿಂಟರ್ ಲೈನ್ ಹಾಕಿಸಿಕೊಂಡಿದ್ದಾರೆ.

ವರ್ತಮಾನ ಪತ್ರಿಕೆಗಳಷ್ಟೇ ಇಂದು ಟೆಲಿಪ್ರಿಂಟರಿನ ಉಪಯೋಗ ಮಾಡುತ್ತ ಇಲ್ಲ. ವ್ಯಾಪಾರಿಗಳಿಂದ ಹಿಡಿದು ಪೋಲೀಸರ ತನಕ ಹಲ ತರದ ವರ್ಗಣಿದಾರರು ಅದರಿಂದ ಪ್ರಯೋಜನ ಹೊಂದುತ್ತಿದ್ದಾರೆ.

ಮುಂಬಯಿ ಮೊದಲಾದೆಡೆಗಳಲ್ಲಿ ಅನೇಕ ವ್ಯಾಪಾರಿಗಳು ಇಂದು ಪ್ರೆಸ್ ಟ್ರಸ್ಟಿನ ಟೆಲಿಪ್ರಿಂಟರ್ ವರ್ಗಣಿದಾರರಾಗಿದ್ದಾರೆ. ಟೆಲಿಪ್ರಿಂಟರ್ ಅವರಿಗೆ ಮೇಲಿಂದ ಮೇಲೆ ಪೇಟೆಯ ದರಗಳ ಏರಿಳಿತಗಳನ್ನು ತಿಳಿಸುತ್ತದೆ. ಪಾಶ್ಚಾತ್ಯ ವ್ಯಾಪಾರಿಗಳು ಟೆಲಿಪ್ರಿಂಟರನ್ನು ಇದಕ್ಕಿಂತಲೂ ಹೆಚ್ಚಾಗಿ ಉಪಯೋಗ ಮಾಡಿಕೊಳ್ಳುತ್ತಿದ್ದಾರೆ. ಅಮೇರಿಕನ್ ವ್ಯಾಪಾರಿ ಸಂಸ್ಥೆಗಳು ಅಟ್ಲಾಂಟಿಕ ಸಾಗರದಾಚೆ ಯುರೋಪಿನಲ್ಲಿರುವ ತಮ್ಮ ಶಾಖಾ ಕಚೇರಿಗಳೊಡನೆ ಪ್ರತಿ ದಿನ ತಾಸುಗಟ್ಟಳೆ ಟೆಲಿಪ್ರಿಂಟರ್ ಮೂಲಕ "ಸಂಭಾಷಣೆ" ಜರಗಿಸುತ್ತವೆ. ಇದರಿಂದ ಯುರೋಪಿನ ಪೇಟೆಗಳ ದೈನಂದಿನ ಚಲನವಲನಗಳ ಪರಿಚಯ ತತ್‌ಕ್ಷಣ ಅಮೇರಿಕನ್ ವರ್ತಕರಿಗಾಗುತ್ತದಲ್ಲದೆ ಶಾಖಾ ಕಚೇರಿಗಳಿಗೆ ಕೂಡಕೂಡಲೆ ಆಜ್ಞೆಗಳನ್ನು ಕಳಿಸಲು ಬರುತ್ತದೆ. ಟೆಲಿಫೋನ್ ಮೇಲೆ ಮಾತಾಡಲು ಲೈನ್ ಸಿಗುವುದು ಕಷ್ಟ. ಮೇಲಾಗಿ ಟೆಲಿಫೋನ್ ಸಂದೇಶಗಳು ಬಾಯಿಸಂದೇಶಗಳಾಗುತ್ತವೆ. ಟೆಲಿಪ್ರಿಂಟರಾದರೆ ಬರಹದಲ್ಲೇ ಎಲ್ಲ ಸಂದೇಶಗಳನ್ನು ಮುಟ್ಟಿಸುವುದು ದೊಡ್ಡ ಅನುಕೂಲ.

ಭಾರತದಲ್ಲಿ ರೇಲ್ವೆಗಳೂ ಟಪಾಲು ಕಟ್ಟೆಗಳೂ ಟೆಲಿಪ್ರಿಂಟರುಗಳನ್ನು ತಮ್ಮ ದಿನದಿನದ ಕಾರ್ಯಕ್ಕೆ ಉಪಯೋಗಿಸುತ್ತವೆ. ಭಾರತ ಸರಕಾರದ ಸುದ್ದಿ ಶಾಖೆಯು ತನ್ನ ಪ್ರಮುಖ ಪ್ರಾಂತಿಕ ಶಾಖೆಗಳೊಡನೆ ಟೆಲಿಪ್ರಿಂಟರ್ ಸಂಪರ್ಕವಿಟ್ಟುಕೊಂಡಿರುವುದರಿಂದ ಪ್ರಚಾರ ಸಾಹಿತ್ಯವು ಆಗಿಂದಾಗ ದೇಶದಾದ್ಯಂತ ತಲಪಲು ಸಾಧ್ಯವಾಗಿದೆ. ಮುಂಬಯಿ ಸರಕಾರವೂ ಸುದ್ದಿ ಸಂಸ್ಥೆಗಳ ಟೆಲಿಪ್ರಿಂಟರ್ ವರ್ಗಣಿದಾರನಾಗಿದೆ. ಅದರಿಂದ್ರು ಮಹತ್ವದ ರಾಷ್ಟ್ರೀಯ ಮತ್ತು ಪ್ರಾಂತೀಯ ಸುದ್ದಿಗಳೂ ಅಭಿಪ್ರಾಯಗಳೂ ಸುದ್ದಿ ಸಂಸ್ಥೆಗಳ ಮೂಲಕ ತತ್‌ಕ್ಷಣವೇ ಸರಕಾರಕ್ಕೆ ತಿಳಿದು ಮರುದಿನದ ಪತ್ರಿಕೆ ನೋಡುವ ಮೊದಲೇ ಅವಶ್ಯಕ ಕ್ರಮಗಳನ್ನು ಕೈಕೊಳ್ಳಬಹುದಾಗುತ್ತದೆ.

ಕಳ್ಳರನ್ನು ಹಿಡಿಯಲು ಕೂಡ ಟೆಲಿಪ್ರಿಂಟರ್ ಸಹಾಯ ಮಾಡುತ್ತದೆ. ಅಮೇರಿಕದ ನಗರಗಳಲ್ಲಿ ದೊಡ್ಡ ಅಂಗಡಿಗಳಲ್ಲಿ ಠಕ್ಕರು ಖೊಟ್ಟಿ ಚೆಕು ವಟಾಯಿಸುವುದು, ಪ್ರದರ್ಶನಕ್ಕಿಟ್ಟ ಸಾಮಾನುಗಳನ್ನು ಕದಿಯುವುದೇ ಮೊದಲಾದ ಕಾಯಕಗಳನ್ನು ಮಾಡುತ್ತಾರೆ. ಈಗ ಈ ಅಂಗಡಿಗಳು

ಸಂಶಯಾಸ್ಪದ ವ್ಯಕ್ತಿಗಳು ತಮ್ಮಲ್ಲಿ ಕಾಣಿಸಿಕೊಂಡಾಗ ಇತರ ಅಂಗಡಿಗಳಿಗೆ ಟೆಲಿಪ್ರಿಂಟರ್ ಮೂಲಕ ಎಚ್ಚರಿಕೆ ಕೊಡುವುದರಿಂದ ಒಂದಲ್ಲ ಒಂದು ಅಂಗಡಿಯಲ್ಲಿ ಅವರು ಸಿಕ್ಕಿಬೀಳುತ್ತಾರೆ.

ಯುರೋಪಿನಲ್ಲಿ ಪೋಲೀಸರು ಟೆಲಿಪ್ರಿಂಟರ್ ಮೂಲಕ ಇತರ ರಾಷ್ಟ್ರಗಳ ಪೋಲೀಸರಿಗೆ ಸೂಚನೆ ಕೊಡುವ ಕ್ರಮ ಇಟ್ಟುಕೊಂಡಿದ್ದಾರೆ. ಟೆಲಿಪ್ರಿಂಟರು ಟೆಲಿಫೋನಿಗಿಂತಲೂ ನಿಶ್ಚಿತವಾಗಿ ವರ್ತಮಾನ ಕಳಿಸುವುದರಿಂದ ಅಂತಾರಾಷ್ಟ್ರೀಯ ಧೂರ್ತರು ಹೆಚ್ಚುಹೆಚ್ಚಾಗಿ ಪೋಲೀಸರ ಕೈಗೆ ಬೀಳುವಂತಾಗಿದೆ.

ಫ್ರಾನ್ಸಿನಲ್ಲಿ ಚುನಾವಣೆಯ ಪರಿಣಾಮಗಳನ್ನು ತತ್‌ಕ್ಷಣ ತಿಳಿದುಕೊಳ್ಳಲು ಗೃಹಮಂತ್ರಿ ಶಾಖೆ ವಿವಿಧ ಕೇಂದ್ರಗಳೊಡನೆ ಟೆಲಿಪ್ರಿಂಟರ್ ಸಂಬಂಧವಿಟ್ಟುಕೊಂಡಿದೆ.

ಟೆಲಿಪ್ರಿಂಟರಿನ ಜನಕರು ಅಮೇರಿಕದ ಜಾಯ್‌ ಮಾರ್ಟನ್ ಮತ್ತು ಚಾರ್ಲ್‌ಸ್ ಕ್ರನ್ ಎಂಬ ಇಬ್ಬರು ವ್ಯಾಪಾರಿಗಳು. ೧೯೦೬ ರಲ್ಲಿ ಅವರು ಒಂದು ಸರಳ ಟೆಲಿಪ್ರಿಂಟರ್ ಉಪಕರಣವನ್ನು ನಿರ್ಮಿಸಿದರು. ೧೯೧೫ರ ವರೆಗೆ ಅದರ ಪ್ರಸಾರ ಹೆಚ್ಚಾಗಲಿಲ್ಲ. ಆ ವರ್ಷ ಅಮೇರಿಕದ ಸುದ್ದಿ ಸಂಸ್ಥೆಯಾದ ಅಸೋಸಿಯೇಟೆಡ್ ಪ್ರೆಸ್ಸು ಹಲವು ಪತ್ರಿಕೆಗಳಿಗೆ ಸುದ್ದಿಯನ್ನು ಏಕಕಾಲದಲ್ಲಿ ಕಳಿಸುವ ಕಷ್ಟವನ್ನು ಸಹಿಸಲಾರದೆ ಟೆಲಿಪ್ರಿಂಟರನ್ನು ಮೊದಲು ಉಪಯೋಗಿಸಲು ಸಿದ್ಧವಾಯಿತು. ಈ ನಡುವೆ ಜರ್ಮನಿಯಲ್ಲಿ ಹುಟ್ಟಿ ಅಮೇರಿಕ ನಿವಾಸಿಯಾದ ಎಡ್ವರ್ಡ್ ಕ್ಲೇನ್‌ಸ್ಮಿತ್ರನೆಂಬ ವಿದ್ಯುತ್ ತಜ್ಞನು ತನ್ನದೇ ಆದ ಟೆಲಿಪ್ರಿಂಟರ್ ಪದ್ಧತಿಯನ್ನು ರೂಪಿಸಿಕೊಂಡನು. ೧೯೩೧ ರಲ್ಲಿ ಅಮೇರಿಕನ್ ಟೆಲಿಫೋನ್ ಮತ್ತು ಟೆಲಿಗ್ರಾಫ್ ಕಂಪನಿಯು ಎರಡರ ಹಕ್ಕುಗಳನ್ನೂ ಕೊಂಡುಕೊಂಡು ಟೆಲಿಪ್ರಿಂಟರ್ ಎಕ್ಸ್‌ಚೇಂಜ್ ಸೌಕರ್ಯವನ್ನು ಸ್ಥಾಪಿಸಿತು. ಆ ವರ್ಷ ದಿನಕ್ಕೆ ೫೦ ರಂತೆ ಮಾತ್ರ ಸುದ್ದಿಗಳನ್ನು ಸಾಗಿಸುತ್ತಿದ್ದ ಟೆಲಿಪ್ರಿಂಟರಿಗೆ ಈಗ ೪೦,೦೦೦ ವರ್ಗಣಿದಾರರಿದ್ದು ದಿನಕ್ಕೆ ೯೮,೦೦೦ ಸಮಾಚಾರಗಳು ಟೆಲಿಪ್ರಿಂಟರಿನಲ್ಲಿ ಹಾಯ್ದು ಹೋಗುತ್ತಿವೆ.

ಭಾರತಕ್ಕೆ ೧೯೩೭ರಲ್ಲಿ ಮೊದಲು ಟೆಲಿಪ್ರಿಂಟರ್ ಬಂತು. ಆಗ ರಾಯ್ಟರ್ ಸಂಸ್ಥೆಯ ಉಪಸಂಸ್ಥೆಯಾಗಿದ್ದ ಭಾರತದ ಅಸೋಸಿಯೇಟೆಡ್ ಪ್ರೆಸ್ ತನ್ನ ವರ್ಗಣಿದಾರರಿಗೆ ಸುದ್ದಿಗಳನ್ನು ತಲುಪಿಸಲು ಅದನ್ನುಪಯೋಗಿಸತೊಡಗಿತು. ಆದರೆ ಎಲ್ಲ ಪತ್ರಿಕೆಗಳಿಗೂ ಅದರ ಸೌಕರ್ಯ ಆಗ ಲಭಿಸಲಿಲ್ಲ.

ಎರಡನೇ ಮಹಾಯುದ್ಧ ಕಾಲದಲ್ಲಿ ಟೆಲಿಪ್ರಿಂಟರು ವಿಶೇಷ ಪ್ರಚಾರಕ್ಕೆ ಬಂತು. ಯುದ್ಧ ಸಾಮಗ್ರಿಗಳ ಉತ್ಪಾದನೆಯು ಸರಾಗವಾಗಿ, ತಪ್ಪುಗಳಿಲ್ಲದೆ, ಭರದಿಂದ, ಸುಸಂಯೋಜಿತವಾಗಿ ಸಾಗಬೇಕಾದರೆ ಆರ್ಡರುಗಳು ಸ್ಪಷ್ಟವಾಗಿ, ನಿಸ್ಸಂದಿಗ್ಧವಾಗಿ, ಅವಿಲಂಬವಾಗಿ ಕಾರಖಾನೆಗಳಿಗೆ ತಲಪುವುದು ಅಗತ್ಯವಾಗಿತ್ತು. ಟೆಲಿಪ್ರಿಂಟರಿಗಿಂತ ಇದಕ್ಕೆ ಅನುಕೂಲವಾದ ಉಪಕರಣ ಸಿಗುವುದು ಶಕ್ಯವಿರಲಿಲ್ಲ. ಮುಂದೆ ಚರ್ಚಿಲ್ಲರೂ ರೂಜವೆಲ್ಟರೂ ಟೆಲಿಪ್ರಿಂಟರ್ ಮೂಲಕವೇ "ಸಂಭಾಷಿಸ"ತೊಡಗಿದರು. ಟೆಲಿಫೋನಿಗಿಂತ ಹೆಚ್ಚು ಗೋಪ್ಯವಾಗಿ ಶತ್ರುವಿಗೆ ಸುಳಿವು ಹತ್ತದಂತೆ ಟೆಲಿಪ್ರಿಂಟರಿನಿಂದ ಸುದ್ದಿ ಕಳಿಸುವುದು ಸುಲಭವಾಗಿತ್ತು.

ಇಂದು ಟೆಲಿಪ್ರಿಂಟರ್ ಅದ್ಭುತ ಸುಧಾರಣೆಗಳನ್ನು ಕಂಡಿದೆ. ಟೆಲಿಟೈಪ್‌ಸೆಟರ್ ಎಂಬ ಹೊಸ ಯಂತ್ರವು ಟೆಲಿಪ್ರಿಂಟರ್ ಮೇಲೆ ಟೇಪುಗಳಲ್ಲಿ ಪಂಚ್ ಆಗಿ ಬಂದ ವಾರ್ತೆಯನ್ನು ಮನುಷ್ಯ ಸಹಾಯವಿಲ್ಲದೆ ನೇರವಾಗಿ ತಾನೇ ಇದ್ದಕ್ಕಿದ್ದಂತೆ ಲಿನೋಟೈಪ್ ಯಂತ್ರದಿಂದ ಮೊಳೆ ಜೋಡಿಸಿ ಕಂಪೋಜು ಮಾಡುತ್ತದೆ. ಹೀಗಾಗಿ ಲಂಡನ್ ಟೈಮ್ಸ್ ಮೊದಲಾದ ಪತ್ರಿಕೆಗಳು ತಡವಾಗಿ ಬಂದ ಮಹತ್ವದ ಸುದ್ದಿಗಳನ್ನು ನೇರವಾಗಿ ಮುದ್ರಣಕ್ಕೆ ಕಳಿಸಲು ಸಮರ್ಥವಾಗಿವೆ.

ಟೆಲಿಪ್ರಿಂಟರ್ ಯಂತ್ರದ ಕಾರಖಾನೆಗಳು ಈಗ ನಡೆಸಿರುವ ಕೆಲ ಸುಧಾರಣೆಗಳು ನಿಜವಾಗಿ

ಉಸಿರು ಕಟ್ಟಿಸುವಂತಿವೆ. ಮಿನಿಟಿಗೆ ೬೦೦ ಶಬ್ದಗಳನ್ನು ಹೊಡೆಯಬಲ್ಲ ಮಾದರಿ ಯಂತ್ರವೊಂದು ಸಿದ್ಧವಾಗಿದೆ. ಇದು ೧೦೦೦ ಶಬ್ದಗಳಿಗೆ ಬೇಗನೇ ಮುಟ್ಟಬಹುದು

ಭಾರತದಲ್ಲಿ ಇಂದು ಪ್ರೆಸ್ಟ್ ಟ್ರಸ್ಟು ತನಗೆ ಬೇಕಾದ ಎಲ್ಲ ಟೆಲಿಪ್ರಿಂಟರ್ ಯಂತ್ರೋಪಕರಣಗಳನ್ನು ತನ್ನ ಕಾರಖಾನೆಯಲ್ಲಿ ತಾನೇ ನಿರ್ಮಿಸುತ್ತಿದೆ. ಇಲ್ಲಿ ಈ ಯಂತ್ರ ವಿದೇಶಗಳ ವೈವಿಧ್ಯಮಯ ಉಪಯೋಗಕ್ಕೆ ಇನ್ನೂ ಬಂದಿರದಿದ್ದರೂ ಸುದ್ದಿಗಳನ್ನು ಪತ್ರಿಕೆಗಳಿಗೆ ವೇಗವಾಗಿ, ಬಹುಳವಾಗಿ, ಪೂರ್ಣವಾಗಿ ತಲುಪಿಸುವ ದೊಡ್ಡ ಕಾರ್ಯವನ್ನು ಮಾಡಿಕೊಟ್ಟಿದೆ. ಅದು ತಂತಿ ಇಲಾಖೆಯ ಬಂಧನದಿಂದ ಪತ್ರಿಕೆಗಳನ್ನು ಮುಕ್ತಗೊಳಿಸಿದೆ. ತಂತಿಯಿಂದ ಸಮಾಚಾರ ತರಿಸುವ ವಿಳಂಬ, ಅನಿಶ್ಚಿತತೆ, ಮಿತಿಮೀರಿದ ವೆಚ್ಚ ಇವುಗಳಿಲ್ಲದೆ ಟೆಲಿಪ್ರಿಂಟರಿನಿಂದ ಸುದ್ದಿ ಬರುವುದರಿಂದ ದೇಶದಲ್ಲಿ ವರ್ತಮಾನ ಪತ್ರಿಕೆಗಳ ದಕ್ಷತೆ ಬಹಳ ಹೆಚ್ಚಿದೆ.



## ಒಪ್ಪಂದ

ಅಮೇರಿಕದ ಮುಖ್ಯ ನ್ಯಾಯಾಧೀಶರಾದ ಅರ್ಲ್ ವಾರೆನ್ನರು ಭಾರತಕ್ಕೆ ಬಂದಾಗ ಅ. ಭಾ. ಆಕಾಶವಾಣಿಯವರು ಅವರಿಂದ ಭಾರತೀಯ ಜನತೆಗೆ ಒಂದು ಸಂದೇಶವನ್ನು ಅಪೇಕ್ಷಿಸಿದರು.

ಸಂದೇಶವನ್ನು ರಿಕಾರ್ಡ್ ಮಾಡಲು ಪತ್ನೀಸಮೇತರಾಗಿ ಆಕಾಶವಾಣಿ ಕಚೇರಿಗೆ ಅರ್ಲ್ ವಾರೆನ್ನರು ಬಂದಾಗ ಅಲ್ಲಿನ ಅಧಿಕಾರಿಗಳು ಶ್ರೀಮತಿ ವಾರೆನ್ನರನ್ನು ಕುರಿತು, “ ನೀವೂ ರಿಕಾರ್ಡ್ ಮಾಡಲು ಎರಡು ಮಾತು ಹೇಳುವಿರಾ ? ” ಎಂದು ಪ್ರಾರ್ಥಿಸಿದರು.

ಆಗ ನ್ಯಾಯಾಧೀಶರೆಂದರು : “ ಮದುವೆಯ ಕಾಲಕ್ಕೇ ನಮ್ಮಿಬ್ಬರಲ್ಲಿ ಒಂದು ಒಪ್ಪಂದವಾಗಿದೆ. ಏನೆಂದರೆ, ಮನೆಯ ಹೊರಗೆ ಮಾತಾಡುವ ಸಂದರ್ಭ ಬಂದಾಗೆಲ್ಲ ನಾನು ಮಾತಾಡಬೇಕು ; ಮನೆಯೊಳಗೆ ಮಾತಾಡುವ ಪ್ರಸಂಗ ಬಂದಾಗೆಲ್ಲ ಇವಳು ಮಾತಾಡಬೇಕು ಎಂದು. ”

ಶ್ರೀಮತಿಯವರು ನಸುನಕ್ಕರು ; ಶ್ರೀಯುತರು ಗಹಗಹಿಸಿದರು.

— ಜ್ಞಾನೋದಯ

*

ನಮ್ಮ ತೇಗಿನಲ್ಲಿ ಹೊರಬೀಳುವುದು ನಾವು ತಿಂದುದರ ವಾಸನೆಯೆ.

— ಕುವೆಂಪು

# “ಜೀವಂತವಿರುವಾಗಲೇ ನುಚ್ಚುನೂರುಗೈಯುತ್ತಿದ್ದಾರೆ ಇದನ್ನು ನೀವೇ ಭಾವಿಸಿರಿ”

‘ವಿಡಿಪೋಸರ್’ನ ನರಳಾಟ





ಭೂಮಿಯಡಿಯಿಂದ ನನ್ನನ್ನು ಕೊರೆದು ರಿಫೈನರಿಗೆ ಸಾಗಿಸಿದ ಮೇಲೆ ನನ್ನ ಅವಸ್ಥೆಯು ಈ ರೀತಿ ಯಾಗಿರುತ್ತದೆ. ರಿಫೈನರಿಯವರು ನನ್ನನ್ನು ಅನೇಕ ತರದಲ್ಲಿ ರಸಾಯನ ಪ್ರಯೋಗದೊಂದಿಗೆ ಪರಿಶುದ್ಧ ಗೊಳಿಸಿ ವಿವಿಧವಾದ ಪೆಟ್ರೋಲಿಯಂ ತಯಾರಿಕೆಗಳಿಗೆ ನನ್ನನ್ನು ಮಾರ್ಪಡಿಸುವರು.

ಶಾಸ್ತ್ರೀಯ ರೀತಿಯಲ್ಲಿ ತಿಳಿಸುವುದಾದರೆ ಈ ರೀತಿಯ ಶೋಧನೆಯಲ್ಲಿ ನಾನು ಕೆಲವು ತರದ ಪ್ರಾಕ್ಷನಲ್ ಡಿಸ್ಟಿಲೇಶನ್, ಕ್ಯಾಟಲಿಟಕ್ ಕ್ರಾಕಿಂಗ ಮತ್ತು ‘ಸ್ಪೀಟಸಿಂಗ್’ ಮುಂತಾದ ಮಹತ್ತರವಾದ ಪ್ರಯೋಗಗಳಿಗೆ ತುತ್ತಾಗಿ ರೂಪಾಂತರ ಹೊಂದುತ್ತಿದ್ದೇನೆ. ರಿಫೈನರಿಗೆ ಮುಟ್ಟಿದ ಕೂಡಲೇ ನನ್ನನ್ನು ಮೊದಲಿಗೆ ದೊಡ್ಡ ಭಟ್ಟಿಗೆ ಸುತ್ತಿರುವ ನಳಿಗೆಗಳ ಮುಖಾಂತರ ಬಿಸಿಗೈದು ಪ್ರಾಕ್ಷನೇಟಿಂಗ್ ಅಥವಾ ಬಬಲ್ ಗೋಪುರಕ್ಕೆ ಭರದಿಂದ ಒಯ್ಯುತ್ತಾರೆ. ಅಲ್ಲಿಂದ ನನ್ನನ್ನು ತೂತುಗಳ ಮುಖೇನ ತರತರದ ಉಷ್ಣತೆಯಿಂದಿರುವ ವಿವಿಧ ತಟ್ಟೆಗಳಿಗೆ ಒಯ್ಯುತ್ತಾರೆ. ಇಲ್ಲಿ ನನ್ನ ಗ್ಯಾಸಲಿನ್, ಸೀಮೆಯೆಣ್ಣೆ, ಮತ್ತು ಲುಬ್ರಿಕೇಟಿಂಗ್ ಎಣ್ಣೆಗಳ ಭಾಗವನ್ನು ವಿವಿಧ ಮಟ್ಟದಲ್ಲಿ ಬೇರೆಗೈಯುತ್ತಾರೆ.

ಅನೇಕ ಭಾಗಗಳಿಂದ ಕೂಡಿದ, ದುರ್ಗಮವಾದ, ನನ್ನನ್ನು ಪರಿಶುದ್ಧಗೈಯುವ ಕಾರ್ಯದಲ್ಲಿ ಡಿಸ್ಟಿಲೇಶನ್ ಒಂದಾಗಿದೆ. ಆದರೆ ನನ್ನ ಕಾರ್ಯವು ಇಲ್ಲಿಗೆ ಮುಗಿಯುವುದಿಲ್ಲ. ಆಮತ್ತೆ ನನ್ನ ಮೇಲೆ ಇನ್ನೊಂದು ತರದ ‘ಕ್ಯಾಟಲಿಟಕ್ ಕ್ರಾಕಿಂಗ್’ ಪ್ರಯೋಗವನ್ನು ಗೈಯುತ್ತಿದ್ದಾರೆ. ನಾನು ಜೀವನದಲ್ಲಿ ಅನುಭವಿಸಿರುವ ಈ ಪ್ರಯೋಗದ ಮನರಂಜಕ ಕಥೆಯನ್ನು ಮತ್ತೊಂದು ಪ್ರತಿಯಲ್ಲಿ ತಿಳಿಸಲಿರುವೆನು.



**ಸ್ಟೇನ್‌ವೇಕ್ — ಪ್ರಗತಿಯ ಪ್ರತೀಕ**

PSSVOC-59-5/57

ಸುಳ್ಳುಗಾರರ ರಾಜ

# ಬುರುಡೆ ಬಿಂದಾಚಾರ್ಯರು

ರಾವ್ ಬಹಾದೂರ್




ಬುರುಡೆ ಬಿಂದಾಚಾರ್ಯರಿಗೆ ಆ ಅಡ್ಡ ಹೆಸರು ಹೇಗೆ ಬಂತು ಎಂದು ಕೇಳಿದರೆ ಅವರು ಅದರ ಇತಿಹಾಸವನ್ನೇ ಬಿಚ್ಚುತ್ತಿದ್ದರು. "ಬುರುಡೆ ಎಂಬುದು ನಮ್ಮ ಮನೆತನದ ಅಡ್ಡ ಹೆಸರು. ನಮ್ಮಜ್ಜ ನರಗುಂದ ಬಂಡಾಯದಲ್ಲಿ ವಹಿಸಿದ ಪಾತ್ರದಿಂದ ಬಂದ ಬಿರುದು" ಎಂದು ಅವರು ಕೇಳಿದವರ ಕುತೂಹಲ ಕೆರಳಿಸುತ್ತಿದ್ದರು.

೧೮೫೭ರ ಸ್ವಾತಂತ್ರ್ಯ ಸಮರದ ಶತಸಾಂವತ್ಸರಿಕ ಸಮಾರಂಭವನ್ನು ಆಚರಿಸುತ್ತಿರುವ ನಿಮಗೆ ಅವರ ಅಜ್ಜನ ವೃತ್ತಾಂತ ಖಂಡಿತ ರುಚಿಸಬೇಕು. ಅದರ ಸಾರಾಂಶ ಹೀಗಿದೆ: ಬಂಡಾಯದಲ್ಲಿ ಸೋತ ಮೇಲೆ ಕಣ್ಮರೆಯಾದ ಬಾಬಾಸಾಹೇಬನನ್ನು ಹುಡುಕುತ್ತ ಒಂದು ಬ್ರಿಟಿಶ ಸೈನಿಕ ತಂಡ ಹೊರಟಿತ್ತು. ಬೆಳಗಿನ ಜಾವ. ಬಿಂದಾಚಾರ್ಯರ ಅಜ್ಜ ಬಿಂದಾಚಾರ್ಯರು ಊರ ಬಾವಿಗೆ ಸ್ನಾನಕ್ಕೆ ಹೋಗಿದ್ದಾಗ ಈ ಸೈನಿಕರು ತಮ್ಮ ಕಡೆ ಬರುತ್ತಿರುವುದನ್ನು ಕಂಡರು. ಸೈನಿಕರೂ ಇವರನ್ನು ನೋಡಿದ್ದರು. ಆದರೆ ಅವರು ಹತ್ತಿರ ಬರುವುದರೊಳಗೆ ಬಿಂದಾಚಾರ್ಯರು ಬಾವಿಯಲ್ಲಿ ಒಂದು ಬುರುಡೆಯನ್ನು ತೇಲಬಿಟ್ಟು ಪ್ರಾಣಾಯಾಮದಿಂದ ಶ್ವಾಸನಿರೋಧ ಮಾಡಿ ನೀರಲ್ಲಿ ಮುಳುಗಿ ತಳದಲ್ಲಿ ಕುಳಿತುಬಿಟ್ಟರು. ಬಾವಿಯಲ್ಲಿದ್ದ ಭವ್ಯ ಮೂರ್ತಿಯ ಬ್ರಾಹ್ಮಣ ಮೇಲೆ ಬಂದ ಮೇಲೆ ಬಾಬಾಸಾಹೇಬನ ಚಲನವಲನಗಳನ್ನು ಕೇಳಿ ತಿಳಿದುಕೊಳ್ಳಬೇಕೆಂದು ಬಾವಿಯ ದಂಡೆಯಲ್ಲಿ ಸೈನಿಕರು ಕಾದು ಕುಳಿತರು. ಆದರೆ ಬೆಳಗಾದರೂ ಬಿಂದಾಚಾರ್ಯರು ಮೇಲೆ ಬರಲೇ ಇಲ್ಲ. ಬೆಳಗಾದ ಮೇಲೆ ನೋಡುವಾಗ ಒಂದು ದೊಡ್ಡ ಬುರುಡೆ ಮಾತ್ರ ತೇಲುತ್ತಿತ್ತು. ಬುರುಡೆಯನ್ನು ಬ್ರಾಹ್ಮಣನ ತಲೆಯೆಂದು ಭ್ರಮಿಸಿ ಮೂರು ತಾಸು ಕಾದುಕುಳಿತ ತಮ್ಮ

ಹೆಡ್ಡತನಕ್ಕೆ ನಾಚಿಕೊಂಡು ಸೈನಿಕರು ಹೊರಟು ಹೋದರು. ಮಧ್ಯಾಹ್ನ ೧೨ ಗಂಟೆಗೆ ಬಿಂದಾಚಾರ್ಯರು ಪ್ರಾಣಾಯಾಮವನ್ನು ಉಪಸಂಹರಿಸಿ ಬಾವಿಯಿಂದ ಮೇಲೆದ್ದು ಮನೆಗೆ ಹೋಗಿಬಿಟ್ಟರು. ಹೀಗೆ ಬುರುಡೆಯ ಸಹಾಯದಿಂದ ಬ್ರಿಟಿಶರನ್ನು ದಿಕ್ಕುತಪ್ಪಿಸಿದ ಬಿಂದಾಚಾರ್ಯರ ಚಾತುರ್ಯಕ್ಕೆ ಬೊಟ್ಟುಕಚ್ಚಿ ಊರವರು ಅವರನ್ನು ಬುರುಡೆ ಬಿಂದಾಚಾರ್ಯರೆಂದೇ ಕರೆಯತೊಡಗಿದರು.

"ನಮ್ಮ ಅಜ್ಜ ಇಷ್ಟು ಮಾಡಿದರೂ ಪಾಪ, ಬಾಬಾಸಾಹೇಬ ಉಳಿಯಲಿಲ್ಲ. ದೈವಚಿತ್ತ, ಯಾರು ಏನು ಮಾಡಬಲ್ಲರು?" ಎಂದು ಕಥೆ ಹೇಳಿ ಇಮ್ಮಡಿ ಬುರುಡೆ ಬಿಂದಾಚಾರ್ಯರು ವಿಷಾದದ ನಿಟ್ಟುಸಿರು ಬಿಡುತ್ತಿದ್ದರು.

ಬಿಂದಾಚಾರ್ಯರ ಬೆನ್ನ ಹಿಂದೆ ಜನ ಇದೂ ಒಂದು ಬುರುಡೆ ಎಂದು ಹೇಳುತ್ತಿದ್ದರು. ವಾಸ್ತ-ವಿಕಾಂಶವೆಂದರೆ ಮೂರು ತಲೆಯಿಂದ ಸುಳ್ಳು ಹೇಳುವುದರಲ್ಲಿ ಪ್ರವೀಣರೆಂದು ಅವರ ಮನೆತನಕ್ಕೆ "ಬುರುಡೆ" ಎಂದು ಅಡ್ಡ ಹೆಸರು ಬಿದ್ದಿತ್ತಂತೆ ಆದರೆ ಬಿಂದಾಚಾರ್ಯರು ಅಪ್ರತ್ಯಕ್ಷವಾಗಿಯೂ ಈ ಟೀಕೆಯನ್ನು ಸಹಿಸುತ್ತಿರಲಿಲ್ಲ. ಹೀಗೆ ಹೇಳುವವರನ್ನೇ ಅವರು ಹಾಸ್ಯಮಾಡಿ ಬಿಡುತ್ತಿದ್ದರು.

ಬುರುಡೆ ಬಿಂದಾಚಾರ್ಯರ ಪೂರ್ವ ಚರಿತ್ರೆ ತುಸು ಮುಸುಕಾಗಿಯೇ ಇದೆ. ಮೊದಲು ಗಾಂವಠಿ ಶಾಲೆ ತೆರೆದು ಉದರಂಭರಣ ಮಾಡುತ್ತಿದ್ದ ತಾವು ಒಂದು ದೇಶಿ ಸಂಸ್ಥಾನದಲ್ಲಿ ಫಾರೆಸ್ಟ್ ಆಫೀಸರ, ಸರಕಾರಿ ಡಾಕ್ಟರ, ಶಿಕ್ಷಣಾಧಿಕಾರಿಯಾಗಿ ನಿವೃತ್ತಿ ಹೊಂದಿ ಬಂದೆವೆಂದು ಬಿಂದಾಚಾರ್ಯರ ಹೇಳಿಕೆ. ದೇಶಿ ಸಂಸ್ಥಾನಿಕರ ಲಹರಿಗನುಗುಣವಾಗಿ ಫೌಜದಾರನು ನ್ಯಾಯಾಧೀಶನಾಗಿ, ನ್ಯಾಯಾಧೀಶನು ಹೆಡ್ಮಾಸ್ತರನಾಗಿ, ಸರಕಾರಿ ಡಾಕ್ಟರನು ದಿವಾಣನಾಗಿ ನೇಮಕ ಹೊಂದುವುದು ಶಕ್ಯಕೋಟಿಯದೇ ಆದುದರಿಂದ ಬಿಂದಾಚಾರ್ಯರ ಹೇಳಿಕೆಯಲ್ಲಿ ಸತ್ಯಾಂಶವಿದ್ದಿರಬಹುದು. ಆದರೆ ಯಾವುದನ್ನೂ ಇದ್ದಕ್ಕಿದ್ದಂತೆ ಹೇಳುವುದು ಹೆಡ್ಡರ ಲಕ್ಷಣವೆಂದೆಣಿಸುತ್ತಿದ್ದ ಬಿಂದಾಚಾರ್ಯರ ಬಾಯಿಂದ ಬಂದುದರಿಂದ ಜನ ಅದನ್ನೂ ಬುರುಡೆಯೆಂದೇ ಭಾವಿಸಿದ್ದರಷ್ಟೇ.

ಆದರೂ ಬಿಂದಾಚಾರ್ಯರು ಬಾಯಿ ತೆರೆದರೆ ಅಲ್ಲಿ ಜನ ಸೇರಿತೆಂದೇ ತಿಳಿಯಬೇಕು. ಅವರ ಜ್ಞಾನಕ್ಕೆ ನಿಲುಕದ ವಿಷಯವೇ ಇಲ್ಲ. ಅವರು ವರ್ಣಿಸುವಾಗ ಇಡೀ ಚಿತ್ರವೇ ಕಣ್ಣಿಗೆ ಕಟ್ಟಿದಂತಾಗುತ್ತಿತ್ತು. ಪ್ರತಿಯೊಂದು ಸಂಗತಿಯಲ್ಲಿ ತಾವು ಪೂರ್ಣಪ್ರಜ್ಞರೆಂಬ ಮಾತನ್ನು ಅವರು ಬಿಂಬಿಸುವಾಗ ಕ್ಷಣಕಾಲ ಬುರುಡೆಗಳೂ ಗಟ್ಟಿ ಸತ್ಯಗಳಾಗಿ ಕಾಣಿಸುತ್ತಿದ್ದವು.

ಒಮ್ಮೆ ನಮ್ಮೂರ ಹರಟೆಯ ಅಡ್ಡೆಯಾದ ಗೋಪಾಲಕೃಷ್ಣನ ಗುಡಿಯಲ್ಲಿ ಸಂಜೆ ಸೇರಿದ ಸಭೆಯಲ್ಲಿ ಯಾರೋ ಕರೀಂಖಾನರೇ ಸಂಗೀತದಲ್ಲಿ ಅಗ್ರೇಸರರೆಂದು ಹೇಳಿಬಿಟ್ಟರು. ಸರಿ, ಕೂಡಲೇ ಬಿಂದಾಚಾರ್ಯರು ಅದರಲ್ಲಿ ಪ್ರವೇಶ ಮಾಡಿ, "ಬಾಯಿ ಹಾಡಿಕೆಯೆಂದರೆ ಸಂಗೀತವೇ ಅಲ್ಲ; ತಂತುವಾದ್ಯವೇ ನಿಜವಾದ ಸಂಗೀತಗಾರನ ಒರೆಗಲ್ಲು" ಎಂದು ತಮ್ಮ ಅಭಿಪ್ರಾಯವನ್ನು ಮಂಡಿಸಿದರು.

"ತಂತುವಾದ್ಯ ಅಂಥಿಂಥವರ ತುತ್ತಲ್ಲ; ಅಸಾಧಾರಣ ತಪಸ್ಸಿದ್ಧಿ ಬೇಕು ಅದಕ್ಕೆ. ಬುರುಡೆ ಅಂತ ತಿಳೀಬೇಡಿರಿ. ಹನ್ನೆರಡು ವರ್ಷ ಅಖಂಡ ಸಾಧನೆಯಿಂದ ತಂತೀವಾದ್ಯವನ್ನು ನಾನು ಹಸ್ತಗತ ಪಡಿಸಿಕೊಂಡೆ. ಒಂದು ಸಲ ನಾನು ಫಾರೆಸ್ಟ್ ಆಫೀಸರನಾಗಿದ್ದಾಗ—"

"ಏನು, ಏನಾಯಿತು?" ನಾವೆಲ್ಲ ಒಮ್ಮೆಲೇ ಕೇಳಿದೆವು.

"ಫಾರೆಸ್ಟ್ ಆಫೀಸರನಾಗಿದ್ದಾಗ ಒಮ್ಮೆ ಫಾರೆಸ್ಟ್ ಇನ್‌ಸ್ಪೆಕ್ಷನಿಗೆ ಹೋಗಿದ್ದೆ. ಅಪರಾಹ್ನದ ಹೊತ್ತು. ಡಾಕ್ ಬಂಗಲೆಯೊಳಗೆ ಕೂತು ನಾಗಸ್ವರ ರಾಗದ ಒಂದು ಚೀಜು ಬಾರಿಸುತ್ತ ಬಾರಿಸುತ್ತ ನಾದದ ಉನ್ಮಾದದಲ್ಲಿ ತನ್ಮಯನಾಗಿ ಬಿಟ್ಟೆ. ನಮ್ಮ ಸಿಪಾಯಿ ಬಾಗಿಲ ಮೇಲೆ ಒಂದು ಕೈಯಿಟ್ಟು ಕಲ್ಲು ಕಂಬದಂತೆ ನಿಂತುಬಿಟ್ಟಿದ್ದ. ಕತ್ತಲಾಯಿತು, ದೀಪ ಹಚ್ಚಬೇಕೆಂಬ ಭಾನ

ಸಹಿತ ಅವನಿಗಿಲ್ಲ. ನನಗೋ ಈ ಸಂಗೀತ ಸಮಾಧಿಯಲ್ಲಿ ಕತ್ತಲಾದದ್ದು ಲಕ್ಷ್ಯಕ್ಕೆ ಬರುವುದು ಶಕ್ಯವೇ ಇದ್ದಿಲ್ಲ.

"ಫಾರೆಸ್ಟ್ ಗಾರ್ಡ್ ಬಂದು ಸಿಪಾಯಿಯ ಹೆಗಲ ಮೇಲೆ ಕೈಯಿಟ್ಟಾಗಲೇ ಅವನಿಗೆ ಎಚ್ಚರವಾದದ್ದು. ಲಗುಬಗೆಯಿಂದ ದೀಪ ಹೊತ್ತಿಸಿ, ನಾನು ತಂತುವಾದ್ಯ ಬಾರಿಸುತ್ತಿದ್ದ ಕೋಣೆಯೊಳಗೆ ಒಂದು ಕಾಲಿಟ್ಟವನೇ ಚಿಟ್ಟನೆ ಚೀರಿ ಕಂದೀಲನ್ನು ನೆಲಕ್ಕೆ ಕೆಡವಿಬಿಟ್ಟ.

"ನನ್ನ ಸಮಾಧಿಭಂಗವಾಗಿ ಕಣ್ಣು ತೆರೆದೆ: ಎದುರಿಗೇ ದೊಡ್ಡ ಘಟಸರ್ಪ: ಮೇಲೆ ಪೀತಾಂಬರದ ಬಂಗಾರದ ಜರಿ ಅಂಚಿನಂತೆ ಕಾಣುವ ಮೈಬಣ್ಣ. ಗುಲುಗುಂಜಿಯಂಥ ಎರಡು ಕಣ್ಣು. ಥಲೋ ಒಂದು ಸುಪ್ಪಲಿಯಷ್ಟು ಹೆಡೆ ತೆಗೆದು ಸಂಗೀತಮುಗ್ಧವಾಗಿ ಹೆಡೆ ಅಲ್ಲಾಡಿಸುತ್ತ ಕುಳಿತಿತ್ತು. ನೀವು ಈ ಸ್ಥಿತಿಯಲ್ಲಿ ಸಿಕ್ಕಿದ್ದರೆ, ಏನು ಮಾಡುತ್ತಿದ್ದಿರಿ ?"

"ಸಿಪಾಯಿಗಿಂತ ಗಟ್ಟಿಯಾಗಿ ಚೀರಿ ಜನರನ್ನು ಕೂಡಿಸಿ ಹಾವನ್ನು ಕೊಲ್ಲಿಸುತ್ತಿದ್ದೆವು" ಎಂದರೊಬ್ಬರು.

ಬಿಂದಾಚಾರ್ಯರು ನಕ್ಕು ಮುಂದುವರಿಸಿದರು : "ನನಗೆ ಗೊತ್ತು ಹೀಗನ್ನುವಿರೆಂದು. ಆದರೆ ಇದು ಕುತ್ತಿನಿಂದ ಪಾರಾಗುವ ಮಾರ್ಗವಲ್ಲ. ಹಾವು ಸಂಗೀತಲುಬ್ಧ ಪ್ರಾಣಿ. ನಾಗಸ್ವರಕ್ಕೆ ಮುಗ್ಧವಾಗಿ ಮೈಮರೆತಿದ್ದಾಗ ಒಮ್ಮೆಲೇ ಸಂಗೀತ ಕಟ್ಟಾದರೆ ರೌದ್ರಾವೇಶದಿಂದ ನನ್ನ ಮೇಲೆ ಹಾರಿ ಪ್ರಾಣವನ್ನು ಹೀರುವುದೆಂದು ನನಗೆ ಗೊತ್ತಿತ್ತು. ನಾನು ಅಂಜಲಿಲ್ಲ. ಹಾಗೇ ನಾಗಸ್ವರದ ಆಲಾಪ ಮುಂದೆ ಸಾಗಿಸಿದೆ. ಮೆಲ್ಲನೆ ಎದ್ದು ಇನ್ನೊಂದು ಬಾಗಿಲಿಂದ ಮತ್ತೊಂದು ಕೋಣೆಗೆ ಸಾಗಿದೆ. ಹಾವು ನಾದ ಕೇಳುತ್ತ ನನ್ನ ಬೆನ್ನು ಹತ್ತಿತು. ಬಂಗ್ಲೆಯ ಹಿಂದಿನ ಬಾಗಿಲಿಂದ ಹೊರಬಿದ್ದು ಅಡವಿಯ ಕಾಲುದಾರಿಯಿಂದ ಹೊರಟುಬಿಟ್ಟೆ. ಹಾವು ಹಿಂದಿನಿಂದ ಬಂದೇ ಬಂತು. ಒಂದು ಫರ್ಲಾಂಗು ಹೋದ ಮೇಲೆ ಏನು ಮಾಡಿದೆ ಅಂತೀರಿ ?"

"ಏನು ಮಾಡಿದಿರಿ ಹೇಳಿಬಿಡ್ರಿ" ಎಂದು ಎಲ್ಲರೂ ಕೂಗಿದೆವು.

"ಹಾಗೇ ಬಾರಿಸುತ್ತ ಕೆಲಹೊತ್ತು ಕುಳಿತಿದ್ದೆ. ಹಾವು ಹೆಡೆಯಾಡಿಸುತ್ತ ನಿಂತಿತ್ತು. ಅಷ್ಟರಲ್ಲಿ ಕಂದೀಲು ಬಡಿಗೆ ಹಿಡಿದುಕೊಂಡು ಗಾರ್ಡ್ ಮತ್ತು ಸಿಪಾಯಿ ಬಂದರು. ನಾನು ಚಟ್ಟನೆ ತಂತಿಯನ್ನು ಹರಿದು ಎದ್ದು ನಿಂತೆ. ಹಾವಿನ ಸಮಾಧಿಭಂಗವಾಗಿ ಅದೂ ನನ್ನಷ್ಟೇ ಎತ್ತರಕ್ಕೆ ಬಾಲವೂರಿ ಎದ್ದು ನಿಂತಿತು. ಗಾರ್ಡನು ಬಡಿಗೆಯಿಂದ ಅದರ ಮೇಲೊಂದೇಟು ಬೀಸಿದ. ಹೊಡೆತ ತಿಂದು ಹಾವು ಹುಲ್ಲಿನಲ್ಲಿ ತಲೆ ಮರೆಸಿಕೊಂಡು ಹರಿದುಹೋಯಿತು."

ಕಥೆ ನಮ್ಮ ಗಂಟಲಲ್ಲಿಳಿಯಲು ಸ್ವಲ್ಪ ಅವಕಾಶ ಕೊಟ್ಟು ಬಿಂದಾಚಾರ್ಯರು ಉಪಸಂಹಾರ ಮಾಡಿದರು. "ಸಂಗೀತವೆಂದರೆ ಇದು—ಹಾವಿನಂಥ ಹಾವು ಮೈಮರೆತು ನಿಲ್ಲುವುದು. ಗಾಯಕ ಹಾಡಿದರೆ ಮನುಷ್ಯರು ತಲೆದೂಗಬಹುದು. ಆದರೆ ಪಶುಪಕ್ಷಿ ಉರಗಗಳನ್ನು ಮೈಮರೆಸುವಂಥದು ತಂತುವಾದ್ಯ. ಅಂತೆಯೇ ಅದು ಶ್ರೇಷ್ಠ ಅಂದದ್ದು ನಾನು."

ಎಲ್ಲರೂ ಸೈ ಸೈ ಎಂದು ಬಿಂದಾಚಾರ್ಯರಿಗೆ ಜಯಪತ್ರ ಕೊಟ್ಟರು.

"ಅವೊತ್ತು ತಂತೀ ಹರಿದ ಮೇಲೆ ಇನ್ನು ತಂತಿವಾದ್ಯ ಕೈಯಿಂದ ಮುಟ್ಟೋದಿಲ್ಲ ಅಂತ ಪ್ರತಿಜ್ಞೆ ಮಾಡಿದೆ ಏನಪ್ಪಾ. ಈವೊತ್ತಿಗೂ ಆ ಪ್ರತಿಜ್ಞೆ ಕಾಯಂ ಇದೆ. ಈಗ ಬಾರಿಸು ಅಂದರೆ ಬಾರಿಸೋ ಹಾಗಿಲ್ಲ."

"ಅಂಥ ಘಟಸರ್ಪವನ್ನು ನೋಡಿ ಅಂಜದಿದ್ದ ನೀವು ಧೈರ್ಯಶಾಲಿಗಳೇ" ಎಂದರೊಬ್ಬರು.

ತಮ್ಮ ಪ್ರಶಂಸೆಯೇ ಇರಲೊಲ್ಲದೇಕೆ, ಇನ್ನೊಬ್ಬರು ಹೇಳಿದ್ದನ್ನು ನಿರಾಕರಿಸುವ ಸ್ವಭಾವ ಬಿಂದಾಚಾರ್ಯರದು. ಅವರು ತಿರಸ್ಕಾರದಿಂದ ನುಡಿದರು : "ಇದರಲ್ಲೇನಿದೆ ಧೈರ್ಯ ? ಬಂಗಲೆಯಲ್ಲೇ ಹಾವಿನ ಹೆಡೆಗೆ ಏಟು ಹಾಕಿ ಕೊಂದು ಬಿಡಬಹುದಿತ್ತು. ಆದರೆ ನನಗೆ ತಂತುವಾದ್ಯದ ಸಾಮರ್ಥ್ಯ ಪರೀಕ್ಷಿಸಬೇಕಿತ್ತು, ಅದಕ್ಕೇ ಅಡವಿಯವರೆಗೆ ಅದನ್ನು ಕರೆದೊಯ್ದೆ. ಇದನ್ನೇ

ಧೈರ್ಯವೆಂದರೆ ನಾನು ಕರಡಿಯನ್ನೆದುರಿಸಿದ ಸಂಗತಿ ಕೇಳಿದರೆ ಏನೆಂದುಕೊಳ್ಳುವಿರೊ ?''

'' ಏನು ಹೇಳ್ರಿ ಹೇಳ್ರಿ '' ಎಂದು ಎಲ್ಲರೂ ಪಟ್ಟು ಹಿಡಿದರು.

ಆಚಾರ್ಯರು ಬಡಿಗೆ ಊರಿ ಹೊರಡುವ ಸಿದ್ಧತೆಯಲ್ಲಿದ್ದವರು ಪುನಃ ಕುಳಿತರು. '' ಈಗ ವಯಸ್ಸಾಗಿ ಹೋಯಿತು. ಶ್ರೀಹರಿ ಇಚ್ಛಾ. ನಾವು ಹರೆಯದ ಕಾಲಕ್ಕೆ ಮಾಡಿದ ಒಂದೊಂದು ಕೆಲಸ ಕೇಳಿದರೆ ನೀವು ಬೆಚ್ಚಿಬೀಳಬಹುದು. ಈಗ ಅಂರ ಎಡಬಲ ವಯಸ್ಸಾಯಿತು. ಆಗ ಭೀಮಸೇನನಂಥಾ ಬಲಾ ಕೊಟ್ಟಿದ್ದ. ನಾವೂ ಹಾಗೇ ಕೆಲಸಾ ಮಾಡಿ ತೋರಿಸುತಿದ್ದೆವು ತೀರಿತು."

'' ಹೇಳ್ರಿ ಅಜ್ಜಾ, ನಿಮ್ಮ ಸಾಹಸದ ಕಥಿ ?" ಅಂದನೊಬ್ಬ ಹುಡುಗ.

'' ರಂಡೇಗಂಡಾ, ಕಥೆ ಅಂತೀಯಾ, ಕಥೆ ಅಲ್ಲ ಇದು, ಸ್ವಂತ ಅನುಭವ. ಈಗಿನ ಜನಕ್ಕೆ ಶಕ್ತಿ ಇಲ್ಲ, ನಾವು ಹೇಳಿದ್ದು ಕಥೆ ಅನಿಸ್ತದೆ. ನಾವು ಹಾಲು ಕುಡಿದಷ್ಟು ನೀವು ನೀರು ಕುಡಿಯೋದಿಲ್ಲ. ಆಗಿನ ಕಾಲಾನೇ ಹಾಂಗಿತ್ತು ಅನ್ರಿ.

'' ಇರಲಿ, ಒಂದು ದಿನಾ ಪತ್ರಾವಳಿ ಹಚ್ಚಲಿಕ್ಕೆ ಮುತ್ತುಲ ಎಲೆ ತರಬೇಕು ಅಂತ ನಸುಕಿನಲ್ಲಿ ಎದ್ದು ಅಡವಿಯೊಳಗೆ ಹೋಗಿದ್ದೆ. ದೊಡ್ಡ ಗಿಡಾಹತ್ತಿ ಸಾಕಷ್ಟು ಎಲೆ ಹರಿದು ಕೆಳಗೆ ಒಗೆದು ಇಳಿಯಲಿಕ್ಕೆ ಅಂತ ಟೊಂಗೆ ಟಿಸಿಲೊಡೆದ ಭಾಗಕ್ಕೆ ಬಂದು ಕೆಳಗೆ ನೋಡಿದರೆ ಕೆಳಗೆ ಕರಡೀ ಹಿಂಡು! ಎಣಿಸಿದೆ. ಒಂದು, ಎರಡು, ಮೂರು, ನಾಲ್ಕು, ಐದು, ಆರು. ಕೆಳಗೆ ಇಳಿದರೆ ಅವು ನನ್ನನ್ನು ಹಿಡಿದು ಕಟ್ಟಾಡಿಸಿ ಕೊಲ್ಲದೆ ಬಿಡವು ಅನಿಸಿತು. ಅವು ಹೋಗುವವರೆಗೆ ಗಿಡದ ಮೇಲೇ ಉಳಿಯುವುದು ಅಂತ ಅಲ್ಲಿಯೇ ಕುಳಿತುಕೊಂಡೆ. ಅವು ನನ್ನನ್ನು ನೋಡಿದ್ದವು; ನನ್ನನ್ನು ಹೀಗೇ ಬಿಟ್ಟರೆ ಕೆಳಗಿಳಿದು ತಮ್ಮ ಜೀವಕ್ಕೇನಾದರೂ ಮಾಡಬಹುದಂತ ಅವು ಲೆಕ್ಕ ಹಾಕಿರಬೇಕು. ಅವು ಕೆಳಗೆ ಕಾದವು, ನಾನು ಮೇಲೆ ಕಾದೆ.

'' ಒಂದು ತಾಸು ಕಳೆಯಿತು. ಕರಡಿಗಳು ಕಾಯುವುದು ಬಿಟ್ಟು ಗಿಡದ ಮೇಲೆ ಏರಿ ಬರಲಿಕ್ಕೆ ಹತ್ತಿದವು. ಕರಡಿ ಗಿಡ ಹತ್ತುವಾಗ ಮನುಷ್ಯರಂತೆ ಹತ್ತುವದಿಲ್ಲ ಎಂದು ನಿಮಗೆ ಗೊತ್ತಿರಲಿಕ್ಕಿಲ್ಲ. ಹ್ಯಾಗೆ ಗೊತ್ತಾಗಬೇಕು? ನೋಡಿರಬೇಕಲ್ಲ. ಅವು ಗಿಡದ ಬುಡಕ್ಕೆ ಬಂದು ಶೀರ್ಷಾಸನ ಹಾಕಿದಂತೆ ತಲೆ ಕೆಳಗೆ ಮಾಡಿ ನಿಂತು ಆ ಸ್ಥಿತಿಯಲ್ಲೇ ಹಿಂದು-ಹಿಂದಾಗಿ ಹತ್ತುವವು. ಮೊದಲು ಒಂದು ಕರಡಿ, ಅದರ ಹಿಂದೆ ಇನ್ನೊಂದು ಹೀಗೇ ಆರು ಕರಡಿಗಳು ಗಿಡಕ್ಕೆ ತೆಕ್ಕೆ ಬಿದ್ದು ಮೇಲೇರತೊಡಗಿದ್ದವು.

" ಇನ್ನು ಸುಮ್ಮನೆ ಕುಳಿತರೆ ಉಳಿಗಾಲವಿಲ್ಲೆಂದು ನನಗೆ ಗೊತ್ತಾಗಿಬಿಟ್ಟಿತು. ಪ್ರಸಂಗ ಎದುರಿಸಲು ನಿರ್ಧಾರ ಮಾಡಿ ಸಜ್ಜಾದೆ. ಎಲ್ಲಕ್ಕೂ ಮೇಲಿನ ಕರಡಿ ಕಾಲಿಗೆ ಸರಿಯಾಗಿ ನಿಲುಕುವಷ್ಟು ಹತ್ತಿರ ಬರುವವರೆಗೆ ಕಾದೆ. ಅದು ಕಾಲಿನ ಅಳವಿನಲ್ಲಿ ಬಂದದ್ದೇ ತಡ, ಝಾಡಿಸಿ ಅದರ ಪೃಷ್ಠಕ್ಕೆ ಒದ್ದೇಬಿಟ್ಟೆ. ಏನಾಯಿತಂತೀರಿ ಆಗ? ಹೀಗಾದೀತೆಂದು ನಾನು ಕೂಡ ಎಣಿಸಿರದಷ್ಟು ಮೋಜಿನ ಸಂಗತಿ. ನಾನು ಒದ್ದದ್ದು ಒಂದೇ ಕರಡಿಗೆ. ಆದರೆ ಅದು ಕೆಳಗೆ ತಳ್ಳಲ್ಪಟ್ಟ ರಭಸಕ್ಕೆ ಅದರ ತಲೆ ಕೆಳಗಿನದರ ಪೃಷ್ಠದೊಳಗೆ, ಎರಡನೇದು ಮೂರನೇದರೊಳಗೆ ಹೀಗೆ ಸೇರಿಕೊಂಡು ಒಂದಕ್ಕೊಂದು ಪೋಣಿಸಿದಂತಾಗಿ ಆರೂ ಕರಡಿಗಳ ಮಾಲೆಯೇ ನೆಲಕ್ಕೆ ಬಿತ್ತು.

'' ನನ್ನ ಮೈಲಿ ಏನೋ ಆವೇಶ ಬಂದಂತಾಗಿ ಬಿಟ್ಟಿತ್ತು. ಕೂಡಲೆ ಕೆಳಗೆ ಜಿಗಿದುಬಿಟ್ಟೆ. ನೆಲಕ್ಕೆ ಅಪ್ಪಳಿಸಿದ್ದರೆ ಕಾಲೇ ಮುರಿದುಕೊಳ್ಳಬೇಕಾಗುತ್ತಿತ್ತು. ಪುಣ್ಯಕ್ಕೆ ದೇವರು ಕಾಪಾಡಿದ. ನಾನು ಬೀಳುವುದಕ್ಕೂ ಕರಡಿ ಮಾಲೆ ಒದ್ದಾಡುತ್ತ ಅಲ್ಲೇ ಬರುವುದಕ್ಕೂ ಸರಿಹೋಯಿತು. ನಾನು ಅವುಗಳ ಮೇಲೆಯೇ ಬಿದ್ದೆ. ಗಾದಿಯ ಹಾಗೆ ನನ್ನ ಕಾಲಿಗೆ ಅನಿಸಿತು. ಆದರೆ ಆ ಹೊಡೆತಕ್ಕೆ ಕರಡಿಗಳು ಪ್ರಾಣಬಿಟ್ಟವು.

" ಆ ದೃಶ್ಯ—ಕರಡೀ ಮಾಲೆ— ಫೋಟೋ ತೆಗೆದು ಇಡುವ ಹಾಗಿತ್ತು. ಆದರೆ ಆ ಕಾಲದಲ್ಲಿ ಫೋಟೋ ತೆಗೆಯುವುದು ಜನರಿಗೆ ಗೊತ್ತಿದ್ದಿಲ್ಲ"

ಎಂದು ಬುರುಡೆ ಬಿಂದಾಚಾರ್ಯರು ಕಥೆ ಮುಗಿಸಿ ಗತವೈಭವವನ್ನು ನೆನೆದುಕೊಂಡು ವಿರಕ್ತಿಯ ದನಿಯಲ್ಲಿ "ಆದರೆ ಅಂದಿನ ಶಕ್ತಿ ಈಗ ಉಳಿದಿಲ್ಲ. ಈಗ ಹೆಗ್ಗಣ ಬಂದರೆ ಹೊಡೆಯಲಿಕ್ಕೆ ನೆರೆಮನೆಯವರನ್ನು ಕರೆಯುವ ವೇಳೆ ಬಂದಿದೆ. ಏನು ಮಾಡುವುದು? ಗುಡ್ಡ ಹೊತ್ತು ತಂದಿದ್ದ ಹನುಮಪ್ಪನೇ ಈಗ ಮಂಗ್ಯಾ ಆಗಿ ಕುಳಿತಿದ್ದಾನೆ. ನಮ್ಮಂಥವರ ಪಾಡೇನು?" ಎಂದು ಉಸಿರುಗರೆದರು.

ಅಷ್ಟರಲ್ಲಿ ಕತ್ತಲಾಗಿತ್ತು. ಆಚಾರ್ಯರು ಮನೆಗೆ ಹೊರಡಲು ಎದ್ದರು. "ಆಚಾರೆಪ್ಪಾ, ಆ ಸಂದೀಲೆ ಹೋಗಬ್ಯಾಡ್ರಿ. ಅಲ್ಲಿ ನಿನ್ನೆ ಒಂದು ಹಾವು ಹೋಗೇತಿ" ಎಂದು ಎಚ್ಚರಿಸಿದ—ಊರಿನ ಓಲೆಕಾರ ದರಿಯಪ್ಪ.

ಆಚಾರ್ಯರಿಗೆ ಅವಮಾನವಾಯಿತು "ಹೋಗೊ ನಿನ್ನ! ಎಲ್ಲೋ ಮೊಳ ಉದ್ದ ಹಾವು ನೋಡಿ ನೀ ಹೆದರಿದಿ ಅಂತ ನನಗ ಹೇಳಲಿಕ್ಕೆ ಬಂದಿದ್ದೀಯಾ? ನಾನು ಹಾವಿನ ಮೇಲೆ ಸವಾರಿಮಾಡಿದವ ಗೊತ್ತೆ?" ಎಂದರವರು.

"ಅದೇನು, ಅದೇನು?"

ಆಚಾರ್ಯರು ಪುನಃ ಆಸೀನರಾದರು. ನಶ್ಯ ಏರಿಸುತ್ತ, "ಅದು ನನ್ನ ಲಗ್ನದ ಕಾಲದ ಮಾತು. ನೀವೆಲ್ಲ ಲಗ್ನವಾದಾಗ ಕುದುರೆ ಮೇಲೆ ಸವಾರಿ ಮಾಡಿದ್ದರೆ ನಾ ಹಾವಿನ ಮೇಲೆ ಮಾಡಿದ್ದೆ" ಎಂದು ಪೀಠಿಕೆ ಹಾಕಿದರು.

"ನಡೆದದ್ದು ಇಷ್ಟೇ. ನನ್ನ ಮಾವ ಹಲ್ಯಾಳದಲ್ಲಿದ್ದ ಅಂತ ನನ್ನ ಮದುವೆ ಅಲ್ಲಿಯೇ ಆಯಿತೇನುಪ್ಪಾ. ನಿಬ್ಬಣ ಧಾರವಾಡದಿಂದ ಹಲ್ಯಾಳಕ್ಕೆ ಹೊರಟಿತು.

"ಗುಡ್ಡದ ಹಾದಿ. ನಾಲ್ಕಾರು ಮೈಲು ಗಿರಿ ಮಂಜಾಣದೊಳಗೆ ಹಾಯ್ದು ಹೋಗಬೇಕು. ನಾಲ್ಕು ಗಾಡಿ ಕಟ್ಟಿಸಿಕೊಂಡು ನಾವು ನಿಬ್ಬಣ ಹೊರಟೆವು. ಹಲ್ಯಾಳ ಇನ್ನೊಂದು ನಾಲ್ಕಾರು ಮೈಲು ಉಳಿದಿತ್ತು. ಹೊತ್ತು ಮುಳುಗಿತು. ಮೋಡ ಕವಿದು ಅಡ್ಡ ಮಳೆ ಸುತ್ತಿಸುತ್ತಿ ಹೊಡೆಯಿತು. ನಮ್ಮ ಸವಾರಿ ಗಾಡಿಗಳೆಲ್ಲ ಸೋರಿ ನಮ ಅರಿವೆಅಂಚಡಿಯೆಲ್ಲ ತೋಯ್ದು ತೊಪ್ಪಡಿಯಾದವು. ಮಕ್ಕಳು ಚಳಿಯಿಂದ ಕೂಗಹತ್ತಿದವು. ಲೈನಿನ ಮೇಲೆ ಮೊಳಕಾಲುಮಟ್ಟ ನೀರು ಹರಿಯುತ್ತಿತ್ತು.

"ಹಾದಿಗೆ ಹೊಂದಿ ದೊಡ್ಡದೊಂದು ಸಾಗವಾನಿ ಮುಂಡಿಗೆ ಬಿದ್ದದ್ದು ಮಿಂಚಿನ ಬೆಳಕಿನಲ್ಲಿ ಕಾಣಿಸಿತು. ನಾನು ಅದರ ಮೇಲೆ ಹೋಗಿ ಕುಳಿತೆ. ಎಲ್ಲರನ್ನೂ ಕರೆದೆ. ಎಲ್ಲರೂ ಪ್ರಶಸ್ತವಾಗಿ ಬಂದು ಕುಳಿತರು. ಮಳೆ ನಿಂತಿತು. ಗಾಡಿಯ ತಳಕ್ಕೆ ಹಾಕಿದ ಕಣಿಕೆ, ಹತ್ತಿ ಕಟ್ಟಿಗೆ ತಂದು ಸಾಗವಾನಿ ಮುಂಡಿಗೆ ಮೇಲೆ ಉರಿ ಹಚ್ಚಿ ಚೆನ್ನಾಗಿ ಕಾಸಿಕೊಂಡೆವು. ಹಸಿವಾಗಿತ್ತು. ಬೆಚ್ಚಗಾದ ಕೂಡಲೆ ಹುಡುಗರಿಗೆ ನಿದ್ದೆ ಬಂತು. ನನಗೂ ಜೊಂಪುಹತ್ತಿತು. ಮುಂಡಿಗೆ ಮೇಲೆಯೇ ಅಡ್ಡಾದೆ.

"ನನಗೆ ಎಚ್ಚರ ಆದದ್ದು ನಮ್ಮ ಮಾವನ ಕೂಗಾಟ ಕೇಳಿದಾಗ. ಹೌಹಾರಿದಂತೆ ಇವರೇಕೆ ಕೂಗುತ್ತಿರಬಹುದು? ಅಂತ ಅಚ್ಚರಿಯಿಂದ ಕಣ್ಣು ತೆರೆದೆ. ಇಳಿಯಿರಿ, ಅದರ ಮೇಲಿಂದ ಬೇಗ ಇಳಿಯಿರಿ ಎಂದು ಅವರು ಒಂದೇ ಸಮನೆ ಹೊಯ್ದುಕೊಳ್ಳುತ್ತಿದ್ದರು. ನಾನು ಕೆಳಗಿಳಿದಾಗ ಅವರು ಒಳ್ಳೇ ಹರ್ಷದಿಂದ, ಹೋದ ಜೀವ ಬಂದ ಹಾಗೆ ಬರಸೆಳೆದು ಅಪ್ಪಿಕೊಂಡರು. 'ಹಾವಿನ ಮೇಲೆ ಸವಾರಿ ಮಾಡಿ ಬದುಕಿ ಬಂದಿಯಾ!' ಎಂದು ಅತ್ತುಬಿಟ್ಟರು.

"ಆಗ ನಾನು ತಿರುಗಿ ನೋಡಿದೆ, ನೀವು ನಂಬಲಿಕ್ಕಿಲ್ಲ—ನಂಬುವುದು ಕಷ್ಟ— ಮಹಾ ಅಜಗರ ಸರ್ಪ. ಕ್ಷಣದಲ್ಲಿ ನನಗೆಲ್ಲ ಹೊಳೆದು ಹೋಯಿತು. ನಾವು ರಾತ್ರಿ ಕುಳಿತದ್ದು ಸಾಗುವಾನಿ ಮುಂಡಿಗೆಯ ಮೇಲಲ್ಲ, ಒಂದು ಭಾರಿ ಹೆಬ್ಬಾವಿನ ಮೇಲೆ—ಅಂತ. ನಾವು ಬೆಂಕಿ ಹೊತ್ತಿಸುತ್ತಲೇ ಅದಕ್ಕೆ ಬಿಸಿ ಹತ್ತಿ ಮೆಲ್ಲನೆ ಸರಿಯಹತ್ತಿರಬೇಕು. ಆದರೆ ನಿದ್ದೆಯ ಜೊಂಪಿನಲ್ಲಿದ್ದ ನಮಗದು ಗೊತ್ತಾಗಲೇ ಇಲ್ಲ. ರಾತ್ರಿಯೆಲ್ಲ ಅದು ನಮ್ಮನ್ನು ಹೊತ್ತುಕೊಂಡು ಸಾಗಿ

ಯೇ ಇತ್ತು. ನಾವು ಇನ್ನೂ ಬಾರದ್ದನ್ನು ಕಂಡು ಗಾಬರಿಯಾಗಿ ನಿಬ್ಬಣದವರ ಶೋಧಕ್ಕಾಗಿ ಹೊರಟಿದ್ದ ನಮ್ಮ ಮಾವ ನಾವು ಹಲ್ಯಾಳದ ಊರ ಹೊರಗೆ ಅಜಗರಶಯನರಾಗಿ ಬರುತ್ತಿದ್ದದ್ದು ಕಂಡುಗಾಬರಿಯಾಗಿ ಕೂಗಿಕೊಂಡಿದ್ದ."

"ನಿಮಗೂ ಗಾಬರಿಯಾಗಿರಬೇಕು" ಎಂದನೊಬ್ಬ ಶ್ರೋತೃ.

"ಗಾಬರಿ? ನನಗೆ?" ಎಂದರು ಆಚಾರ್ಯರು. 'ಎಲ್ಲೀ ಗಾಬರಿ! ಆದರೆ ಇಷ್ಟೇ. ಈ ಅಜಗರ ಹಲ್ಯಾಳದ ದಾರಿ ಹಿಡಿದು ಸಾಗಿತು, ಕ್ಷೇಮವಾಯಿತು. ಬದಲಿಗೆ ಅದರ ತಲೆ ಎಲ್ಲಿಯಾದರೂ ಧಾರವಾಡದ ಕಡೆ ಇದ್ದಿದ್ದರೆ ಎಚ್ಚರವಾದಾಗ ನಾವು ಎಲ್ಲಿರಬಹುದಿತ್ತು? ಲಗ್ನವೇ ತಪ್ಪಿ ಹೋಗಿಬಿಡುತ್ತಿತ್ತೋ ಏನೋ ಎಂದು ನಾನು ಒಂದು ಕ್ಷಣ ಯೋಚಿಸಿದೆ. ಅಷ್ಟೇ."

ಆಚಾರ್ಯರಿಗೆ ಎದುರುತ್ತರ ಹೇಳುವ ಧೈರ್ಯ ಯಾರಿಗೂ ಬರಲಿಲ್ಲ. ಸಭೆ ಬರ್ಖಾಸ್ತು ಆಗಿ ಆಚಾರ್ಯರು ಮೊಮ್ಮಗ ಕಿಟ್ಟಪ್ಪ (ವಯಸ್ಸು ೧೧)ನ ಸಂಗಾತ ಮನೆಗೆ ಹೊರಟರು. ಈ ಬುರುಡೆ ಕುಲದೀಪಕ, ಅಜ್ಜನ್ನ ಒಮ್ಮೆಲೆ ಪ್ರಶ್ನಿಸಿದ: "ಅಜ್ಜಾ ಬಹಳ ದೊಡ್ಡದು ಅಂದರೆ ಎಷ್ಟುದ್ದ ಹಾವು ನೀ ನೋಡಿದ್ದಿ?"

ಬಹಳಾದರೆ ೧೦ ಫೂಟು" ಎಂದೊಬ್ಬ ಅಧಿಕಪ್ರಸಂಗ ಮಾಡಿದ.

"ಹತ್ತು ಫೂಟು! ಬಯಲ ಸೀಮೇ ಮಂದಿ ನೀವು ಹತ್ತು ಫೂಟು ಹಾವು ಅಂದರೆ ತಕ್ಷಕ ಅಂತ ತಿಳಿದಿದ್ದೀರಿ. ನಾನು ಹತ್ತು ಮೈಲುದ್ದ ಹಾವು ನೋಡಿದ್ದೇನೆ" ಎಂದರು ಆಚಾರ್ಯರು.

"ಹಾಂ ?" ಎಂದಿತು ಜನಜಂಗುಳಿ.

"ನೀವೇ ಲೆಕ್ಕ ಹಾಕಿರಿ" ಎಂದರು ಆಚಾರ್ಯರು. "ನಾನೊಮ್ಮೆ ಕುಡಚಿಯಿಂದ ಮಿರಜಗೆ ರೇಲುಗಾಡಿಯಲ್ಲಿ ಹೊರಟಾಗ ಕುಡಚಿ ಮುಂದಿನ ಕೃಷ್ಣಾನದಿ ಪೂಲಿನ ಮೇಲೆ ಬೆಳಗ್ಗೆ ೧೦ ಗಂಟೆಗೆ ಒಂದು ಹಾವು ಬರುತ್ತಿದ್ದದ್ದು ನೋಡಿದೆ. ಮಿರಜಿಯಲ್ಲಿ ಕೆಲಸ ಮುಗಿಸಿಕೊಂಡು ಗಾಡಿ ಹತ್ತಿ ನಾಲ್ಕು ಗಂಟೆಗೆ ಪೂಲು ದಾಟುತ್ತಿದ್ದಾಗ ಕೆಳಗೆ ನೋಡಿದರೆ ಮುಂಜಾನೆ ಹಾವಿನ ತಲೆ ಇದ್ದ ಸ್ಥಳದಲ್ಲಿ ಈಗ ಅದರ ಬಾಲ ಇತ್ತು. ಅದು ಇನ್ನೂ ಭರದಿಂದ ಹೋಗುತ್ತಿತ್ತು. ಅದು ತಾಸಿಗೆ ೧॥ ಮೈಲು ಹೋದರೂ ೬ ತಾಸಿಗೆ ೯ ಮೈಲಾಗುತ್ತದೋ ಇಲ್ಲೊ?"

"ಇದನ್ನು ಮಾತ್ರ ನಂಬೂದು ಜಡ" ಎಂದ ಕುಲಕರ್ಣಿ ಶೇಷಪ್ಪ.

ಆಚಾರ್ಯರಿಗೆ ಸಿಟ್ಟು ಬಂತು. "ಕೈಲಾಗದ ಮಂದಿ. ಮಾಡೋ ಧೈರ್ಯ ಹೋಗಲಿ, ನಂಬೊ ಧೈರ್ಯ ಸಹಿತ ಇಲ್ಲ ನಿಮಗೆ!" ಎಂದು ಎಗರಾಡಿದರು.

ಮೊಮ್ಮಗ ಕಿಟ್ಟಪ್ಪ ಹೇಳಿದ: "ಹೋಗಲಿ ಬಿಡು! ಸತ್ಯ ಹೇಳಿದರೆ ಈಗಿನ ಮಂದಿ ನಂಬುವುದಿಲ್ಲ ಅಜ್ಜ. ಸುಳ್ಳು ಹೇಳಿದರೆ ಖರೇ ಅಂತಾರೆ ಮೊನ್ನೆ ಪಂಚಮೀ ದಿನ ತಂಬಿಟ್ಟು ಕದ್ದು ತಿಂದೆ ಅಂತ ಅಜ್ಜಿ ನನ್ನ ಬಡಿಯಲಿಕ್ಕೆ ಬಂದಳು. ನಾನು ಒಂದು ಗಿಡಾ ಹತ್ತಿ ಕುಳಿತುಬಿಟ್ಟೆ. ಸಾಲೆ ಮಾಸ್ತರು ನನ್ನ ಹುಡುಕಲಿಕ್ಕೆ ಕಳಿಸಿದ ಹುಡುಗರು ಬಂದು ನನ್ನ ಗಿಡದಿಂದ ಎಳೆದು ಇಳಿಸುತ್ತೇವಂತ ಗಿಡಾ ಹತ್ತಿದರು. ಅಜ್ಜಿ ಕೆಳಗೆ ನನ್ನ ಕೈಗೆ ಬರೆ ಕೊಡಲಿಕ್ಕಂತ ಕಾಸಿದ ಕಡತಾರ ಹಿಡಕೊಂಡು ನಿಂತಿದ್ದಳು. ಏನು ಮಾಡಬೇಕು ಬಗೆಹರಿಯಲಿಲ್ಲ. ಹೆದರಿ ಮೂತ್ರ ಬಿಟ್ಟೆ. ಅದರ ಧಾರೆಯನ್ನ ಹಗ್ಗ ಅಂತ ತಿಳಕೊಂಡು ಅಜ್ಜಿ ಅದನ್ನ ಹಿಡಕೊಂಡು ಸರಾ ಸರಾ ಮೇಲೆ ಬಂದು ಕೈಗೆ ಬರೆ ಕೊಟ್ಟೇಬಿಟ್ಟಳು. ಸಾಲೆಯಲ್ಲಿ ಮಾಸ್ತರಿಗೆ ಇದನ್ನ ಹೇಳಿದರೆ ಬುರುಡೆ ಅಂದುಬಿಟ್ಟರು ನೋಡಜ್ಜಾ!"

ಆಚಾರ್ಯರಿಗೆ ಪರಮಾನಂದವಾಯಿತು. "ಮನೆತನದ ಹೆಸರು ಉಳಸಿತೀ ಅಪ್ಪಾ. ನೀ ಒಬ್ಬ ಕುಲದೀಪಕ ಹುಟ್ಟಿದಿ ಬಿಡು. ಇನ್ನು ನಾ ಕಣ್ಣುಮುಚ್ಚಿದರೂ ಅಡ್ಡಿಯಿಲ್ಲ" ಎಂದು ಮೊಮ್ಮಗನನ್ನು ಮೈದಡವಿದರು.

# ನಿಮ್ಮ ಶಬ್ದ ಭಾಂಡಾರ ಬೆಳೆಯಲಿ

೧. ಕ್ಷುರ

(ಅ) ಹುಣ್ಣು (ಆ) ದನದ ಗೊರಸು (ಇ) ಕತ್ತಿ (ಈ) ಸುಣ್ಣ.

೨. ತುಂತುರು

(ಅ) ನೀರ ಹನಿ (ಆ) ಒಂದು ವಾದ್ಯ (ಇ) ಚಲನೆ (ಈ) ದೇವಲೋಕದ ಗಾಯಕ.

೩. ಕೈದೋರಿಕೆ

(ಅ) ಒಂದು ಆಯುಧ (ಆ) ಇದಿರಾಗಿ ಬಲಪ್ರದರ್ಶನ ಮಾಡುವುದು (ಇ) ಕೈಯ ತುರಿ ಕಜ್ಜಿ (ಈ) ಒಂದು ಹುಲ್ಲು.

೪. ಆವಿಷ್ಟ

(ಅ) ಸ್ವರ್ಗ (ಆ) ಮನಸಿಗೆ ಮೆಚ್ಚಿದ್ದು (ಇ) ಆವೇಶಹೊಂದಿದ (ಈ) ಒಂದು ಹಿಟ್ಟು.

೫. ಆಮೂಲಾಗ್ರ

(ಅ) ಒಂದು ರೋಗ (ಆ) ಪೂರ್ಣ (ಇ) ಮುಳ್ಳಿನ ತುದಿ (ಈ) ಒಂದು ಕಾಡು ಪ್ರಾಣಿ.

೬. ನಿಷ್ಪಂದ

(ಅ) ನಿಶ್ಚಲ (ಆ) ತುಂಬಿ (ಇ) ಪಾಪವಿಲ್ಲದ (ಈ) ನಿಶ್ಶೇಷ.

೭. ವಿವಕ್ಷೆ

(ಅ) ಭಿಕ್ಷೆ (ಆ) ಪಕ್ಕೆಲಬು (ಇ) ಅಭಿಪ್ರಾಯ (ಈ) ಚರ್ಚಾವಿಚಾರ

೮. ವಿವಿಕ್ತ

(ಅ) ಏಕಾಂತ (ಆ) ಒಡೆದ (ಇ) ಬಿಡಿಸಿದ (ಈ) ಸಂನ್ಯಾಸ.

೯. ಸಮಾಹಾರ

(ಅ) ರುಚಿಕರ ಆಹಾರ (ಆ) ಒಂದು ಬಗೆಯ ಆಭರಣ (ಇ) ಕೊಲೆ (ಈ) ಒಂದುಗೂಡಿಸುವಿಕೆ.

೧೦. ಅಭಿಭವ

(ಅ) ಶಿವ (ಆ) ಸೋಲು (ಇ) ಇದೇ ಹುಟ್ಟಿದ (ಈ) ಹೆದರಿಕೆಯಿಲ್ಲದ.

೧೧. ಮರ್ದನ

(ಅ) ಜಜ್ಜುವಿಕೆ (ಆ) ಔಷಧ (ಇ) ಮನ್ಮಥ (ಈ) ಗಂಡುತನ.

೧೨. ಉಪೋದ್ಘಾತ

(ಅ) ಸಂಗ್ರಹ (ಆ) ಬಲವಾದ ಪೆಟ್ಟು (ಇ) ಪೂರ್ವಪೀಠಿಕೆ (ಈ) ಪ್ರಪಾತ.

## ‘ ಶಬ್ದಭಾಂಡಾರ ’ದ ಸರಿಯಾದ ಅರ್ಥಗಳು

೧. **ಕ್ಷುರ** ( ಇ ) ಕತ್ತಿ, ಬಾಣದ ಮೊನೆ, ಚೂರಿ, ಕ್ಷೌರದ ಕತ್ತಿಯೂ ಕ್ಷುರ ವೆಂದೇ ಕರೆಯಲ್ಪಡುತ್ತದೆ. [ಸಂಸ್ಕೃತ]

೨. **ತುಂತುರು** ( ಅ ) ನೀರಹನಿಗಳು; ಜಲ ಪ್ರಪಾತ, ಮಳೆಹೊಡೆತ ಮೊದಲಾದವು ಗಳಿಂದ ಕಣಕಣವಾಗಿ ಸಿಡಿದ ಹನಿಗಳ ಪುಂಜ [ ಕನ್ನಡ ]

೩. **ಕೈದೋರಿಕೆ** ( ಅ ) ಇದಿರಾಗಿ ಬಲ ಪ್ರದರ್ಶನ ಮಾಡುವುದು, ಸ್ಪರ್ಧೆಗೆ ತಯಾರಾಗುವುದು. ಕೈ + ತೋರಿಕೆ = ಕಯ್ಯ ( ಕಸುವಿನ ) ಪ್ರದರ್ಶನ. [ ಕನ್ನಡ ]

೪. **ಆವಿಷ್ಟ** ( ಇ ) ಆವೇಶಹೊಂದಿದ, ರಾವು ಬಡಿದ; ಉದಾ : ಅವನು ಕೋಪಾ ವಿಷ್ಟನಾಗಿ ಎದ್ದು ನಿಂತನು. ಆ = ಸುತ್ತ ಲಿಂದಲೂ + ವಿಷ್ಟ = ಒಳಹೊಕ್ಕ. [ ಸಂಸ್ಕೃತ ]

೫. **ಆಮೂಲಾಗ್ರ** ( ಅ ) ಇಡಿ, ಸಮಗ್ರ, ಪೂರ್ಣ, ಬುಡದಿಂದ ತುದಿಯ ವರೆಗೆ; ಉದಾ: ನಮಗೆ ಆಮೂಲಾಗ್ರ ಬದಲಾ ವಣೆ ಬೇಕು. ಆಮೂಲ = ಆರಂಭದಿಂದ + ಅಗ್ರ = ತುದಿಯ ವರೆಗೆ [ ಸಂಸ್ಕೃತ ]

೬. **ನಿಷ್ಪಂದ** ( ಅ ) ನಿಶ್ಚಲ, ಅಲುಗಾಡದ, ನಿ = ಇಲ್ಲ + ಸ್ಪಂದ = ಚಲನೆ ಉದಾ : “ಮರಗಿಡಗಳು ನಿಷ್ಪಂದವಾಗಿದ್ದವು.” [ ಸಂಸ್ಕೃತ ]

೭. **ವಿವಕ್ಷೆ** ( ಇ ) ಅಭಿಪ್ರಾಯ; ಹೇಳಬೇ ಕೆಂಬ ಇಚ್ಛೆ. ಉದಾ : ಕವಿಯ ವಿವಕ್ಷೆ ಯನ್ನು ಸರಿಯಾಗಿ ತಿಳಿಯದೆ ಟೀಕಿಸ ಬಾರದು ಅಂದರೆ ಕವಿಯ ಅಭಿಪ್ರಾಯ ವನ್ನು ಅಥವಾ ಅವನು ಹೇಳಬಯಸಿದ ಅರ್ಥವನ್ನು ಚೆನ್ನಾಗಿ ತಿಳಿದುಕೊಳ್ಳಬೇ ಕೆಂದು ಅರ್ಥ. ವಿವಚ್ = ಹೇಳು + ಈಷಾ = ಅಪೇಕ್ಷೆ [ ಸಂಸ್ಕೃತ ]

೮. **ವಿವಿಕ್ತ** ( ಅ ) ಏಕಾಂತ, ಯಾರೂ ಇಲ್ಲದ, ಪ್ರತ್ಯೇಕವಾದ, ಉದಾ: ವಿವಿಕ್ತ ಉದ್ಯಾನ = ಏಕಾಂತವಾದ ಹೂದೋಟ. [ ಸಂಸ್ಕೃತ ]

೯. **ಸಮಾಹಾರ** ( ಈ ) ಒಂದುಗೂಡಿಸುವಿಕೆ; ಸಂಗ್ರಹ; ಬೇರೆ ಬೇರೆ ವಿಷಯಗಳನ್ನು ಹೊಂದಿಸುವುದು. ಉದಾ : ಸಮಾಹಾರ ವಾಗಿ ಹೇಳುವುದು. ಸಂ = ಸರಿಯಾಗಿ + ಆಹರಣ ತಂದು ಜೋಡಿಸುವುದು. [ ಸಂಸ್ಕೃತ ]

೧೦. **ಅಭಿಭವ** ( ಅ ) ಸೋಲು. ಅಭಿಭೂಃ ಗೆಲ್ಲುವುದು, ನಾಶಮಾಡುವುದರಿಂದ ಆಗುವ ಪರಿಣಾಮ, ಪರಾಭವ. [ ಸಂಸ್ಕೃತ ]

೧೧. **ಮರ್ದನ** ( ಅ ) ಜಜ್ಜುವಿಕೆ, ಪುಡಿ ಮಾಡುವಿಕೆ, ಒತ್ತಿ ಒರಸುವಿಕೆ, ಉದಾ : ಕಾಳಿಯ ಮರ್ದನ = ಕಾಳಿಯ ಸರ್ಪದ ಹೆಡೆ ಜಜ್ಜಿದವನು.

೧೨. **ಉಪೋದ್ಘಾತ** ( ಇ ) ಪೂರ್ವಪೀಠಿಕೆ. ಮುನ್ನುಡಿ, ಪ್ರಸ್ತಾವನೆ. ಉಪ = ಪೂರ್ವ, ಸಣ್ಣ + ಉದ್ಘಾತ = ಪೀಠಿಕೆ, ಪರಿಚಯ. [ ಸಂಸ್ಕೃತ ]

---

### ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ಅರಿಯಿರಿ.

೬—೮ ಸರಿಯಿದ್ದರೆ....ಸಾಧಾರಣ

೯—೧೧ ,, ....ಉತ್ತಮ

೧೦—೧೨ ,, ....ಅತ್ಯುತ್ತಮ

ಕುಲಮರ್ವ ಬಾಲಕೃಷ್ಣ

**ಕೆಟ್ಟು ಪಟ್ಟಣ ಸೇರು ಎನ್ನುತ್ತಾರೆ. ಪಟ್ಟಣ ಸೇರಲೇಬೇಕೆನಿಸಿದರೆ ಮುಂಬಯಿ ಸೇರಿರಿ—ಏಕೆಂದರೆ—**

# ಅದೃಷ್ಟ-ಶೋಧಕರ ನಗರ : ಮುಂಬಯಿ

ಭಾರತದ ಮಹಾನಗರಗಳಲ್ಲಿ ಒಂದಾದ ಇಂದಿನ ಮುಂಬಯಿ ಸುಮಾರು ಎರಡು ಸಾವಿರ ವರ್ಷಗಳ ಹಿಂದೆ ಹೆಪ್ಟನಾಸಿಯಾ ಎಂದರೆ ಸಪ್ತ ದ್ವೀಪಗಳೆಂದು ಗ್ರೀಕರಲ್ಲಿ ಕೂಡ ಪ್ರಸಿದ್ಧವಾಗಿತ್ತು. ಇತ್ತೀಚೆಗೆ ಈಸ್ಟ್ ಇಂಡಿಯಾ ಕಂಪನಿಯ ವಶಕ್ಕೆ ಬರುವತನಕವೂ ಮುಂಬಯಿ ಸಪ್ತದ್ವೀಪಗಳಾಗಿಯೇ ಉಳಿದಿತ್ತು. ಆದರೆ ಅದು ಮಹಾನಗರವಾಗಬಹುದೆಂಬ ಲಕ್ಷಣವೇನೂ ಇರಲಿಲ್ಲ. ಅದು ಕೇವಲ ಮೀನುಗಾರರ ಹಳ್ಳಿಯಾಗಿತ್ತು ಆಗ.

೧೫೩೪ ರಲ್ಲಿ ಮುಂಬಯಿಯನ್ನು ಗುಜರಾತದ ಸುಲ್ತಾನ ಪೋರ್ತುಗೀಜರಿಗೆ ಕಾಣಿಕೆಯಾಗಿತ್ತನು. ಬ್ರಿಟನ್ನಿನ ಎರಡನೆ ಚಾರ್ಲ್ಸ್ ದೊರೆಗೆ ಪೋರ್ತುಗೀಜ ರಾಜಕುವರಿ ಕೆಥರೀನ್ ಬ್ರಗಾಂಜಳನ್ನು ಮದುವೆಯಾಗುವ ತನಕ ಮುಂಬಯಿ ಪೋರ್ತುಗೀಜರದಾಗಿತ್ತು. ಆ ಮದುವೆಯಲ್ಲಿ ಅಳಿಯ ಚಾರ್ಲ್ಸನಿಗೆ ಪೋರ್ತುಗೀಜ ದೊರೆಯಿಂದ ಈ ಭಯಂಕರ ಮಲೆಜ್ವರ ಪೀಡಿತವಾದ, ಬಿಳಿಯರ ವಸತಿಗೆ ಅಯೋಗ್ಯವೆನಿಸಿದ ದ್ವೀಪ ವರದಕ್ಷಿಣೆಯಾಗಿ ಕೊಡಲ್ಪಟ್ಟಿತು. ಇದು ೧೬೬೧ ರಲ್ಲಿ.

ಚಾರ್ಲ್ಸ್ ದೊರೆಗೆ ಭಾರತದ ಕರಾವಳಿಯಲ್ಲಿರುವ ಈ ಮೀನುಗಾರರ ಹಳ್ಳಿಯೇನು ಮಹಾ? ಆತ ಈಸ್ಟ್ ಇಂಡಿಯಾ ಕಂಪನಿಗೆ ವರ್ಷಕ್ಕೆ ಹತ್ತು ಪೌಂಡು ಬಾಡಿಗೆಗೆ ಅದನ್ನು ಕೊಟ್ಟ. ಇಂದು ಈ ನಗರದಲ್ಲಿ ಒಂದು ಚದರ ಗಜ ಸ್ಥಳಕ್ಕೆ ಅದಕ್ಕಿಂತ ಹೆಚ್ಚು ಬಾಡಿಗೆ ಕೊಡಬೇಕಾಗುತ್ತದೆ. ಕಂಪನಿಯು ದ್ವೀಪ ಸಮೂಹವಾದ ಮುಂಬಯಿಯನ್ನು ತನ್ನ ವಾಣಿಜ್ಯೋದ್ಯಮಕ್ಕೆ ಬಳಸಿಕೊಂಡಿತು. ಸೂರತದಲ್ಲಿರುವ ಕಂಪನಿಯ ಕಾರಖಾನೆಗೆ ಮುಂಬಯಿ ಶಾಖೆಯೆನಿಸಿತು. ಅಂದು ಶಾಖೆಯಾಗಿದ್ದ ಮುಂಬಯಿ ಭಾರತದ ಮಹಾನಗರವೆನಿಸುವಾಗ, ಅಂದಿನ ಮುಖ್ಯ ಠಾಣೆ ಸೂರತ್ ಇಂದು ತೀರ ಸಾಮಾನ್ಯ ಪಟ್ಟಣವಾಗಿಬಿಟ್ಟಿದೆ.

೧೮-೧೯ ನೆ ಶತಮಾನಗಳಲ್ಲಿ ಈ ಸಪ್ತದ್ವೀಪಗಳು ಮುಂಬಯಿ ಮಹಾನಗರವಾಗಿ ಪರಿವರ್ತನೆಗೊಂಡವು. ಅಷ್ಟರೊಳಗೆ ಬ್ರಿಟಿಶರ ವಶದಲ್ಲಿದ್ದ ಮುಂಬಯಿಯ ಮೇಲೆ ನಾಲ್ಕು ಬಾರಿ ಮರಾಠರ ಹಲ್ಲೆಯಾಗಿತ್ತು. ಇದು ಮುಂಬಯಿಯ ಬೆಳವಣಿಗೆಗೆ ಒಂದು ಚಾಲನೆಯಿತ್ತಿತು. ಕಂಪನಿ ಮುಂಬಯಿಯ ರಕ್ಷಣೆಗೊಂದು ನೌಕಾಪಡೆಯನ್ನು ಕಟ್ಟಿತು. ೨,೬೦೦ ಜನರಿರುವ ಒಂದು ರಕ್ಷಕ ದಳವನ್ನು ನೇಮಿಸಿಕೊಂಡಿತು.


ಎಲಿಫಂಟಾದಲ್ಲಿಯ ತ್ರಿಮೂರ್ತಿ

೧೭೭೫ರ ತನಕ ಮುಂಬಯಿ ಆಧಿಪತ್ಯವೆಂದರೆ ಈ ದ್ವೀಪಸಮೂಹವಷ್ಟೇ ಆಗಿತ್ತು. ಅನಂತರ ದ್ವೀಪಗಳ ನಡುವಣ ಹಳ್ಳವನ್ನು ಕಟ್ಟಿ ಒಂದು ಗೂಡಿಸಿದರು ಬ್ರಿಟಿಶ್ ಅಧಿಕಾರಿಗಳು. ಇಂದು ಮುಂಬಯಿಗೆ ಹೋಗುವವರಿಗೆ ಇದು ದ್ವೀಪ ವೆಂದು ಕೂಡ ತಿಳಿಯುವಂತಿಲ್ಲ. ಭಾರತದ ಭೂಖಂಡಕ್ಕೆ ಅದು ಕಾಜವೇ ಮತ್ತು ಸೇತುವೆ ಗಳ ಮೂಲಕ ಜೋಡಿಸಲ್ಪಟ್ಟಿದೆ. ಮುಂಬಯಿ ಬಂದರವು ದ್ವೀಪಕ್ಕೂ ಭೂಖಂಡಕ್ಕೂ ನಡುವೆ ಇದೆ. ಹೀಗಾಗಿ ಮುಂಬೈ ಇಂದು ಹೊರಗಿನ ಪ್ರ-ದೇಶಗಳನ್ನು ಒಡಗೊಂಡು ಬೃಹನ್ಮುಂಬೈಯಾಗಿ ಭಾರತದ ವ್ಯಾಪಾರೋದ್ಯಮದಲ್ಲಿ ಮಹತ್ವದ ಭಾಗವಹಿಸುತ್ತಿದೆ. ಭಾರತದ ಆಯಾತ ನಿರ್ಯಾತ ಮುಂತಾದ ಎಲ್ಲ ವಿಷಯಗಳಲ್ಲಿಯೂ ಮುಂಬಯಿ ಒಂದನೆಯದೆನಿಸದಾದರೂ ಎರಡನೆಯ ಸ್ಥಾನ ವನ್ನು ಗಳಿಸುತ್ತದೆ. ಭಾರತ ಸರಕಾರದ ಆದಾಯ ಕರದಲ್ಲಿ ನೂರಕ್ಕೆ ೩೫ರಷ್ಟು ಮತ್ತು ಕಾರ್ಪೊರೇಶನ್ ಕರದಲ್ಲಿ ೪೦ರಷ್ಟು ಮುಂಬಯಿ ನಗರವೊಂದೇ ತೆರುತ್ತದೆ.

"ಮುಂಬಯಿ" ಹೆಸರಿನ ಮೂಲವೇನು? ಈ ದ್ವೀಪ ಸಮೂಹದ ನಿವಾಸಿಗಳಾದ "ಕೋಳಿ" (ಬೆಸ್ತ) ಜನಾಂಗವು ಪೂಜಿಸುತ್ತಿದ್ದ ಮುಂಬಾ ದೇವಿ-ಅಥವಾ-ಮುಂಬಾಆಯಿ-ದೇವತೆಯ ಗುಡಿ ಯಿಂದ ಮುಂಬಯಿಗೆ ಆ ಹೆಸರು ಬಂದಿತಂತೆ. ಮೂಲ ಮುಂಬಾದೇವಿ ದೇವಾಲಯ ಮುಂಬ ಯಿಯ ಮಧ್ಯ ದ್ವೀಪದಲ್ಲಿತ್ತು. ಇಂದು ವಿಕ್ಟೋ ರಿಯಾ ಟರ್ಮಿನಸ್ ಇರುವಲ್ಲಿ ಹಿಂದೆ ಮುಂಬಾ ದೇವಿ ಗುಡಿಯಿತ್ತಂತೆ. ೧೭೫೦ ರಿಂದ ಆ ದೇವಾ ಲಯವನ್ನು ಮುಂಬಾ ದೇವಿಯ ಕೆರೆಯ ಬಳಿಗೆ ಒಯ್ಯಲಾಗಿದೆ.

ಮುಂಬಯಿಯ ಇಂದಿನ ಗಿರಿಗಾಂ ಹಿಂದೆ ಗಿರಿ ಗ್ರಾಮವಾಗಿತ್ತು; ಮಜಗಾಂ ಮತ್ಸ್ಯಗ್ರಾಮವೆನಿ ಸಿತ್ತು; ಅಪೊಲೋ ಬಂದರಿಗೂ ರೋಮನ್ ದೇ-ವತೆ ಅಪೊಲೊಗೂ ಬಾದರಾಯಣ ಸಂಬಂಧವೂ ಇಲ್ಲ, ಅದು ಪಲ್ಲವ ಬಂದರವೆನಿಸಿತ್ತು; ಅದರಂತೆ ಇತರ ಪ್ರದೇಶಗಳ ಹೆಸರುಗಳೂ ಪಾಶ್ಚಾತ್ಯ ಸಂಸ್ಕರಣಹೊಂದಿ ಬೆರಗುಗೊಳಿಸುವಂತಾಗಿವೆ.

ಮುಂಬಯಿಯ ಹಾರ್ನಬಿ ವೆಲ್ಲಾರ್ಡ್ ಇದೆಯಲ್ಲ-೧೮೮೩ ರಲ್ಲಿ ಮುಂಬಯಿ ಗವರ್ನರ ರಾಗಿದ್ದ ಹಾರ್ನಬಿಯವರು ಇದನ್ನು ಕಟ್ಟಿಸ ತೊಡಗಿದಾಗ ಅಲ್ಲಿ ವಾಸಮಾಡುತ್ತಿದ್ದ ಹಿಂದು ಗಳು ಇದರಿಂದ ದೇವರಿಗೆ ಸಿಟ್ಟುಂಟಾಗುವು ದೆಂದು ವಿರೋಧಿಸಿದರು. ಅಷ್ಟರಲ್ಲಿ ಒಬ್ಬ ಹಿಂದು ವಿಗೆ ಕನಸಿನಲ್ಲಿ ಲಕ್ಷ್ಮೀದೇವಿಬಂದು ಈ ರಚನೆಗೆ ತನ್ನ ಒಪ್ಪಿಗೆಯಿತ್ತುದರಿಂದ ಹಿಂದುಗಳ ವಿರೋಧ ನಿವಾರಣೆಯಾಯಿತಂತೆ!

ಇಂದಿನ ಮುಂಬಯಿ ಸಪ್ತ ದ್ವೀಪಗಳ ಪ್ರದೇಶ ವನ್ನು ಮೀರಿ ಬೆಳೆದಿದೆ. ೧೯೫೦ರಲ್ಲಿ ಬೃಹನ್ಮುಂ-ಬಯಿ ಯೋಜನೆ ಉದ್ಘಾಟನೆಯಾದಾಗಿನಿಂದ ಮುಂಬಯಿ ನಗರ ಪ್ರದೇಶ ೨೦೦ ಚದರ ಮೈಲಿ ನಷ್ಟು ದೊಡ್ಡದಾದರೆ ಜನಸಂಖ್ಯೆ ಸುಮಾರು ೪೦ ಲಕ್ಷವನ್ನು ಮುಟ್ಟಿದೆ. ಜಗತ್ತಿನ ಮೂಲೆ ಮುಡು ಕುಗಳ ಜನರೆಲ್ಲ ಇಲ್ಲಿ ಒಂದಾಗಿದ್ದಾರೆ. ಹತ್ತು ವರ್ಷಗಳ ಹಿಂದೆ ಆಂಗ್ಲರು ಇಲ್ಲಿಂದ ಕಾಲ್ದೆಗೆ ದಾಗ ಕಂಬನಿ ಸುರಿಸಿದ ಆಂಗ್ಲೋ ಇಂಡಿ ಯನ್ ತರುಣಿಯರಿಗೂ ನಿರೀಕ್ಷಿಸಿದ ಅನಾಥ ಯೋಗ ಬರದೆ ಶುಕ್ರದೆಸೆಯುಂಟಾಗಿದೆ. ಮಹಾ ರಾಷ್ಟ್ರ, ಪಾರ್ಸಿ, ಸಿಂಧೀ ತರುಣಿಯರೂ ಅವರ ಹಾದಿಯನ್ನೇ ತುಳಿದು ಮುಂಬಯಿಯ ಬೆಡಗನ್ನು ಹೆಚ್ಚಿಸತೊಡಗಿದ್ದಾರೆ.

ಜಗತ್ತಿನ ಅಪೂರ್ವ ವಸ್ತುಗಳೆಲ್ಲಾ ಇಲ್ಲಿ ದೊರೆಯುವವು. ಇಲ್ಲಿ ದೊರೆಯದ ವಸ್ತು ಜಗ ತ್ತಿನ ಯಾವ ಮೂಲೆಯಲ್ಲೂ ದೊರೆಯದು. ಇಲ್ಲಿ ದೊರೆಯುವ ವಸ್ತುಗಳೆಲ್ಲ ಎಲ್ಲ ಕಡೆಯಲ್ಲೂ ದೊರೆಯುವಂತಿಲ್ಲವೆಂದು ಮುಂಬಯಿ ತಜ್ಞರೊ-ಬ್ಬರು ಎದೆತಟ್ಟಿಕೊಳ್ಳುವುದುಂಟು.

ಮುಂಬಯಿ ಜೀವನ ಹೂವಿನ ಹಾಸಿಗೆಯಲ್ಲ. ಅಲ್ಲಿ ಗಡಿಯಾರಕ್ಕಿಂತ ಸೂರ್ಯನಿಗೆ ಯಾರೂ ಮಹತ್ವ ಕೊಡುವುದಿಲ್ಲ. ದುಡಿಯುವ ನೌಕರರಿ ಗಾಗಲಿ ಮಜಾ ಮಾಡುವ ರಾಜಕುಮಾರರಿಗಾ-ಗಲಿ ಅಲ್ಲಿ ಹಗಲಿರುಳುಗಳ ಪರದೆ ಅಡ್ಡಬಂದು

ದೆಂಬುದೇ ಇಲ್ಲ. ಹಣದ ಹೊಳೆ ಹರಿಯುತ್ತದೆ ಇಲ್ಲಿ—ಆದರೆ ದಾರಿದ್ರ್ಯದ ಕೊಳೆ ನಿಂತೇ ಇದೆ. ಮರೀನ್ ಡ್ರೈವಿನ ಮತ್ತು ಮಲಬಾರ ಹಿಲ್ಲಿನ ಮಹಾ ಸೌಧಗಳಲ್ಲಿ ಸಾವಿರಾರು ಸಿರಿವಂತರು ವಾಸ ಮಾಡುವುದಿದ್ದರೆ ಕಾಲುದಾರಿಯಲ್ಲಿ ಮಲಗಿ ಇರಾಣಿ ಹೋಟೆಲಲ್ಲಿ ಮುಕ್ಕಿ ದುಡಿಯುವವರು ಲಕ್ಷಾಂತರವಿದ್ದಾರೆ.

ಬೃಹನ್ಮುಂಬಯಿಯಲ್ಲಿ ಭವ್ಯ ಭವನಗಳಿವೆ. ವಿಶಾಲ ಕ್ರೀಡಾಂಗಣಗಳೂ ವಿಹಾರ ಪ್ರದೇಶಗಳೂ ವಸ್ತುಸಂಗ್ರಹಾಲಯಗಳೂ ಉದ್ಯಾನಗಳೂ ಇವೆ. ಅಸಂಖ್ಯ ಕಾರಖಾನೆಗಳಿವೆ. ಎಕರೆಗೆ ೧೩೯ ರಂತೆ ಜನದಟ್ಟಣೆಯಿದೆ. ದಿಗಂತದಾಚೆಯಿಂದ ಆನಂದದ ಅಮೃತ ಕಿರಣಗಳು ಪ್ರತಿಫಲಿಸುವ ಸಮುದ್ರದಂಡೆಯ ಮೈದಾನುಗಳಿವೆ. ಮಲಬಾರ್ ಹಿಲ್ಲಿನ ತೂಗುದ್ಯಾನ, ವಿಕ್ಟೋರಿಯಾ ಗಾರ್ಡನ್, ಪ್ರಿನ್ಸ್ ಆಫ್ ವೇಲ್ಸ್ ಮ್ಯೂಜಿಯಂ, ಕಮಲಾ ನೆಹರೂ ಪಾರ್ಕ್, ಗೇಟ್ ವೇ ಆಫ್ ಇಂಡಿಯಾ, ಮಹಾಲಕ್ಷ್ಮಿ ರೇಸ್ ಕೋರ್ಸ್, ಚೌಪಾಟಿ, ಜುಹು, ಬಂದರ, ಎಲಿಫಂಟಾ ದ್ವೀಪ, ಜೋಗೇಶ್ವರಿ ಎಲ್ಲವೂ ವಿಹಾರಾರ್ಥಿಗಳ ಮನತಣಿಸುವಂತಹವೆ.

ಚಿತ್ರಪ್ರೇಮಿಗಳಿಗೆ ಮುಂಬಯಿ ಭಾರತದ ಹಾಲಿವುಡ್. ೨೪ ಸ್ಟುಡಿಯೋಗಳಿರುವ ಭಾರತದ ಮಹಾನಗರವೆಂದರೆ ಮುಂಬಯಿಯೊಂದೇ. ಪಂಜಾಬಿಗಳಿಲ್ಲಿ ಬಂದು ಚಲಚ್ಚಿತ್ರ ಉದ್ದಿಮೆಯಲ್ಲಿ ಮುಂದಾಳುಗಳೆನಿಸಿದ್ದಾರೆ.

ಮುಂಬಯಿ ಭಾರತದ ವಾಣಿಜ್ಯ ರಾಜಧಾನಿ. ಭಾರತ ಸರಕಾರದ ಚಲಚ್ಚಿತ್ರ ಶಾಖೆಯ ಮುಖ್ಯ ಕಚೇರಿ, ರಿಝರ್ವ ಬ್ಯಾಂಕಿನ ಮುಖ್ಯ ಕಚೇರಿ, ಜೀವ ವಿಮೆ ಕಾರ್ಪೋರೇಶನಿನ ಮುಖ್ಯ ಕಚೇರಿ ಎಲ್ಲವೂ ಮುಂಬಯಿಯಲ್ಲಿವೆ. ಮುಂಬಯಿ ಭಾರತದ ಒಂದನೆಯ ಸರ್ವರ್ತು ಬಂದರವೆಂದು ಹೆಸರಾಗಿದೆ. ಜವಳಿ ಗಿರಣಿಗಳ ಕೇಂದ್ರವಂತೂ ಅದೇ.

ಆದರೂ ಮುಂಬಯಿ ಭಾರತದ ಹೊರಗಾಲೆಂದು ಹೇಳಬೇಕು. ಅದರ ಆಂತಾರಾಷ್ಟ್ರೀಯ ಸ್ವರೂಪ ವ್ಯಕ್ತಿತ್ವಗಳಷ್ಟೇ ಈ ಅಭಿಪ್ರಾಯಕ್ಕೆ ಕಾರಣಗಳಲ್ಲ. ಪ್ರಕೃತಿಸಹಜವಾಗಿ ಮುಂಬಯಿ ಈಗಲೂ ಒಂದು ದ್ವೀಪ. ಆಂಗ್ಲರ ಕೈ ಕೆಳಗೆ ಪಾಶ್ಚಾತ್ಯ ಸಂಸ್ಕೃತಿಯಲ್ಲಿ ಅದು ಸರಿಯಾಗಿ ತರಬೇತು ಪಡೆದಿದೆ.

ಮುಂಬಯಿ ಯಾರದು? ಇದು ಇತ್ತೀಚೆಗೆ ಹುಟ್ಟಿದ ಪ್ರಶ್ನೆ. ಇದಕ್ಕೆ ಉತ್ತರ ಕೊಡುವುದು ಸುಲಭವಲ್ಲ. ಮುಂಬಯಿಯಲ್ಲಿ ಮರಾಠಿಗರದು ಅತಿ ದೊಡ್ಡ ಸಮಾಜವೆಂಬುದು ನಿಜ. ಗುಜರಾತಿ, ಪಾರ್ಸಿ, ಸಿಂಧೀಯರೂ ಸಾಕಷ್ಟಿದ್ದಾರೆ. ದಕ್ಷಿಣ ಭಾರತದವರ ಸಂಖ್ಯೆಯೇನು ಕಡಮೆಯೇ? ಮುಂಬಯಿ ದಕ್ಷಿಣ ಭಾರತದ ಪ್ರಭಾವವನ್ನು ಇಂಥ ಮಿಶ್ರ ರೂಪದಲ್ಲಿಯೂ ಕಳೆದುಕೊಳ್ಳಲಾರದಿದೆ. ಸುಸಂಸ್ಕೃತ ದಾಕ್ಷಿಣಾತ್ಯರಲ್ಲಿ ಪ್ರತಿಯೊಬ್ಬನೂ ಒಂದಲ್ಲ ಒಂದು ದಿನ ಮುಂಬಯಿಗೆ ಕಾಲಿಡುವುದು ತಪ್ಪಿದ್ದಲ್ಲ ಎಂದು ಒಂದು ಗಾದೆ ಮಾತೇ ಇದೆ. ತಮಿಳರು, ಕನ್ನಡಿಗರು, ಮಲೆಯಾಳಿಗಳು ಮುಂಬಯಿ ಜನ ಜೀವನದಲ್ಲಿ ಆಡುತ್ತಿರುವ ಮಹತ್ವದ ಪಾತ್ರದ ಫಲವಾಗಿಯೇ ಮೈಲಾಪುರದ ಇಡ್ಲಿ ಬೇಕಾದರೂ ನೀವು ಮುಂಬಯಿಯ ಮಾತುಂಗದಲ್ಲಿ ಪಡೆಯಬಲ್ಲಿರಿ.

ಆದರೆ ಮುಂಬಯಿಯ ಇಂದಿನ ಸಮೃದ್ಧಿಗೆ ಕಾರಣವಾದದ್ದು ಬಿಳಿಯರ ಸಾಹಸದೊಂದಿಗೆ, ಅಲ್ಪಸಂಖ್ಯಾಕರಾದರೂ ವಾಣಿಜ್ಯಪ್ರವೀಣರಾದ ಪಾರ್ಸಿಗಳ, ಕೈಯಲ್ಲಿ ಹತ್ತು ಕಾಸು ಹಿಡಿದುಕೊಂಡು ಬಂದು ಇಲ್ಲಿ ಲಕ್ಷಾಂತರ ಹಣಗಳಿಸುವ ಮಾರವಾಡಿಗಳ ಮತ್ತು ಗುಜರಾಥಿಗಳ ವಾಣಿಜ್ಯೋದ್ಯಮ ಕೌಶಲವಾಗಿದೆ. ಇವರ ಬುದ್ಧಿ, ಮಹಾರಾಷ್ಟ್ರೀಯರ ಬೆವರು ಇಂದಿನ ಮುಂಬಯಿಯನ್ನುಂಟುಮಾಡಿವೆಯೆನ್ನಬೇಕು.

ಉತ್ತರ ಭಾರತೀಯರೂ ಮುಂಬಯಿಯಲ್ಲಿ ತುಂತುರಾಗಿ ಪಸರಿಸಿದ್ದಾರೆ. ಪಂಜಾಬಿಗಳು ಅವರಲ್ಲಿ ಪ್ರಮುಖರು. ವಿದೇಶಿಯರೂ ಸಾಕಷ್ಟಿದ್ದಾರೆ. ಅವರಲ್ಲಿ ಆಂಗ್ಲರು, ಅಮೇರಿಕನ್ನರು, ಪಾಕಿಸ್ತಾನಿಗಳು ಮುಂತಾದವರು ಹೆಚ್ಚು.

ಹಿಟ್ಲರ ಓಡಿಸಿದ ಯಹೂದ್ಯರೂ ಕೂಡ ಮುಂಬಯಿಯಲ್ಲಿ ತಮ್ಮ ಅದೃಷ್ಟದ ಅನ್ವೇಷಣ ಮಾಡಿದ್ದಾರೆ.

ಮುಂಬಯಿಯಲ್ಲಿಯ ರಾಜಕಾರಣ ಮುಂಬಯಿಗಿಂತಲೂ ದೊಡ್ಡದು. ಚಿತ್ರೋದ್ಯಮಕ್ಕಿಂತಲೂ ದೊಡ್ಡ ಉದ್ಯಮ ಇಲ್ಲಿ ರಾಜಕಾರಣವೊಂದೇ ಎನ್ನುತ್ತಾರೆ ಒಬ್ಬರು! ರಾಜ್ಯ ಪುನರ್ಘಟನಾ ಆಯೋಗದ ವರದಿ ಪ್ರಕಟವಾದ ಮೇಲೆ ಮುಂಬಯಿಯಲ್ಲಾದ ಹಣಾಹಣಿಯನ್ನು ನೋಡಿದರೆ ಈ ಮಾತನ್ನು ಯಾರೂ ಒಮ್ಮೆಗೇ ನಿರಾಕರಿಸುವಂತಿಲ್ಲ. ಮುಂಬಯಿ ರಾಜಕಾರಣ ಇಷ್ಟು ತುರುಸಿನದಾಗಲು ಕಾರಣವೇನು? ಇಲ್ಲಿನ ಔದ್ಯಮಿಕ ಪರಿಸ್ಥಿತಿಯೆ. ಕಾರ್ಮಿಕರ ರಾಜಕಾರಣವು ಇಲ್ಲಿ ಆಗಾಗ ರುದ್ರರೂಪತಾಳುವುದೂ ಉಂಟು.

ಮುಂಬಯಿಯ ಹೆಸರಿನೊಡನೆ ನಮ್ಮ ರಾಷ್ಟ್ರೀಯ ಹೋರಾಟದ ಚರಿತ್ರೆ ತಳಕು ಬಿದ್ದಿದೆ. ಭಾರತದ ಪಿತಾಮಹ ದಾದಾಭಾಯಿ ನೌರೋಜಿಯವರು ಮುಂಬಯಿ ಕಾರ್ಪೊರೇಶನ್ನಿನ ಅಧ್ಯಕ್ಷರಾಗಿ ಸಿಂಹಗರ್ಜನೆ ನಡೆಸಿದಾಗ ಬ್ರಿಟಿಶ ಸತ್ತೆಯ ಎದೆ ನಡುಗುತ್ತಿತ್ತು. ಇಲ್ಲಿ ಚೌಪಾಟಿಯಲ್ಲಿ ನಿಂತ ಟಿಳಕರ ಭವ್ಯ ಪ್ರತಿಮೆ ಅವರು ಮುಂಬಯಿಯಲ್ಲಿ ವಹಿಸಿದ ಪಾತ್ರಕ್ಕೆ ಪ್ರತೀಕವಾಗಿದೆ. ಗಾಂಧೀಜಿಯ ರಾಜಕೀಯ ಜೀವನವೂ ಮುಂಬಯಿಯಲ್ಲೇ ಆರಂಭವಾಯಿತು. ಭಾರತ ಮಾತೆಯನ್ನು ಇಬ್ಭಾಗ ಮಾಡಿದ ಜಿನ್ನಾ ಸಾಹೇಬರೂ ಇಲ್ಲಿಯ ಗರಡಿಯಲ್ಲೇ ತಯಾರಾದರು. ಬಾಬು ಗೆನು ಇಲ್ಲಿಯೇ ಚಳವಳಿಯಲ್ಲಿ ಬ್ರಿಟಿಶ ಗುಂಡಿಗೆ ನೇರವಾಗಿ ಎದೆಗೊಟ್ಟು ಪ್ರಾಣಾರ್ಪಣ ಮಾಡಿದನು. ಅಂತೆಯೇ ಕಮ್ಯುನಿಸ್ಟ ಚಳವಳಿಯ ಬೆಂಕಿನವಾಬರಾದ ಡಾಂಗೆ, ರಣದಿವೆ ಮೊದಲಾದವರೂ ಇಲ್ಲಿ ತಯಾರಾಗಿದ್ದಾರೆ.

ಭಾರತದ ರಕ್ಷಣೆಯ ದೃಷ್ಟಿಯಿಂದ ಮುಂಬಯಿಗೆ ಅತ್ಯಂತ ಮಹತ್ವವಿದೆ. ನಮ್ಮ ನೌಕಾಪಡೆಗೆ ಹೇಳಿದ ನೆಲೆಮನೆ ಅದು. ಹಡಗು ಸಾರಿಗೆ, ಸಾಂತಾಕ್ರೂಜಿನ ಮೂಲಕ ನಡೆಯುವ ವಿಮಾನ ಸಾರಿಗೆ ಎರಡೂ ಜಗತ್ತಿನಲ್ಲಿಯೇ ಹೆಸರಾಗಿವೆ.

ಮುಂಬಯಿ ಕಿನಾರೆಯಲ್ಲಿ ಉಪ್ಪಿನ ತಯಾರಿಕೆ ನಡೆಯುತ್ತದೆ. ಸುತ್ತಮುತ್ತ ತೆಂಗಿನಕಾಯಿ ಗೋಧಿ ಮುಂತಾದ ಬೆಳೆಗಳೂ ಕಡಮೆಯಲ್ಲ. ಮುಂಬಯಿಯಲ್ಲಿರುವ ನೂರಾರು ಜವಳಿ ಗಿರಣಿಗಳು ಸಾವಿರಾರು ಕಾರ್ಖಾನೆಗಳ ಮಾತು ಬಿಡಿ. ಭಾರತದ ನಗರಗಳಲ್ಲಿ ಅದಕ್ಕೆ ಮೊದಲನೆಯ ಸ್ಥಾನವಿತ್ತ ಇನ್ನೊಂದು ವಿಷಯವೆಂದರೆ ಟ್ರಾಂಬೆಯ ಅಣುರಿಯಾಕ್ಟರ್ ಮತ್ತು ಎಣ್ಣೆ ಶೋಧನಾಗರಗಳೂ ಸ್ಥಾಪಿತವಾಗಿವೆ. ದೇಶದ ಎಣ್ಣೆ ಉದ್ದಿಮೆಗೆ ಇದರಿಂದ ತುಂಬ ಲಾಭವಾಗಲಿದೆ.

ಮುಂಬಯಿ ಕುರಿತ ಅಂಕೆಸಂಖ್ಯೆಗಳಂತೂ ದಿಗಿಲುಗೊಳಿಸುವಂತಹವೇ. ವಿಸ್ತೀರ್ಣ ೨೦೦ ಚದರ ಮೈಲು, ಜನಸಂಖ್ಯೆ ಸುಮಾರು ೪೦ ಲಕ್ಷ, ಪ್ರಾಥಮಿಕ ಶಾಲೆಗಳು ಸುಮಾರು ೧,೦೦೦, ಪ್ರಾಥಮಿಕ ವಿದ್ಯಾರ್ಥಿಗಳು ೩ ಲಕ್ಷಕ್ಕೂ ಮಿಕ್ಕಿದ್ದಾರೆ. ಹೈಸ್ಕೂಲುಗಳೊ ಸುಮಾರು ೪೦೦. ಮೂವತ್ತು ಕಾಲೇಜುಗಳಲ್ಲಿ ಓದುವ ವಿದ್ಯಾರ್ಥಿಸಂಖ್ಯೆ ೪೦ ಸಾವಿರ ಮೀರಿದೆ. ನಗರ ರಕ್ಷಣೆಗೆ ೧೨ ಸಾವಿರ ಪೋಲೀಸರಿದ್ದಾರೆ. ಹದಿನಾಲ್ಕು ದೊಡ್ಡ ಆಸ್ಪತ್ರೆಗಳಿವೆ, ೫೬ ಮಾರ್ಕೆಟುಗಳಿವೆ. ಸುಮಾರು ೪೦೦ ಎಂಜಿನಿಯರಿಂಗ ಸಂಸ್ಥೆಗಳು ೧೧೦ ಆಹಾರ ವಸ್ತು ತಯಾರಿಕೆ ಸಂಸ್ಥೆಗಳು, ೧೧೦ ರಾಸಾಯನಿಕ ಸಂಸ್ಥೆಗಳು ಮುಂಬಯಿಯಲ್ಲಿವೆ. ಮೂವತ್ತರಷ್ಟು ಬ್ಯಾಂಕುಗಳ ಮುಖ್ಯ ಕಚೇರಿಗಳು ಕೂಡ ಮುಂಬಯಿಯಲ್ಲೇ ಇವೆ.

ವಿದ್ಯಾ ಸಂಸ್ಕೃತಿಗಳಲ್ಲಿಯೂ ಮುಂಬಯಿ ಕಲಕತ್ತೆಯನ್ನು ಹಿಂಬಾಲಿಸಿದೆ. ಭಾರತದ ಮೂರನೆಯ ವಿಶ್ವವಿದ್ಯಾಲಯ ಮುಂಬಯಿಯಲ್ಲಿ ೧೮೫೭ ಫೆಬ್ರವರಿ ೪ರಂದು ಆರಂಭವಾಯಿತು. ೧೭೮೯ರಲ್ಲಿ ಎಂದರೆ ಭಾರತದಲ್ಲಿ ಪತ್ರಿಕೋದ್ಯಮ ಆರಂಭವಾಗಿ ಒಂಬತ್ತು ವರ್ಷಗಳಲ್ಲಿ "ಬಾಂಬೆ ಹೆರಾಲ್ಡ್" ಮುಂಬಯಿಯಿಂದ ಪ್ರಕಟವಾಗತೊಡಗಿತು. ಈಗ ಭಾರತ ಅತ್ಯಂತ ಹಿರಿಯ ಪತ್ರಿಕೆ ಮುಂಬೈಯಿಂದ ಹೊರಡುತ್ತದೆ. ಭಾರತ

ದಲ್ಲಿ ಅತಿ ಹೆಚ್ಚು ಪ್ರಸಾರ ಗಳಿಸಿದ ಪತ್ರಿಕೆ ಕೂಡ ಮುಂಬಯಿಯದೇ.

ಉದ್ದಿಮೆ ವಾಣಿಜ್ಯ ವಿಲಾಸಗಳ ಕೇಂದ್ರವಾದ ಮುಂಬಯಿ ನಗರಸಾಗರ ಅನೇಕರನ್ನು ಅದೃಷ್ಟದ ಆ ದಡಕ್ಕೆ ತಲುಪಿಸಿದರೂ ಇಲ್ಲಿ ಈಜಲಾರದೆ ಮುಳುಗಿದವರೂ ಅಸಂಖ್ಯರು. ಈಸಲಾರದವರು ಇಲ್ಲಿ ಮುಳುಗಲೇಬೇಕು; ಯಾರೂ ರಕ್ಷಿಸಬರುವುದಿಲ್ಲ. ಮುಂಬಯಿಯಲ್ಲಿ ಉದ್ಯೋಗ ದೊರಕಿಸಿ ಜೀವನ ಸಾಗಿಸಬೇಕೆಂದು ಊರು ಬಿಟ್ಟು ತರುಣರು ಅಲ್ಲಿನ ಗೊಂದಲಪುರವನ್ನು ನೋಡಿ ಅಂಜಿ ಎರಡೇ ನಿಮಿಷಗಳಲ್ಲಿ ಉತ್ತರ ಕುಮಾರರನ್ನು ಹಿಂಬಾಲಿಸಿದ ಉದಾಹರಣೆಗಳೂ ಉಂಟು.

ಬೃಹನ್ಮುಂಬಯಿ ಬಹಳ ಕಾಲ ಬೃಹನ್ಮುಂಬ-ಯಿಯಾಗಿ ಉಳಿಯುವುದೆ? ಹೇಳಲಳವಲ್ಲ. ಅದರ ಕೈ ಬೆಳೆಯುತ್ತಲೇ ಇದೆ. ಪುಣೆ, ಅಹಮದಾಬಾದಗಳು ಮುಂಬೈಯ ನೆರೆಮನೆಯಾಗಿವೆ ಈಗ. ಮುಂಬಯಿಯಲ್ಲಿ ಆಫೀಸು, ಪುಣೆಯಲ್ಲಿ ಹೆಂಡತಿ ಮಕ್ಕಳಿರುವ ಮನೆ, ದಿನವೂ ಪ್ರಯಾಣ ಮಾಡಿ ಬರುವಾತ ನೌಕರ ಎಂದರೆ ಮುಂಬೈಯ ಹೊರಗೂ ಮುಂಬಯಿ ಉಂಟೆನ್ನುವುದು ಸತ್ಯವಲ್ಲವೆ?

ಕಲಕತ್ತೆ ಮೊದಲಿನಿಂದಲೂ ಬೆಳೆದಿತ್ತು. ಬ್ರಿಟಿಶರ ರಾಜಧಾನಿಯೆನಿಸಿತ್ತು. ಆದರೆ ಮುಂಬೈ ಶಿಲಾಯುಗದ ಮಾನವರಿದ್ದ ಒಂದು ದ್ವೀಪ ಸಮೂಹ. ಅದು ಕಾಣಿಕೆಯಾಯಿತು. ವರ ದಕ್ಷಿಣೆಯೆನಿಸಿತು. ಬರಿಯ ಹತ್ತು ಪೌಂಡು ಬಾಡಿಗೆ ತರುವ ಮರುಭೂಮಿಯೆನಿಸಿತು. ಆದರೆ ಕೊನೆಗೆ ಇಂದು ಅದು ಜಗತ್ತಿನಲ್ಲಿಯ ಯಶಸ್ವಿ ಖರದ ಮೇಲೆ ನಿಂತಿದೆ.

ಇಂದು ಭಾರತದ ಮೂಲೆಮೂಲೆಗಳಿಂದ ಮುಂಬಯಿಯ ಕಡೆಗೆ ಜನರ ನೂಕುನುಗ್ಗಲು ನಡೆದಿದೆ—ಅದೃಷ್ಟವನ್ನು ದೋಚಲೆಂದು. ದಿನವೂ ಬರುವ ಈ ಸಾವಿರಾರು ಜನರಲ್ಲಿ ಮುಂಬೈಯಿಂದ ಮರಳಿದವರುಂಟು; ಕಡಮೆ. ಮರಳಿದವರಲ್ಲಿಯೂ ಮರಳಿಮರಳಿ ಭೆಟ್ಟಿಕೊಡುವವರು ಹೆಚ್ಚಾಗಿರುವರು.

ಮುಂಬಯಿಯ ಜನಸಾಗರದಲ್ಲಿ ಆಕಾರದಿಂದ ಯಾರೂ ಯಾರನ್ನೂ ಗುರುತಿಸುವಂತಿಲ್ಲ. ನಿನ್ನೆ ಕ್ರೀಡಾ ಪಟುವಾಗಿ ಮೆರೆದ ಮಹಾರಾಜ ಇಂದು ಕಾರ್ ಡ್ರೈವರನಾಗಿ ಜೀವನದ ದಾರಿ ನೋಡಿದರೆ ನಿನ್ನೆ ಕಾರ್ ಡ್ರೈವರನೆನಿಸಿದ್ದವ ಇಂದು ಮಹಾರಾಜನಂತೆ ಮೆರೆಯುತ್ತಿರಬಹುದು. ಅದಕ್ಕೇ ಪ್ರತಿಯೊಬ್ಬ ವ್ಯಕ್ತಿಯ ಬುದ್ಧಿಶಕ್ತಿ ಮತ್ತು ಅದರ ಉಪಯೋಗದ ಸಾಮರ್ಥ್ಯ ಇವಷ್ಟೇ ಮುಂಬಯಿಯ ಅಂತರಾರ್ಥವನ್ನೊಲಿಸಬಲ್ಲ ಶಕ್ತಿಗಳೆನ್ನುತ್ತಾರೆ.



## ಒಂದೇ ಜಾತಿ

ಡಾಕ್ಟರ್ : "ಅಲ್ಲರೀ, ನೀವು ಮೊನ್ನೆ ಕೊಟ್ಟ ಚೆಕ್ ತಿರುಗಿ ಬಂದಿದೆಯಲ್ಲ ಬ್ಯಾಂಕಿನಿಂದ?"

ರೋಗಿ : "ಹೀಗೊ? ತಮಾಷೆಯಾಗಿದೆ. ನನ್ನ ಸಂಧಿವಾತವೂ ತಿರುಗಿ ಬಂದಿದೆಯಲ್ಲ."

ಕೆ. ಆರ್. ಎನ್. ಸ್ವಾಮಿ

# ೧೮೫೭ ಮತ್ತು ವಿಕ್ಟೋರಿಯ

**ಬಂಡಾಯವೇಳುವುದೆಂದು ಅವಳಿಗೆ ಮೊದಲೇ ಎಚ್ಚರಿಕೆ ಬಂದಿತ್ತು ;
ಆದರೆ ಅವಳ ಮಂತ್ರಿಗಳು ಅದನ್ನು ಅಲಕ್ಷಿಸಿದರು**

೧೮೫೭ ರಲ್ಲಿ ಭಾರತೀಯರು ಪ್ರಥಮತಃ ಬ್ರಿಟಿಶ್ ರಾಜಸತ್ತೆಯ ವಿರುದ್ಧ ಸಮರ ಹೂಡಿದರು. ಈ ಸ್ವಾತಂತ್ರ್ಯಸಮರದ ವಾರ್ತೆ ಆಗ ಇಂಗ್ಲಂಡಿನ ರಾಣಿಯಾಗಿದ್ದ ವಿಕ್ಟೋರಿಯಳಿಗೆ ತಿಳಿದದ್ದು ಆ ವರ್ಷ ಜೂನ ೫ ನೆಯ ದಿನಾಂಕ. ಇಂಗ್ಲಂಡಿನ ಪ್ರಧಾನ ಮಂತ್ರಿಗಳಾದ ಲಾರ್ಡ್ ಪಾಮರ್ಸ್ಟನ್‌ರು ಈ ಸಮಾಚಾರವನ್ನು ದೂತನ ಮುಖಾಂತರ ರಾಣಿಗೆ ತಿಳಿಸಿದರು. ಅವರು ಕಳಿಸಿದ ಪತ್ರದಲ್ಲಿ " ಭಾರತೀಯ ಶಿಪಾಯಿಗಳಲ್ಲಿ ಬಂಡಾಯದ ಬೇಗೆ ಹಬ್ಬಿದ ವಾರ್ತೆ ಇದೆ. ಅವರ ಮನಸ್ಸಿನಲ್ಲಿ ಬ್ರಿಟಿಶರ ಬಗ್ಗೆ ದ್ವೇಷವೂ ಉತ್ಪನ್ನವಾಗಿದೆ. ಆದರೆ ಈ ಪರಿಸ್ಥಿತಿಯನ್ನು ನಾವು ಬೇಗನೆ ನಿಯಂತ್ರಣಕ್ಕೆ ತರುವೆವು," ಎಂದವರು ಬರೆದಿದ್ದರು.

ಬ್ರಿಟಿಶ್ ಸಾಮ್ರಾಜ್ಯದಲ್ಲಿ ಸಂಭವಿಸುವ ಮಹತ್ವದ ಘಟನೆಗಳ ವಾರ್ತೆ ಮೊದಲಿಗೆ ಇಂಗ್ಲಂಡಿನ ಪ್ರಧಾನ ಮಂತ್ರಿಗಳಿಗೆ ತಿಳಿಯುತ್ತಿತ್ತು. ಅವರು ಅದನ್ನು ತಮ್ಮ ಸಲಹೆ ಸೂಚನೆಗಳೊಂದಿಗೆ ರಾಜನಿಗೆ ತಿಳಿಸುತ್ತಿದ್ದರು. ರಾಜಮುದ್ರೆಯೊತ್ತಿ ಬಂದು ಮಾಡಿದ ಲಕೋಟೆಯಲ್ಲಿ ತಮ್ಮ ಪತ್ರವನ್ನಿಟ್ಟು ವಿಶೇಷ ದೂತನ ಮೂಲಕ ರಾಜನಿಗೆ ಮುಟ್ಟಿಸುತ್ತಿದ್ದರು. ಈ ಪದ್ಧತಿ ಅಲ್ಲಿ ೧೮ ನೆಯ ಶತಮಾನದಲ್ಲಿ ಆರಂಭವಾದದ್ದು ಇಂದಿಗೂ ನಡೆದುಕೊಂಡು ಬಂದಿದೆ.

ಭಾರತದಲ್ಲಿ ಪ್ರಾರಂಭವಾದ ಸ್ವಾತಂತ್ರ್ಯ ಸಮರದ ವಾರ್ತೆಯಿಂದ ರಾಣಿ ವಿಕ್ಟೋರಿಯಳು ಅಸ್ವಸ್ಥಳಾದಳು. ಇಂಥದೊಂದು ಪ್ರಸಂಗ ಉದ್ಭವಿಸಬಹುದೆಂಬ ಕಲ್ಪನೆ ಅವಳ ಪತಿ ಪ್ರಿನ್ಸ್ ಆಲ್ಬರ್ಟರಿಗೆ ಮೊದಲಿನಿಂದಲೂ ಇತ್ತು. ೧೮೫೬, ಡಿಸೆಂಬರ ತಿಂಗಳಲ್ಲಿ ಅವರು ತಮ್ಮ ಸಂದೇಹವನ್ನು ಹೆಂಡತಿಯೆದುರು ಆಡಿ ತೋರಿಸಿದ್ದರು. ಭಾರತೀಯ ಶಿಪಾಯಿಗಳಲ್ಲಿ ಅಸಂತೋಷ ಹಬ್ಬುತ್ತಿದೆ. ಒಂದಿಲ್ಲೊಂದು ದಿನ ಅದರಿಂದ ಇಂಗ್ಲಂಡಿಗೆ ಆಘಾತವಾಗದೆ ಹೋಗದು, ಆದ್ದರಿಂದ ಭಾರತದಲ್ಲಿರುವ ಬ್ರಿಟಿಶ ಸೈನಿಕರ ಸಂಖ್ಯೆಯನ್ನು ಹೆಚ್ಚಿಸಬೇಕೆಂಬ ಎಚ್ಚರಿಕೆಯನ್ನು ಪ್ರಿನ್ಸ್ ಆಲ್ಬರ್ಟರು ರಾಣಿ ವಿಕ್ಟೋರಿಯಳಿಗೂ ಬ್ರಿಟಿಶ್ ಮಂತ್ರಿ ಮಂಡಳಕ್ಕೂ ಕೊಟ್ಟಿದ್ದರು. ಆದರೆ ಪ್ರಧಾನಮಂತ್ರಿ ಪಾಮರ್ಸ್ಟನ್ನರು ಇದು ನಿಷ್ಕಾರಣ ಭೀತಿ ಎಂದು ಈ ಎಚ್ಚರಿಕೆಯನ್ನು ದುರ್ಲಕ್ಷಿಸಿದರು. ಅವರು ಭಾರತದಲ್ಲಿಯ ಬ್ರಿಟಿಶ್ ಸೈನಿಕರ ಸಂಖ್ಯೆಯನ್ನು ಹೆಚ್ಚಿಸಲಿಲ್ಲ. ಆಗ ಭಾರತದಲ್ಲಿ ಬ್ರಿಟಿಶ್ ಮತ್ತು ಹಿಂದೀ ಸೈನಿಕರ ಪ್ರಮಾಣ ೧:೬ ಇದ್ದಿತು.

ಬ್ರಿಟಿಶ್ ಪಾರ್ಲಿಮೆಂಟಿನಲ್ಲಿ ವಿರೋಧಿ ಪಕ್ಷದ ಮುಂದಾಳಾಗಿದ್ದ ಬೆಂಜಾಮಿನ್ ಡಿಝುರಾಯಲಿ ಕೂಡ ಒಳ್ಳೆ ದೂರದರ್ಶಿಯಾಗಿದ್ದನು. ಲಾರ್ಡ್ ಡಾಲಹೌಸಿಯು ಭಾರತದಲ್ಲಿ ನಡೆಸಿದ ಕೋಲಾಹಲದ ದುಷ್ಪರಿಣಾಮವನ್ನು ಇಂಗ್ಲಂಡು ಅನುಭವಿಸಬೇಕಾಗುವದು ಎಂದವನು ೧೮೫೭ ರ ಸ್ವಾತಂತ್ರ್ಯ ಸಮರ ಆರಂಭವಾಗುವದಕ್ಕೆ ಮುಂಚೆಯೆ ರಾಣಿಗೆ ತಿಳಿಸಿದ್ದನು.

ಒಂದಿಲ್ಲೊಂದು ನೆವವನ್ನು ಮುಂದೆ ಮಾಡಿ ಗವರ್ನರ್ ಜನರಲ್ ಲಾರ್ಡ್ ಡಾಲಹೌಸಿಯು ಭಾರತದ ಸಂಸ್ಥಾನಗಳನ್ನು ನುಂಗತೊಡಗಿದ್ದನು. ಔಧದ ನವಾಬನನ್ನು ಪದಚ್ಯುತನನ್ನಾಗಿ ಮಾಡಿ ಆ ಸಂಸ್ಥಾನವನ್ನು ವಶಪಡಿಸಿಕೊಂಡ ವಾರ್ತೆಯನ್ನು ಕೇಳಿದೊಡನೆ ಡಿಝುರಾಯಲಿಯು ಈಸ್ಟ್ ಇಂಡಿಯ ಕಂಪನಿಯ ಅದೂರದರ್ಶಿಯಾದ ಮತ್ತು ಅನಿಷ್ಟವಾದ ಧೋರಣದತ್ತ ರಾಣಿಯ ಲಕ್ಷ್ಯವನ್ನು ಸೆಳೆದನು ಲಾರ್ಡ್ ಡಾಲಹೌಸಿಯ ಬದಲು ಬೇರೆ ಗವರ್ನರ್ ಜನರಲ್ಲನನ್ನು ನೇಮಿಸಬೇಕೆಂದು. ವಿಕ್ಟೋರಿಯ ರಾಣಿ ಅವನ ಅಧಿಕಾರಾವಧಿ ಮುಗಿವವರೆಗೆ ಕಾಯುವ ಪ್ರಸಂಗವಿತ್ತು. ಏಕೆಂದರೆ ಭಾರತದ ರಾಜ್ಯಕಾರಭಾರ ಸೂತ್ರವು ಈಸ್ಟ್ ಇಂಡಿಯ ಕಂಪನಿಯ ಕೈಲಿತ್ತು. ಕಂಪನಿಯ ಆಂತರಿಕ ವ್ಯವಹಾರದಲ್ಲಿ ಕೈಹಾಕುವ ಅಧಿಕಾರ ವಿಕ್ಟೋರಿಯ ರಾಣಿಗೆ ಇರಲಿಲ್ಲ. ಕಂಪನಿಯ ಘಟನೆಯಂತೆ ಹೊಸ ಗವರ್ನರ್ ಜನರಲ್ಲನ ಹೆಸರು ಸೂಚಿಸುವ ಹಕ್ಕು ಕಂಪನಿಯ ಡೈರೆಕ್ಟರ ಮಂಡಳಕ್ಕೆ ಮಾತ್ರ ಇತ್ತು. ಸೂಚಿತ ಹೆಸರಿಗೆ ಸಮ್ಮತಿಯನ್ನೀಯುವ ಔಪಚಾರಿಕ ಕಾರ್ಯ ಮಾತ್ರ ರಾಣಿಯದಾಗಿತ್ತು. ಆದ್ದರಿಂದ ಗೊತ್ತಿದ್ದರೂ ವಿಕ್ಟೋರಿಯ ರಾಣಿ ಏನೂ ಮಾಡಲಾರದೆ ಹೋದಳು.

ಡಾಲಹೌಸಿಯ ನಂತರ ಲಾರ್ಡ್ ಕ್ಯಾನಿಂಗನ ಹೆಸರನ್ನು ಕಂಪನಿಯ ಡಾಯರೆಕ್ಟರ ಮಂಡಳವು ಸೂಚಿಸಿತು. ವಿಕ್ಟೋರಿಯ ರಾಣಿಗೆ ಇದು ಸೇರಿಬರದ್ದರಿಂದ ಅವಳು ಇನ್ನು ಮುಂದೆ ಗವರ್ನರ್ ಜನರಲ್ಲರ ಆಯ್ಕೆ ಮಾಡುವಾಗ ತನ್ನ ಸಲಹೆ ಪಡೆಯಬೇಕು ಎಂದು ತಿಳಿಸಿದಳು.

ಭಾರತದಲ್ಲಿ ಬಂಡಾಯದ ಕೋಲಾಹಲ ನಡೆದಿದ್ದಾಗ ಲಂಡನ್ನಿನ ರಾಜಗೃಹದಲ್ಲಿ ಇಂಗ್ಲಂಡಿನ ರಾಜಕುಮಾರಿ ಮತ್ತು ಜರ್ಮನಿಯ ರಾಜಪುತ್ರನ ವಿವಾಹ ಸಮಾರಂಭದ ಗದ್ದಲ ನಡೆದಿತ್ತು. ೧೭೫೭ರ ಪ್ಲಾಸಿ ಕಾಳಗದ ವಿಜಯದ ಶತಮಾನೋತ್ಸವವು ಕೂಡ ಇದೇ ಸಮಯದಲ್ಲಿ ಆಚರಿಸಲ್ಪಡುತ್ತಿತ್ತು.

ಭಾರತದ ಸ್ವಾತಂತ್ರ್ಯ ಸಮರದ ವಾರ್ತೆ ಲಂಡನ್ನಿಗೆ ಬರುತ್ತಿದ್ದರೂ ಪ್ರಧಾನ ಮಂತ್ರಿ ಪಾಮರ್ಸ್ಟನ್ನರು ಶಾಂತಚಿತ್ತರಾಗಿಯೇ ಇದ್ದರು. ಈ ಬಂಡಾಯ ಏನೋ ಒಂದು ಸಣ್ಣ ಪುಂಡಾಟಿಕೆ, ಭಾರತದಲ್ಲಿರುವ ಬ್ರಿಟಿಶರು ಅದನ್ನು ಬೇಗನೆ ಹತ್ತಿಕ್ಕುವರು ಎಂದವರು ವಿಕ್ಟೋರಿಯ ರಾಣಿಗೆ ಆಶ್ವಾಸನವಿತ್ತರು.

ಮುಂದೆ ಕೆಲದಿನಗಳಲ್ಲಿಯೇ ಭಾರತೀಯ ಸೈನಿಕರು ದಿಲ್ಲಿಯನ್ನು ಕೈವಶ ಮಾಡಿಕೊಂಡ ಸುದ್ದಿ ವಿಕ್ಟೋರಿಯ ರಾಣಿಯ ಕಿವಿಗೆ ಬಿತ್ತು. ಸ್ವಾತಂತ್ರ್ಯ ಸಮರದಲ್ಲಿ ಮೊಗಲ ಸಮ್ರಾಟನೂ ಸೇರಿಕೊಂಡಿರುವ ವಿಷಯ ಅವಳಿಗೆ ಗೊತ್ತಿರದ್ದರಿಂದ ಮೊಗಲ ರಾಜಮನೆತನದ ಸುರಕ್ಷಿತತೆಯ ಬಗ್ಗೆ ಅವಳಿಗೆ ವಿವಂಚನೆಯುಂಟಾಯಿತು.

ದಿಲ್ಲಿಯನ್ನು ಗೆದ್ದುಕೊಂಡ ಶಿಪಾಯಿಗಳು ಮೇಲಿಂದ ಮೇಲೆ ವಿಜಯ ಪಡೆಯುತ್ತಿದ್ದಾರೆಂಬ ವಾರ್ತೆಗಳು ಲಂಡನಿಗೆ ಬರತೊಡದಗಿವು. ಆ ಸಮಯದಲ್ಲಿ ತನಗಾದ ಆಘಾತ-ವ್ಯಥೆಗಳನ್ನು ಅವಳು ತನ್ನ ದೊಡ್ಡಪ್ಪ-ಬೆಲ್ಜಮದ ರಾಜನಿಗೆ ಬರೆದ ಪತ್ರದಲ್ಲಿ ಕಾಣಿಸಿದ್ದಳು : " ನಮ್ಮ ಲಕ್ಷ್ಯ ಭಾರತದತ್ತ ಹೋಗಿದ್ದು ಅಲ್ಲಿಯ ಪರಿಸ್ಥಿತಿ ವಿವಂಚನೆಯನ್ನುಟುಮಾಡಿದೆ. ಭಾರತದಲ್ಲಿರುವ ಬ್ರಿಟಿಶ್ ಸೈನ್ಯವನ್ನು ಒಮ್ಮೆಂದೊಮ್ಮೆ ಹೆಚ್ಚಿಸುವದು ಸಾಧ್ಯವಿಲ್ಲ. ಭಾರತದಲ್ಲಿರುವ ಇಂಗ್ಲೀಶ್ ಸ್ತ್ರೀಯರು ಮತ್ತು ಮಕ್ಕಳ ಮೇಲೆ ಬಂಡುಗಾರರು ಮಾಡುತ್ತಿರುವ ಅತ್ಯಾಚಾರಕ್ಕೆ ಸರಿಸಮಾನವಾದ ದುಷ್ಕೃತ್ಯ ಈ ಯುಗದಲ್ಲಿ ಇನ್ನೊಂದಿಲ್ಲ. ಇಂಗ್ಲಂಡಿನ ಸಾಮರ್ಥ್ಯಕ್ಕೆ ಬಲವಾದ ಆಘಾತವಾಗಿದೆ. ಪರಿಸ್ಥಿತಿಯನ್ನು ಹಿಡಿತಕ್ಕೆ ತರಲು ನಮ್ಮೆಲ್ಲ ಸಾಧನ ಸಾಮಗ್ರಿಗಳನ್ನು ಉಪಯೋಗಿಸುತ್ತಿದ್ದೇವೆ. ಆದರೂ ನಾವು ಈ ಸಂಕಟದಿಂದ ಪಾರಾದರೆ ಅದು ನಮ್ಮ ಅದೃಷ್ಟವೆಂದೇ ಹೇಳಬೇಕು."

ಇದೇ ವೇಳೆಯಲ್ಲಿ ಇಂಗ್ಲಂಡ್ ಮತ್ತು ಫ್ರಾನ್ಸುಗಳ ಸಂಬಂಧ ಕೆಟ್ಟಿತ್ತು. ಫ್ರೆಂಚ ಚಕ್ರವರ್ತಿಯ ಕೊಲೆ ಮಾಡುವ ಒಳಸಂಚು ಒಂದು ಬಯಲಿಗೆ ಬಂದಿತ್ತು. ಈ ಒಳಸಂಚಿನ ಸೂತ್ರಧಾರಿಯಾಗಿದ್ದ ಓರ್ಸಿನಿ ಎಂಬವನಿಗೆ ಇಂಗ್ಲಂಡು ಆಶ್ರಯ

ಕೊಟ್ಟಿತೆಂದು ಫ್ರೆಂಚ ಚಕ್ರವರ್ತಿ ಮತ್ತು ಜನತೆ ಇಂಗ್ಲಂಡಿನ ಮೇಲೆ ಸಿಟ್ಟಾಗಿದ್ದರು. ಇಂಥ ಪರಿಸ್ಥಿತಿಯಲ್ಲಿ ಇಂಗ್ಲಂಡು ತನ್ನೆಲ್ಲ ಸೈನ್ಯವನ್ನೂ ಭಾರತಕ್ಕೆ ಕಳಿಸಿದರೆ ಫ್ರಾನ್ಸು ಇಂಗ್ಲಂಡಿನ ಮೇಲೆ ದಾಳಿ ಮಾಡುವ ಸಂಭವವೂ ಇತ್ತು.

ಇಂಥ ಬಿಕ್ಕಟ್ಟಿನ ಸಮಯದಲ್ಲಿ ವಿಕ್ಟೋರಿಯ ರಾಣಿ ತನ್ನ ಚಾಣಾಕ್ಷತನದಿಂದ ಫ್ರೆಂಚ ಚಕ್ರವರ್ತಿ ಮೂರನೆಯ ನೆಪೋಲಿಯನ್ನನೊಂದಿಗೆ ಸ್ನೇಹ ಸಂಬಂಧವನ್ನು ಪ್ರಸ್ಥಾಪಿಸುವಲ್ಲಿ ಸಮರ್ಥಳಾದಳು. ದಿಲ್ಲಿಯ ಪತನದ ವಾರ್ತೆ ಬಂದೊಡನೆ ನೆಪೋಲಿಯನ್ನನು ಬ್ರಿಟಿಶ್ ಸೈನ್ಯವನ್ನು ಭಾರತಕ್ಕೆ ಕಳಿಸಲು ಫ್ರಾನ್ಸಿನ ಭೂಮಾರ್ಗವನ್ನು ಉಪಯೋಗಿಸಬಹುದು ಎಂದು ಹೇಳಿದನು. ವಿಕ್ಟೋರಿಯ ಸೌಜನ್ಯ ಪೂರ್ಣವಾಗಿ ಈ ಸವಲತ್ತನ್ನು ನಿರಾಕರಿಸಿದಳು.

ಆಗಿನ್ನೂ ಸುಯೇಝು ಕಾಲುವೆ ತೋಡಲ್ಪಟ್ಟಿರಲಿಲ್ಲ. ಇಂಗ್ಲಂಡಿನ ಹಡಗುಗಳು ಭಾರತಕ್ಕೆ ಬರುವದಾದರೆ ಕೇಪ್ ಆಫ್ ಗುಡ್ ಹೋಪನ್ನು ಸುತ್ತುವರಿದು ಬರಬೇಕಾಗುತ್ತಿತ್ತು. ಈ ಪ್ರವಾಸಕ್ಕೆ ಬಹಳ ದಿನಗಳು ಹಿಡಿಯುತ್ತಿದ್ದವು. ದಿಲ್ಲಿಯ ಪತನದ ನಂತರ ಆದಷ್ಟು ತ್ವರಿತವಾಗಿ ಬ್ರಿಟಿಶ್ ಸೈನ್ಯವನ್ನು ಭಾರತಕ್ಕೆ ಕಳಿಸಬೇಕಾಗಿತ್ತಾದ್ದರಿಂದ ಕೇಪ್ ಆಫ್ ಗುಡ್ ಹೋಪನ್ನು ಸುತ್ತುವರಿದು ಬರುವಷ್ಟು ಅವಧಿಯಿರಲಿಲ್ಲ. ಆದ್ದರಿಂದ ತುರ್ಕಸ್ಥಾನದ ಸುಲ್ತಾನನ ಸಮ್ಮತಿ ಪಡೆದು ಇಂಗ್ಲಿಶ್ ಸೈನ್ಯವು ಇಸ್ಥಮಸ್ ಮಾರ್ಗವಾಗಿ ಬಂದು ಕೆಂಪು ಸಮುದ್ರದಲ್ಲಿ ತಳವೂರಿದ್ದ ಹಡಗುಗಳನ್ನೇರಿ ಹೊರಟಿತು.

ಭಾರತದ ವಾರ್ತೆ ತಿಂಗಳಿಗೆರಡುಸಲ ರಾಣಿಗೆ ತಲಪುತ್ತಿತ್ತು. ಆದರೆ ಭಾರತದ ಬಗ್ಗೆ ವಿವಂಚನೆಗೊಳಗಾಗಿದ್ದ ರಾಣಿಗೆ ಈ ಅವಧಿ ಯುಗದಂತೆ ಕಾಣಿಸತೊಡಗಿದ್ದರಿಂದ ಅವಳು ಭಾರತದ ಸುದ್ದಿ ತರುವ ಹಡಗುಗಳು ಇಟಲಿಯ ಟ್ರಿಸ್ಟಿ ಬಂದರದಲ್ಲಿ ತಂಗಿ ಅಲ್ಲಿಂದ ಆ ಸಮಾಚಾರವನ್ನು ತಂತಿ ಮೂಲಕ ತನಗೆ ಕಳಿಸುವಂತೆ ಏರ್ಪಾಡು ಮಾಡಿದಳು.

ಇಂಗ್ಲಂಡಿನ ಜನತೆಯಲ್ಲೂ ಉದ್ರೇಕವುಂಟಾಗಿತ್ತು. ಭಾರತದಲ್ಲಿರುವ ಬ್ರಿಟಿಶ್ ಸೈನ್ಯಕ್ಕೆ ಆದಷ್ಟು ಬೇಗ ಸಹಾಯ ಕಳಿಸಬೇಕು, ಅದಕ್ಕಾಗಿ ರಾಣಿಯು ಮಂತ್ರಿ ಮಂಡಳದ ಮೇಲೆ ಒತ್ತಾಯ ತರಬೇಕು ಎಂಬ ಸಹಸ್ರಾರು ಅರ್ಜಿಗಳು ಬಂದವು. ಭಾರತದ ಬಂಡಾಯವನ್ನು ಹತ್ತಿಕ್ಕಲು ತ್ವರಿತವಾಗಿ ಕ್ರಮಗಳನ್ನು ಕೈಕೊಳ್ಳಬೇಕೆಂದು ವಿಕ್ಟೋರಿಯ ಮಂತ್ರಿ ಮಂಡಳಕ್ಕೆ ಸೂಚಿಸಿದಳು.

ಆದರೆ ರಾಣಿ ತಮ್ಮ ಕಾರ್ಯದಲ್ಲಿ ಈ ರೀತಿ ಕೈ ಹಾಕಿದ್ದು ಪಾಮರ್ಸ್ಟನ್ನರಿಗೆ ಸೇರಲಿಲ್ಲ. ಗಡಿಬಿಡಿಯಿಂದ ಪ್ರಯೋಜನವಿಲ್ಲವೆಂದವರು ರಾಣಿಗೆ ತಿಳಿಸಿದರು. ಅವರು ರಾಣಿಗೆ ಬರೆದ ಪತ್ರವೊಂದರಲ್ಲಿ "ವಿರೋಧಿ ಪಕ್ಷದ ಧುರೀಣತ್ವ ರಾಣಿಯವರ ಬಳಿ ಇಲ್ಲ. ಅದೊಂದು ಸುದೈವದ ಮಾತು" ಎಂದಿದ್ದರು.

ಭಾರತದ ಸ್ವಾತಂತ್ರ್ಯ ಸಮರ ಭರದಲ್ಲಿದ್ದಾಗ ವಿಕ್ಟೋರಿಯ ರಾಣಿ ಅಗಸ್ಟ್ ತಿಂಗಳ ಕೊನೆಗೆ ವಿಶ್ರಾಂತಿಗಾಗಿ ಮೋರೆಲ್ ಕ್ಯಾಸಲ್ಲಿಗೆ ಹೋದಾಗ ಅವಳ ವಿರುದ್ಧ ಆಕ್ರೋಶವೆದ್ದಿತು. ಬ್ರಿಟಿಶ್ ಜನತೆ ಮತ್ತು ಪತ್ರಿಕೆಗಳು ಅವಳ ಮೇಲೆ ಟೀಕೆಯ ಮಳೆಯನ್ನೆ ಕರೆದವು. ಒಂದು ಪತ್ರಿಕೆಯು "ಪಾರ್ಲಿಮೆಂಟಿನ ಅಧಿವೇಶನ ಇನ್ನೂ ನಡೆದಿದೆ. ಅಲ್ಲಿ ಭಾರತದಲ್ಲಿ ಇಂಗ್ಲಿಶ್ ಸೈನ್ಯದ ಮೇಲೆ ಅಗ್ನಿವರ್ಷವಾಗುತ್ತಿದೆ. ಇಂಥ ಸ್ಥಿತಿಯಲ್ಲಿ ಮಹಾರಾಣಿಯು ವಿಶ್ರಾಂತಿಗಾಗಿ ಲಂಡನ್ನಿನಿಂದ ತೆರಳಿರುವದು ವಿಷಾದದ ಸಂಗತಿ. ಮಹಾರಾಣಿಯು ಖಾಸಗಿ ಕೆಲಸಗಳ ನಿಮಿತ್ತವಾಗಿ ದೇಶಕಾರ್ಯವನ್ನು ಬಲಿಗೊಡಬಾರದು" ಎಂದು ಬರೆದಿತ್ತು.

ಈ ಕಠಿಣ ಸಮಯದಲ್ಲಿ ಯುರೋಪಿನ ಇತರ ರಾಜರು ಇಂಗ್ಲಂಡಿಗೆ ಸಹಾಯ ಮಾಡಲು ಮುಂದೆ ಬಂದದ್ದೇನೂ ಆಶ್ಚರ್ಯವಲ್ಲ. ಬೆಲ್ಜಿಮದ ರಾಜ ಲಿಯೋಪೋಲ್ಡ್ (ವಿಕ್ಟೋರಿಯಳ ದೊಡ್ಡಪ್ಪ) ತನ್ನ ಸೈನ್ಯವನ್ನು ಬೇಕಾದರೆ ಸಹಾಯಕ್ಕೆ ಕಳಿಸುವದಾಗಿ ಬರೆದು ತಿಳಿಸಿದ. ಏನು ಮಾಡೋಣ ಎಂದು ರಾಣಿ ಕೇಳಿದಾಗ ಪಾಮರ್ಸ್ಟನ್ನರು ಬೇಡವೆಂದರು. ತಮ್ಮನ್ನು ಎದುರಿ

ಸಲು ಇಂಗ್ಲಂಡು ಇತರರ ಸಹಾಯ ಪಡೆಯ ಬೇಕಾಯಿತು ಎಂದು ಭಾರತದ ಬಂಡುಗಾರರಿಗೆ ಗೊತ್ತಾದರೆ ಮುಂದೆ ಅವರನ್ನು ನಿಸ್ತರಿಸುವದು ಕಠಿಣವಾದೀತು ಎಂದು ಅವರು ಹೇಳಿದರು. ಬೆಲ್ಜಮ ರಾಜನ ಸಹಾಯ ನಿರಾಕರಿಸಲ್ಪಟ್ಟಿತು.

ಈ ಬಂಡಾಯದ ವಾರ್ತೆಯಿಂದ ಕೆರಳಿದ್ದ ಬ್ರಿಟಿಶರು ಇಂಗ್ಲಂಡಿನಲ್ಲಿದ್ದ ಕೆಲವೇ ಭಾರತೀಯರಿಗೆ ಉಪದ್ರವ ಕೊಡಹತ್ತಿದರು. ಈಸ್ಟ್ ಇಂಡಿಯ ಕಂಪನಿ ಎಷ್ಟೋ ಸಂಸ್ಥಾನಗಳನ್ನು ನುಂಗಿ ಅವುಗಳ ರಾಜಮಹಾರಾಜರನ್ನು ಇಂಗ್ಲಂಡಿಗೆ ಗಡೀಪಾರು ಮಾಡಿತ್ತು. ಇಂಥವರಲ್ಲಿ ಪಂಜಾಬದ ಮಹಾರಾಜಾ ರಣಜಿತಸಿಂಗನ ಮಗ ದಲೀಪಸಿಂಗನೂ ಒಬ್ಬನಾಗಿದ್ದನು. ಬ್ರಿಟಿಶರು ದಲೀಪಸಿಂಗನನ್ನು ಛಲಿಸತೊಡಗಿದರು.

ವಿಕ್ಟೋರಿಯ ರಾಣಿ ದಲೀಪಸಿಂಗನಿಗೆ ಅಭಯದಾನ ಮಾಡಿರದಿದ್ದರೆ ಆತನ ಅವಸ್ಥೆ ಏನಾಗುತ್ತಿತ್ತೊ ಹೇಳಲು ಬಾರದು. ಲಾರ್ಡ್ ಕ್ಲೆರೆಂಡನ್ನನು "ಭಾರತದ ಬಂಡುಗಾರರು ಬ್ರಿಟಿಶರ ಮೇಲೆ ಮಾಡುತ್ತಿರುವ ಅತ್ಯಾಚಾರವನ್ನು ನಿಷೇಧಿಸುವ ಚಕಾರ ಶಬ್ದವನ್ನೂ ಮಹಾರಾಜ ದಲೀಪಸಿಂಗನು ಆಡದಿರುವದು ಆಶ್ಚರ್ಯದ ಮಾತು" ಎಂದು ರಾಣಿಗೆ ಒಂದು ಪತ್ರ ಬರೆದು ತಿಳಿಸಿದನು.

ಆದರೆ ಇದರಿಂದ ರಾಣಿಯ ಮನಸ್ಸೇನೂ ಕಲುಷಿತವಾಗಲಿಲ್ಲ. ಅವಳು ಲಾರ್ಡ ಕ್ಲೆರೆಂಡನ್ನನಿಗೆ ಪತ್ರಬರೆದು"ಈಸ್ಟ್ಇಂಡಿಯ ಕಂಪನಿ ಮಹಾರಾಜ ದಲೀಪಸಿಂಗನನ್ನು ಪದಭ್ರಷ್ಟನನ್ನಾಗಿ ಮಾಡಿದೆ. ಬ್ರಿಟಿಶ್ ರಾಜಸತ್ತೆಯ ಬಗ್ಗೆ ಆತನಲ್ಲಿ ತಿರಸ್ಕಾರವಿದೆ. ತನ್ನ ದೇಶಬಾಂಧವರನು 'ರಾಕ್ಷಸರು, ಪಿಶಾಚಿಗಳು' ಎಂದಿದ್ದು ಆತನಿಗೆ ಹೇಗೆ ಸೇರಿಕೆಯಾದೀತು? ಸಹಸ್ರಾರು ಸಂಖ್ಯೆಯಲ್ಲಿ ತನ್ನವರು ಗಲ್ಲಿಗೇರಬೇಕೆಂಬ ವಿಚಾರ ಅವನಿಗೆ ಹೇಗೆ ಬಂದೀತು? ಆದ್ದರಿಂದ ಸದ್ಯದ ಪರಿಸ್ಥಿತಿಯಲ್ಲಿ ಮೌನವಾಗಿರಬೇಕೆಂಬ ಆತನ ಧೋರಣ ಯೋಗ್ಯವಾಗಿದೆ" ಎಂದು ತಿಳಿಸಿದಳು.

೧೮೫೭ರ ಸಪ್ಟಂಬರ ತಿಂಗಳವರೆಗೆ ಭಾರತದಲ್ಲಿ ಬ್ರಿಟಿಶರ ಪರಾಭವವಾಗುತ್ತಲೇ ನಡೆಯಿತು. ಈ ಬಂಡಾಯವನ್ನು ಹತ್ತಿಕ್ಕುವದು ಸಾಧ್ಯವಿಲ್ಲ ಎಂದು ಬ್ರಿಟಿಶ್ ಮಂತ್ರಿಮಂಡಳಕ್ಕೆ ನಂಬಿಕೆಯಾಗತೊಡಗಿತ್ತು. ಅವರ ಸಲಹೆಯ ಮೇರೆಗೆ ೧೮೫೭ ಅಕ್ಟೋಬರ ೧೧ ರಂದು ಬ್ರಿಟಿಶರೆಲ್ಲ ಭಾರತದಲ್ಲಿ ಹೋರಾಡುತ್ತಿರುವ ಬ್ರಿಟಿಶ್ ಸೈನ್ಯಕ್ಕೆ ಜಯ ಸಿಗಲೆಂದು ಸಾರ್ವಜನಿಕ ಪ್ರಾರ್ಥನೆ ಸಲ್ಲಿಸಬೇಕು ಎಂದು ವಿಕ್ಟೋರಿಯ ರಾಣಿ ಜನತೆಗೆ ತಿಳಿಸಿದಳು. ಇದು ಅಪ್ರತ್ಯಕ್ಷವಾಗಿ ಬ್ರಿಟಿಶರು ಭಾರತದ ಸೈನಿಕರ ಶೌರ್ಯಕ್ಕರ್ಪಿಸಿದ ಗೌರವವಾಗಿತ್ತು.

ಆದರೆ ಮುಂದೆ ಭಾರತದ ಬಂಡುಗಾರರ ಪ್ರತಾಪ ಕುಗ್ಗಿತು. ಅದರಲ್ಲಿ ಭಾಗವಹಿಸಿದ ಅನೇಕ ರಾಜರು, ಸರದಾರರನೇಕರು ನಿಷ್ಕ್ರಿಯರಾದರು. ದಿಲ್ಲಿ ಮತ್ತೆ ಇಂಗ್ಲೀಷರ ಕೈವಶವಾಯಿತು. ಅಲ್ಲಿಂದ ಮುಂದೆ ಇಂಗ್ಲೀಷರು ವಿಜಯದ ಮೇಲೆ ವಿಜಯ ಸಂಪಾದಿಸುತ್ತ ಹೋದರು. ಮುಂದೆ ಕೆಲದಿನಗಳಲ್ಲಿ ಸ್ವಾತಂತ್ರ್ಯ ಸಮರ ಕೊನೆಗೊಂಡಿತು.

ಮಹಾರಾಣಿ ವಿಕ್ಟೋರಿಯ ಈಸ್ಟ್ ಇಂಡಿಯ ಕಂಪನಿಯನ್ನು ವಿಸರ್ಜಿಸಿ ಭಾರತದ ಆಡಳಿತ ಸೂತ್ರವನ್ನು ತನ್ನ ಕೈಗೆ ತೆಗೆದುಕೊಂಡಳು. ಅವಳು ಭಾರತದ ಜನತೆಯನ್ನುದ್ದೇಶಿಸಿ ಒಂದು ಜಾಹೀರನಾಮೆಯನ್ನು ಹೊರಡಿಸಿದಳು. ಈ ಜಾಹೀರನಾಮೆಯನ್ನು ಬರೆದು ತಯಾರಿಸುವ ಕಾರ್ಯವನ್ನವಳು ಲಾರ್ಡ್ ಡರ್ಬಿಯವರಿಗೊಪ್ಪಿಸುವಾಗ "ರಕ್ತಮಯವಾದ ಯಾದವೀ ಯುದ್ಧದ ನಂತರ ಪೂರ್ವದ ೧೦ ಕೋಟಿ ಜನರನ್ನುದ್ದೇಶಿಸಿ ಮಹಾರಾಣಿ ಮಾತಾಡುತ್ತಿದ್ದಾಳೆಂಬುದನ್ನು ನೆನಪಿಟ್ಟುಕೊಂಡು ಅತ್ಯಂತ ಸೌಜನ್ಯದ ಶೈಲಿಯಲ್ಲಿ ಬರೆಯಿರಿ. ಅದರ ಪ್ರತಿಶಬ್ದದಲ್ಲಿಯೂ ನಮ್ಮ ಔದಾರ್ಯ, ಧಾರ್ಮಿಕವೃತ್ತಿ, ದಾನಶೂರತೆಗಳು ಕಂಡುಬರಬೇಕು" ಎಂದು ಹೇಳಿದ್ದಳು.

# ಮಕ್ಕಳು ಹಣದ ಬಗ್ಗೆ ಏನೆಣಿಸುತ್ತಾರೆ ?

ಚಿಕ್ಕ ಮಕ್ಕಳು ರೊಕ್ಕ ಬೇಕೆಂದು ಕೇಳಿದಾಗ ಕೆಲ ತಂದೆ-ತಾಯಿಗಳು ಅವರನ್ನು ಗದರಿಸಿದರೆ ಇನ್ನು ಕೆಲವರು ಕೇಳಿದಾಗೆಲ್ಲ ಕೊಡುತ್ತಾರೆ. ಇವೆರಡೂ ಸರಿಯಲ್ಲ. ಬೆದರಿಕೆ ಹಾಕುವದರಿಂದ ಮಕ್ಕಳು ಆಗಿನ ಮಟ್ಟಿಗೆ ಸುಮ್ಮನಾದರೂ ಅವರಲ್ಲಿ ಹಣದ ವಿಷಯವಾಗಿ ಅವಾಸ್ತವ ಕುತೂಹಲ ಆಸಕ್ತಿಗಳು ಕೆರಳಿ ಅದನ್ನು ಹೇಗಾದರೂ ಸಂಪಾದಿಸಬೇಕೆನ್ನುವ ಕುಬುದ್ಧಿ ಹುಟ್ಟಬಹುದಾಗಿದೆ. ಅತಿ ಪ್ರೀತಿಯಿಂದ ಕೇಳಿ ಕೇಳಿದಾಗೆಲ್ಲ ರೊಕ್ಕ ಕೊಡುವದರಿಂದ ಮಕ್ಕಳಲ್ಲಿ ಹಣದ ಮಹತ್ವದ ಅರಿವುಂಟಾಗದೆ ಹೋಗಿ ಕೈಗೆ ಬಂದದ್ದನ್ನೆಲ್ಲ ಖರ್ಚು ಮಾಡುವ ಚಟ ಅವರಿಗೆ ಬೀಳಬಹುದಾಗಿದೆ.

ಚಿಕ್ಕ ಮಕ್ಕಳಲ್ಲಿ ಹಣದ ಆಸಕ್ತಿ ಹೇಗೆ ಉಂಟಾಗುತ್ತದೆ, ಯಾವಾಗ ಉಂಟಾಗುತ್ತದೆ ಎನ್ನುವದನ್ನು ವಿಚಾರಿಸೋಣ. ಮಕ್ಕಳ ಮನೋವೃತ್ತಿಯನ್ನು ಅಭ್ಯಾಸ ಮಾಡಿರುವ ತಜ್ಞರು ಈ ರೀತಿ ಹೇಳುತ್ತಾರೆ:

ಇತರ ವಿಷಯಗಳಲ್ಲಿಯಂತೆ ಹಣದ ವಿಚಾರದಲ್ಲಿಯೂ ಮಕ್ಕಳ ಆಸಕ್ತಿ ಹುಟ್ಟುತ್ತದೆ. ಈ ಆಸಕ್ತಿ ಬಹು ಜೇಗ ಹುಟ್ಟುವದು. ಮಗು ಎರಡು ವರ್ಷದ್ದಾದಾಗ ಅದು ಕೆಲ ನಾಣ್ಯಗಳನ್ನು ಆಟಿಗೆಯ ಸಾಮಾನುಗಳೆಂದು ಭಾವಿಸಿಕೊಂಡು ಅವುಗಳೊಂದಿಗೆ ಆಡುವದರಲ್ಲಿಯೂ ಕಿಸೆಯಲ್ಲಿಟ್ಟುಕೊಳ್ಳುವದರಲ್ಲಿಯೂ ಆನಂದ ಪಡುತ್ತದೆ. ಆದರೆ ತಂದೆ-ತಾಯಿಗಳಿಗೆ ಇದು ಸೇರಿಬರುವದಿಲ್ಲ. ಮಗು ಹಣದಿಂದ ಅದಷ್ಟು ದೂರವಿದ್ದರೇನೇ ಒಳ್ಳೆಯದು ಎಂದವರು ತಿಳಿಯುತ್ತಾರೆ. ಹಣದ ಬಗ್ಗ ತಮ್ಮಲ್ಲಿರುವ ಭಾವನಾತ್ಮಕ ಒಲವು ಮಗುವಿನಲ್ಲಿಲ್ಲ, ಒಂದು ಕಲ್ಲು ಅಥವಾ ಹೂವು ಇಲ್ಲವೆ ಗೊಂಬೆಯಲ್ಲಿರುವಷ್ಟೇ, ಇರುವಂಥದೇ ಆಸಕ್ತಿಯನ್ನು ಮಗು ಹಣದ ಬಗ್ಗೂ ಹೊಂದಿರುತ್ತದೆ ಎನ್ನುವದನ್ನು ಅವರು ಮರೆತು ಬಿಡುತ್ತಾರೆ.

ಇದರಿಂದ ತಂದೆ-ತಾಯಿಗಳು ಮಗುವಿನ ಕೈಲಿರುವ ನಾಣ್ಯವನ್ನು ಕಸಿದುಕೊಳ್ಳುತ್ತಾರೆ. "ಬೇಡಪ್ಪ, ಅದು ಹೊಲಸು. ಮಕ್ಕಳು ಅದನ್ನು ಮುಟ್ಟಬಾರದು" ಎಂದಿತ್ಯಾದಿಯಾಗಿ ಹೇಳುತ್ತಾರೆ. ಕೇವಲ ಕುತೂಹಲದಿಂದ ನಾಣ್ಯವನ್ನು ಹಿಡಿದುಕೊಂಡಿದ್ದ ಮಗುವು ತಂದೆ-ತಾಯಿಗಳಲ್ಲಿಯ ಭಾವನಾತಿರೇಕವನ್ನು ಗುರುತಿಸಿಕೊಂಡು ಅದಕ್ಕೆ ತಕ್ಕ ಪ್ರತಿಕ್ರಿಯೆಯನ್ನು ತೋರತೊಡಗುತ್ತದೆ. ಅದು ಆ ನಾಣ್ಯದಲ್ಲಿಯ ತನ್ನ ಆಸಕ್ತಿಯನ್ನು ತ್ಯಜಿಸಿ ಸುಮ್ಮನಾಗಲೂ ಬಹುದು; ಇಲ್ಲವೆ ಅದು ತನಗೆ ಬೇಕೇಬೇಕೆಂದು ಹಟ ಹಿಡಿದು ಕೂಗಲು ಪ್ರಾರಂಭಿಸಲೂ ಬಹುದು.

ಹಿರಿಯರು ಇಷ್ಟೆಲ್ಲ ರಂಭಾಟ ಮಾಡದೆ ಹೋದರೆ! "ಅಯ್ಯೊ! ಮಕ್ಕಳ ಕೈಯಲ್ಲಿ ಹಣ ಕೊಡುತ್ತಾರೇನು ಎಲ್ಲಿಯಾದರೂ!" ಎಂದು ಕೂಗಿ ರೇಗಾಡುವದನ್ನು ನಿಲ್ಲಿಸಿದರೆ! ತಂದೆ ಕಿಸೆಯಲ್ಲಿ ರೊಕ್ಕ ಹಾಕುವದನ್ನು ಕಂಡ ಮಗು ತಾನೂ ಹಾಗೆ ಮಾಡಬೇಕೆಂದು ಬಯಸುತ್ತದೆಯೆ ವಿನಾ ಹಣದ ಬಗ್ಗೆ ಇನ್ನಾವ ವಿಚಾರವನ್ನೂ ಅದು ಇಟ್ಟುಕೊಂಡಿರುವದಿಲ್ಲ.

ಮಗು ಮೂರು ವರ್ಷದ್ದಾಗುವದರೊಳಗಾಗಿ ಬಹುಶಃ ತಂದೆಯೊಡನೆಯೋ ತಾಯಿಯೊಡನೆಯೋ ಅಂಗಡಿಗೆ ಹೋಗಿ ಬಂದಿರುತ್ತದೆ. ಹಣ ಕೊಟ್ಟು ಬೇಕಾದ ಬಗೆಯ ಸಾಮಾನನ್ನು ಪಡೆಯಬಹುದು ಎನ್ನುವ ಮಾತು ಅದರ ಗಮನಕ್ಕೆ ಬಂದಿರುತ್ತದೆ. ಮನೆಯಲ್ಲಿ ಅದು ಅಂಗಡಿಯ ಆಟವನ್ನಾಡಲು ಬಯಸಬಹುದು. ಆಗ ಅದಕ್ಕೆ ನಿಜವಾದ ಹಣದ ಬದಲು ಆಟಿಗೆಯ ಹಣ ಸಿಕ್ಕರೂ ಅಷ್ಟೆ ಸಮಾಧಾನವಾಗುತ್ತದೆ.

ನಾಲ್ಕು ವರ್ಷದ ಮಗುವಿಗೆ ಹಣದ ಬಗ್ಗೆ

ಇನ್ನೂ ತುಸು ಹೆಚ್ಚಿನ ತಿಳಿವಳಿಕೆಯುಂಟಾಗಿರುತ್ತದೆ. ಆಟಿಗೆಯ ಸಾಮಾನನ್ನು ಕೊಳ್ಳಲು ಅದು ಕೆಲವು ಆಣೆಗಳನ್ನು ಕೂಡಿಹಾಕಲೂ ಬಹುದು. ಆದರೆ ಆಟಿಗೆ ಕೈಗೆ ಬಂದಾಗ ಹಣ ಕೊಡಲು ಅದಕ್ಕೆ ಮನಸ್ಸಾಗಲಿಕ್ಕಿಲ್ಲ. ಹಣ ಮತ್ತು ಆಟಿಗೆ ಎರಡನ್ನೂ ಇಟ್ಟುಕೊಳ್ಳಲು ಸಾಧ್ಯವಿಲ್ಲ ಎನ್ನುವ ಮಾತನ್ನೂ ಅದು ಆಗ ಕಲಿಯುತ್ತದೆ.

ಐದು ವರ್ಷದ ಮಗು ಹಣದ ವಿಚಾರವಾಗಿ ತಂದೆ-ತಾಯಿಗಳಿಗೆ ವಿಶೇಷ ತೊಂದರೆ ಕೊಡುವದಿಲ್ಲ. ಅಂಗಡಿಗೆ ಹೋದಾಗ ತಂದೆ ಹಣ ಕೊಡುತ್ತಿರುವಾಗ ತಾನೇ ಅದನ್ನು ಅಂಗಡಿಯವನಿಗೆ ಕೊಡುತ್ತೇನೆಂದು ಅದು ಅನ್ನಬಹುದು, ಅಷ್ಟೇ.

ಆದರೆ ಮುಂದೆ ವರ್ಷಾರು ತಿಂಗಳು ಕಳೆಯುವಷ್ಟರಲ್ಲಿ ಮಗು ಹಣ ವೆಚ್ಚ ಮಾಡಲು ಅಪೇಕ್ಷೆಪಡುತ್ತದೆ. ಪೆಪ್ಪರಮಿಂಟನ್ನೊ ಬಿಸ್ಕೀಟನ್ನೊ ಕೊಳ್ಳಲು ಅದು ತವಕಿಸುತ್ತದೆ. ಈ ವಯಸ್ಸಿನಲ್ಲಿ ಕೈಗೆ ಸಿಕ್ಕಿದ್ದರಲ್ಲಿ ಉಳಿಸುವ ಮಾತೇ ಇರುವದಿಲ್ಲ. ಸಿಕ್ಕ ಹಣವನ್ನು ಸಿಕ್ಕಿದೊಡನೆಯೆ ಖರ್ಚು ಮಾಡುವ ಚಪಲ ಅದಕ್ಕಿರುತ್ತದೆ. ಹಣವನ್ನು ಜಾಗ್ರತೆಯಾಗಿಟ್ಟುಕೊಳ್ಳಬೇಕಾಗುತ್ತದೆ ಎನ್ನುವದನ್ನೂ ಅದು ಯೋಚಿಸುವದಿಲ್ಲ. ಇತರ ಆಟಿಗೆಯ ವಸ್ತುಗಳಂತೆ ಅದನ್ನೂ ಎಲ್ಲಿ ಬೇಕಾದಲ್ಲಿ ಚಲ್ಲಿಕೊಡುತ್ತದೆ.

ಏಳು ವರ್ಷವಾದಾಗ ಶಾಲೆಯಲ್ಲಿ ಹೇಳಿಕೊಟ್ಟ ಲೆಕ್ಕದ ಪಾಠಗಳಿಂದ ಮಕ್ಕಳಿಗೆ ಹಣದ ಬಗ್ಗೆ ಹೆಚ್ಚಿನ ಜ್ಞಾನವುಂಟಾಗುತ್ತದೆ. ತಾವೂ ಸಂಪಾದಿಸಬೇಕು ಎಂಬ ವಿಚಾರವೂ ತಲೆಯಲ್ಲಿ ಬರುತ್ತದೆ.

ಎಂಟು ವರ್ಷದ ಮಕ್ಕಳು ತಂದೆ-ತಾಯಿಗಳಿಗೊಂದು ಸಮಸ್ಯೆಯಾದಂತಾಗುತ್ತಾರೆ. ಅವರಿಗೆ ಹಣದ ಹುಚ್ಚೇ ಹಿಡಿದಂತೆ ಕಾಣಿಸುತ್ತದೆ. ಹಣವನ್ನು ಕೂಡಿಡುವದರಲ್ಲಿ ಹೆಚ್ಚಿನ ಆಸ್ಥೆ ಕಂಡು ಬರುತ್ತದೆ. ಈ ವಯಸ್ಸಿನಲ್ಲಿ ಸಿಕ್ಕಾಬಟ್ಟೆ ಖರ್ಚು ಮಾಡುವದಕ್ಕಿಂತಲೂ ಬಹಳಷ್ಟು ಹಣ ಒಟ್ಟು ಹಾಕಬೇಕು ಎನ್ನುವ ಚಪಲ ವಿಶೇಷವಾಗಿರುತ್ತದೆ. ಈ ಅವಸ್ಥೆಯಲ್ಲಿ ಅವರನ್ನು ಗದರಿಸುತ್ತ ಹೋದರೆ ತಾತ್ಪೂರ್ತಿಕವಾಗಿ ಪ್ರಯೋಜನವಾದಂತೆ ಕಂಡರೂ ಮಕ್ಕಳ ಈ ಪ್ರವೃತ್ತಿ ಅಳಿಸಿ ಹೋಗುವದಿಲ್ಲ. ಮಕ್ಕಳನ್ನು ಅವರಷ್ಟಕ್ಕೇ ಬಿಟ್ಟರೆ ಹಣದ ಬೆಲೆಯ ಅರಿವುಂಟಾಗುತ್ತಿರುವ ಅವು ತಮ್ಮಷ್ಟಕ್ಕೆ ತಾವೇ ಸರಿದಾರಿಗೆ ಬರುವ ಸಂಭವ ಹೆಚ್ಚಾಗಿರುತ್ತದೆ. ತಂದೆ ತಾಯಿಗಳು ಕಂಡೂ ಕಾಣದವರಂತಿದ್ದು ಅನಿಷ್ಟ ಪ್ರಸಂಗಗಳು ನಡೆಯದಂತೆ ಜಾಗರೂಕತೆ ವಹಿಸಿದರೆ ಸಾಕು.

ಒಂಬತ್ತು ವರ್ಷದ ಮಕ್ಕಳಿಗೆ ಹಣದ ಮಹತ್ವವೇ ಅನಿಸುವದಿಲ್ಲ. ಅವರು ಸಹಸಾ ಹಣ ಬೇಕೆಂದು ಕೇಳುವದೂ ಇಲ್ಲ. ಹಣ ಕೈಗೆ ಸಿಕ್ಕರೂ ಖರ್ಚು ಮಾಡಲು ಮರೆತುಬಿಡುತ್ತಾರೆ. ಈ ವಯಸ್ಸಿನ ಮಕ್ಕಳು ಕೈಗೆ ಸಿಕ್ಕಿದ್ದನ್ನೆಲ್ಲ ಸಂಗ್ರಹಿಸಿಟ್ಟುಕೊಳ್ಳುವ ಚಪಲದವರಾಗಿರುತ್ತಾರೆ. ಹಣವಿರಲಿ, ಮತ್ತಾವ ಸಾಮಾನೇ ಇರಲಿ, ಅದನ್ನು ನೋಡುವದು, ಮತ್ತೆ ಹಾಗೆಯೆ ಇಡುವದು ಇವುಗಳಲ್ಲಿಯೆ ಸಂತೋಷಪಟ್ಟುಕೊಳ್ಳುತ್ತಾರೆ.

ಇಷ್ಟರೊಳಗಾಗಿ ಮಗು ಹಣದೊಂದಿಗೆ ಆಟವಾಡಿರುತ್ತದೆ. ಅದರ ಉಪಯೋಗವನ್ನು ಕಂಡುಕೊಂಡಿರುತ್ತದೆ. ದುಂದು ವೆಚ್ಚ ಮಾಡಿರುತ್ತದೆ, ಕೂಡಿಟ್ಟುಕೊಂಡಿರುತ್ತದೆ. ಈಗ ಅದಕ್ಕೆ ಜೀವನದ ಇತರ ನೂರೆಂಟು ವಸ್ತುಗಳಲ್ಲಿ ಹಣವೂ ಒಂದು. ತಂದೆ – ತಾಯಿಗಳು ಹಣದ ಬಗ್ಗೆ ತೋರುವ ಪ್ರತಿಕ್ರಿಯೆಯನ್ನೆ ಮಗುವಿನ ಪ್ರತಿಕ್ರಿಯೆಯೂ ಅವಲಂಬಿಸಿರುತ್ತದೆ.

**ಕೇಳಿರಿ, ನೋಡಿರಿ, ಬೇಕಾದಷ್ಟು ವಿಚಾರ ಮಾಡಿರಿ. ಆದರೆ ಬಹಳ ಯೋಚಿಸಿ ಬೇಕಷ್ಟೇ ಮಾತಾಡಿರಿ.**

—ನಾರಾ.

# ಮದ್ದೂರಾಯನ ಮೇಜವಾನಿ

**ಇಂಥ ಅನುಭವ ನಿಮಗೆಂದಾದರೂ ಬಂದಿದೆಯೆ ?**

ಮದ್ದೂರಾಯನತಂಗಿಗೆ ಮದುವೆ ಗೊತ್ತಾಗಿ ಅವನು ರಜಾ ಕೇಳಿದಾಗಲೇ ಅವನಿಂದ ಮದುವೆಯ ಮೇಜವಾನಿ ನಡೆಯತಕ್ಕದ್ದೆಂಬ ಕರಾರಿಗೆ ಒಪ್ಪಿಗೆ ಗಿಟ್ಟಿಸಿದ್ದೆವು. ಅಂತೆಯೇ ಮದುವೆಗೆ ಎರಡು ದಿನ ಹಿಂದೆ ನಾನು ಮಧ್ಯಾಹ್ನ ಮನೆಗೆ ಹೋದಾಗ ಮದ್ದೂರಾಯರು ಪತ್ನೀಸಮೇತವಾಗಿ ಮನೆಗೆ ಬಂದು ಔತಣಕೊಟ್ಟು ಹೋಗಿದ್ದರೆಂದು ನಮ್ಮ ಶ್ರೀಮತಿಯವರ ವರದಿ ಕೇಳಿ ನನಗೆ ಆಶ್ಚರ್ಯವಾಗಲಿಲ್ಲ. "ನಾಳೆ ದೇವರೂಟ ಅಂತೆ. ನೀವು ಹುಡುಗರು ಎಲ್ಲಾರೂ ಊಟಕ್ಕೆ ಬರಬೇಕು ಅಂತ ಔತಣ ಕೊಟ್ಟಿದ್ದಾರೆ" ಎಂದು ಶ್ರೀಮತಿಯವರು ಹೇಳಿದಾಗ, "ಸರಿ, ನಾಳೆ ನಿನಗೆ ಒಪ್ಪೊತ್ತಿನ ಅಡಿಗೆ ಕಾಟ ತಪ್ಪಿತು" ಎಂದು ನಾನು ಚೇಷ್ಟೆ ಮಾಡಿದೆ.

ಮರುದಿನ ಮಧ್ಯಾಹ್ನ ೧೨ ಗಂಟೆಯೊಳಗೇ ನಾನು ಶ್ರೀಮತಿಯವರನ್ನೂ ಮಕ್ಕಳನ್ನೂ ಟಾಂಗಾದಲ್ಲಿ ಕರೆದುಕೊಂಡು ಮದ್ದೂರಾಯನ ಮನೆಯಲ್ಲಿಳಿದೆ. ಬಾಗಿಲಲ್ಲೇ ನಿಂತಿದ್ದ ಮದ್ದೂರಾಯ, "ಯಾಕಪಾ, ಅವರಿಗೇನು ಮನೆ ಸಿಕ್ಕಲಿಕ್ಕಿಲ್ಲಂತ ನೀನೇ ಕರಕೊಂಡು ಬಂದಿಯೇನು ?" ಎಂದದ್ದು ಕೇಳಿ ತುಸು ವಿಚಿತ್ರವೆನಿಸಿತು. ಆದರೂ "ಏನಾದರೂ ಸೇವ ಹೇಳಿ ಬರಲೇಬೇಕಲ್ಲ" ಎಂದು ಮಾತಿಗೆ ಮಾತು ಹಾರಿಸಿದೆ. ಎಲ್ಲರೂ ಒಳಗೆ ಹೋದೆವು. ನನ್ನ ಶ್ರೀಮತಿ ಮಹಿಳಾಮಹಾಸಾಗರದಲ್ಲಿ ಕರಗಿಹೋದಳು.

ನಾನು ಒಂದು ಬದಿಗೆ ಕುರ್ಚಿ ಹಿಡಿದು ಕುಳಿತು ಕಾಯತೊಡಗಿದೆ. ಎದುರಿಗಿನ ಗಡಿಯಾರ ಒಂದೊಂದಾಗಿ ನಿಮಿಷಗಳನ್ನು ಲೆಕ್ಕಿಸುತ್ತಿತ್ತು. ೧೨–೩೦ ಹೊಡೆದಾಗ ನನಗೆ ವಾತಾವರಣ ವಿಚಿತ್ರವೆನಿಸಲಾರಂಭಿಸಿತು. ಇನ್ನೂ ಊಟದ ಸುಳಿವೇ ಇಲ್ಲ. ೨೦ ನಿಮಿಷ ತಡವೆಂದು ಸ್ಟೇಶನ್ ಮಾಸ್ತರರು ಥಾಳಾಗಿ ಬರೆದು ಹಚ್ಚಿದ್ದರೂ ೨೦೦ ನಿಮಿಷ ತಡಮಾಡಿ ಬರುವ ನಮ್ಮ ಗಾಡಿಗಳಿಗೂ ನಮ್ಮ ಜನರ ಭೋಜನದ ಆಮಂತ್ರಣಗಳಿಗೂ ಏನೂ ಅಂತರವಿಲ್ಲ ಎಂದು ಮನಸಿನಲ್ಲೇ ಟೀಕಿಸಿದೆ.

ಆಗ ಒಮ್ಮೆಲೇ ನನಗೆ ಹೊಳೆಯಿತು : ಮದುವೆ ಮನೆಯ ಗಂಡಸರ ಹೊರತು ನನ್ನನ್ನು ಬಿಟ್ಟರೆ ಬೇರಾವ ಆಮಂತ್ರಿತ ಸದ್ಗೃಹಸ್ಥರೂ ಬಂದಿಲ್ಲ ಎಂಬ ಮಾತು. ನಮ್ಮ ಆಫೀಸಿನ ಸಹೋದ್ಯೋಗಿಗಳ ಹೆಂಡಂದಿರು-ಮಕ್ಕಳೆಲ್ಲ ಬಿಜಯಂಗೈದು ಸಡಗರದಿಂದ ಓಡಾಡುತ್ತಿದ್ದರೂ ನಮ್ಮ ಸಹೋದ್ಯೋಗಿಗಳೊಬ್ಬರೂ ಯಾಕಿನ್ನೂ ಚಿತ್ತೈಸಿಲ್ಲ? ಕದೀಮರು !—ಎಂದುಕೊಂಡೆ. ಹೇಳಿ ಕೇಳಿ ಮದ್ದುರಾಯನ ಮೇಜವಾನಿ. ಎಂದೂ ಹೇಳಿದ ಹೊತ್ತಿಗೆ ಆಗುವಂತಿಲ್ಲ ಎಂದು ಅವರಿಗೆ ಗೊತ್ತೇ ಇದೆ. ತಾಯಿಯ ಹೊಟ್ಟೆಯಿಂದ ಹೊರಬರುವಾಗಲೇ ಒಂದು ಗಂಟೆ ತಡಮಾಡಿ ಗಜಕೇಸರಿ

ಯೋಗವನ್ನು ತಪ್ಪಿಸಿಕೊಂಡಿದ್ದನಂತೆ ಮಹಾ-ರಾಯ. ಅಂದಿನಿಂದ ಯಾವ ಕೆಲಸವನ್ನೂ ಅವನು ಹೊತ್ತು ತಪ್ಪಿಸದೆ ಮಾಡಿದವನಲ್ಲ.

"ಈ ಅಸಾಮಿಯನ್ನು ಏನೆಂದು ಆರೋಪಿಸಿದರೂ ಸಮಯಸಾಧಕನೆಂದು ಆರೋಪಿಸಲು ಖಂಡಿತ ಸಾಧ್ಯವಿಲ್ಲ" ಎಂದು ಮನಸಿನಲ್ಲೇ ನಕ್ಕೆ. ನನಗೆ ಇಷ್ಟು ದೂರಾಲೋಚನೆ ಇಲ್ಲದೆ ಹೋಯಿತಲ್ಲ—ಹೆಂಡತಿಯ ಮಾತು ಕೇಳಿದ್ದಕ್ಕೆ ತಕ್ಕ ಶಿಕ್ಷೆ ಎಂದು ನನ್ನನ್ನೇ ಶಪಿಸಿಕೊಂಡೆ.

ಗಡಿಯಾರ ಒಂದೇ ಸಮನೆ ನಿಮಿಷಗಳನ್ನು ನೂಕುತ್ತಿತ್ತು. ನನ್ನ ಏಕಾಂತ ನಿಮಿಷನಿಮಿಷಕ್ಕೆ ಹೆಚ್ಚು ಹಿಂಸೆ ಕೊಡುತ್ತಿತ್ತು. ಮಧ್ಯಾಹ್ನದ ಮೇಜವಾನಿಯ ಪೂರ್ವನಿರೀಕ್ಷೆಯಿಂದ ಬೆಳಗಿನ ಫಳಾರ ಚಹಾಮಾತ್ರದಿಂದ ಸಾಂಗವಾಗಿದ್ದುದರಿಂದ ಹೊಟ್ಟೆ ಮಾತನಾಡತೊಡಗಿತು. ಅಷ್ಟರಲ್ಲಿ ಮುದ್ದೂರಾಯ ಮತ್ತೊಮ್ಮೆ ಸುಳಿದು, "ಏನಯ್ಯಾ, ಇನ್ನೂ ಕೂತಿದ್ದೀ. ಊಟಕ್ಕೆ ತಡ ಇದೆ. ಚಿಂತೆ ಮಾಡಬೇಡ. ಊಟ ಮುಗಿದ ತತ್‌ಕ್ಷಣ ನಿಮ್ಮ ಅವರನ್ನ ಟಾಂಗಾದಲ್ಲೇ ಕಳಿಸಿ ಕೊಡುವಂಥವನಾಗುತ್ತೇನೆ" ಎಂದು ಹೇಳಹೇಳುತ್ತ ಮಾಯವಾಗಿ ಬಿಟ್ಟ.

ನನಗೀಗ ನಿಜಕ್ಕೂ ದಿಗಿಲಾಯಿತು. ಈ ಪ್ರಾಣಿ ಹೀಗೇಕೆ ಮಾತಾಡುತ್ತಾನೆ? ನನ್ನ ಊಟದ ಪ್ರಸ್ತಾಪವನ್ನೇ ಎತ್ತಲೊಲ್ಲ? ಏಪ್ರಿಲ್ ೧ನೇ ತಾರೀಕೇನೂ ಅಲ್ಲ ಎಂದು ಕ್ಯಾಲೆಂಡರ್ ನೋಡಿ ಖಾತ್ರಿ ಮಾಡಿಕೊಂಡೆ. ಮೆಲ್ಲನೆ ಒಂದು ಭೀಕರ ಸಂಭವ ನನ್ನ ಮುಂದೆ ಪ್ರತ್ಯಕ್ಷವಾಯಿತು. ನನಗೆ ಇಂದಿನ ಊಟಕ್ಕೆ ಆಮಂತ್ರಣ ಕೊಟ್ಟಿರಲಿಕ್ಕಿಲ್ಲವೆ? ಗಂಡಸರಾರಿಗೂ ಇಂದು ಆಮಂತ್ರಣ ಇಲ್ಲವೇ? ಅಂತೆಯೇ ನಮ್ಮ ಆಫೀಸಿನ ಮಿತ್ರರಾರೂ ಬಂದಿಲ್ಲವೆ? "ಎಲ್ಲರೂ ಬರಬೇಕಂತೆ" ಎಂದರೆ ಆಮಂತ್ರಣಕಾಲದಲ್ಲಿ ಮನೆಯಲ್ಲಿಲ್ಲದ ನನ್ನ ಹೊರತು ಎಂದು ಅರ್ಥವಿರಬಹುದೆ?

"ಛೇ ಇರಲಿಕ್ಕಿಲ್ಲ" ಎಂದು ಆಮಂತ್ರಣಾಭಾವದ ಭಯದಿಂದ ಮತ್ತಷ್ಟು ಚುರುಗುಟ್ಟುತ್ತಿದ್ದ ಹೊಟ್ಟೆಗೆ ಸಮಾಧಾನ ಹೇಳಿಕೊಂಡೆ. ನಾನು ಮುದ್ದೂರಾಯನ ಖಾಸ ಮಿತ್ರ. ಉಳಿದವರಿಗೆ ಆಮಂತ್ರಣವಿಲ್ಲದಿದ್ದರೂ ನನಗೊಬ್ಬನಿಗೆ ಕೊಟ್ಟ ಕಾರಣ ಇದೇ. ಆದರೆ "ಇನ್ನೂ ಕೂತಿದ್ದೀಯಲ್ಲ" ಎಂದು ಯಾಕೆ ಕೇಳಿದ? ಬರಿ ಚೇಷ್ಟೆಗೆ ಇರಬೇಕು. ಹೀಗೆ ಎಂದೂ ಒಬ್ಬನೇ ಬಹಳ ಹೊತ್ತು ಕೂಡ್ರುವ ಸ್ವಭಾವ ನನ್ನದಲ್ಲ-ಅದಕ್ಕೇ ಹೇಳಿರಬೇಕು.

ಗಂಟೆ ಎರಡು ಹೊಡೆಯಿತು. ಹೊಟ್ಟೆ ಭಯಂಕರ ಕೋಲಾಹಲ ಎಬ್ಬಿಸುತ್ತಿತ್ತು. ಅಷ್ಟರಲ್ಲಿ ಅತ್ತ ಸುಳಿದ ಮುದ್ದೂರಾಯನ ತಮ್ಮನನ್ನು ಕರೆದೆ. "ಯಾಕೋ, ಇನ್ನೂ ಯಾರೂ ಕಾಣಿಸಲೊಲ್ಲರಲ್ಲ? ನಿನ್ನ ಅಣ್ಣ ಯಾರ್ಯಾರಿಗೆ ಊಟಕ್ಕೆ ಹೇಳಿದ್ದಾನೆ? ಊಟ ಇನ್ನೂ ತಡ ಏನು?" ಎಂದು ಒಂದೇ ಉಸಿರಿನಲ್ಲಿ ಪ್ರಶ್ನೆಗಳನ್ನು ಕೇಳಿದೆ.

ಅವನ ಉತ್ತರ ನನ್ನ ಜಂಘಾಬಲವನ್ನೇ ಉಡುಗಿಸಿತು. "ಇಲ್ರಿ, ಇವೊತ್ತು ಗಂಡಸರು ಯಾರೂ ಬರೂದಿಲ್ರಿ. ಹೆಂಗಸರು ಹುಡುಗರಿಗೆ ಮಾತ್ರ ಇವೊತ್ತು ಔತಣಾ ಕೊಟ್ಟಾರ್ರಿ."

ನಾನು ದಿಙ್ಮೂಢನಾದೆ. ನಾನು ಅನಾಹೂತ ಅತಿಥಿಯೆಂಬುದು ನಿಸ್ಸಂದಿಗ್ಧವಾಗಿಹೋಯಿತು. ಮುದ್ದೂರಾಯನ ರಹಸ್ಯದಂತೆ ಕಾಣುತ್ತಿದ್ದ ಎಲ್ಲ ಮಾತುಗಳೂ ಈಗ ಸೂರ್ಯಪ್ರಕಾಶದಷ್ಟು ಸ್ಪಷ್ಟವಾಗಿಬಿಟ್ಟವು. ಆದರೆ ಮುಂದೇನು? ಪಾಪಿ ಹೊಟ್ಟೆಗೆ ಏನು ಉತ್ತರ ಹೇಳಲಿ? ಎಷ್ಟಾದರೂ ಮುದ್ದೂರಾಯ ನನಗೆ ಗಳಸ್ಯ ಕಂಠಸ್ಯ ಮಿತ್ರ. ಎಲೆ ಬಡಿಸುವಾಗ ನಾನು ಇದೇ ಸ್ಥಾನದಲ್ಲಿ ಕುಳಿತಿದ್ದರೆ ಉಪಚಾರಕ್ಕಾದರೂ "ಊಟಕ್ಕೇಳು" ಅನ್ನದಿರುವನೇ? ಏನಾದರೂ ದೇಶಾವರಿ ಉತ್ತರ ಹೇಳಿ ಊಟ ಹೊಡೆದುಬಿಟ್ಟರಾಯಿತು. ಒಳಗಿಂದ ಈಗ ಬರತೊಡಗಿದ್ದ ಪಕ್ವಾ-ನ್ನಗಳ ಗಮಗಮ ನನ್ನ ಈ ಯೋಚನೆಗೆ ಪುಷ್ಟಿ ಕೊಡುತ್ತಿತ್ತು.

ಆದರೆ ಮರುಕ್ಷಣದಲ್ಲಿಯೇ ಆಮಂತ್ರಣರಹಿತವಾಗಿ ಊಟಕ್ಕೆ ಬಂದೆನಲ್ಲ ಎಂದು ಕಿಂಚಿತ್ ನಾಚಿಕೆಯಾಯಿತು. ಉಳಿದ ಗೆಳೆಯರಿಗಿಲ್ಲದ

ಮೇಜವಾನಿಯನ್ನು ನಾನು ದಕ್ಕಿಸಿಕೊಂಡದ್ದು ಗೊತ್ತಾದರೆ ನಾಳೆ ಅವರು ನಾಲ್ಕು ಪಟ್ಟು ಕಕ್ಕಿಸಿಬಿಟ್ಟಾರು—ಎಂದೂ ಭಯವಾಯಿತು. ಮನಕ್ಕಂಜದಿದ್ದರೂ ಜನಕ್ಕಂಜಬೇಕಲ್ಲ. ಇನ್ನೊಂದು ಸಂಗತಿಯೂ ನನ್ನ ಮನ ತಿರುಗಲು ಕಾರಣವಾಯಿತು. ನಾನು ಊಟ ಮಾಡಿಯೇ ಬಂದಿದ್ದೇನೆಂದುಕೊಂಡು ಮದ್ದುರಾಯ ಕರೆಯದೆ ಇದ್ದುಬಿಟ್ಟರೇನು ಗತಿ?

ಈ ಅಂಜಿಕೆ ನನ್ನ ಮನವನ್ನು ನಿರ್ಧರಿಸಿತು. ನಾನು ಎದ್ದೆ. ಅತ್ತಿತ್ತ ನೋಡಿದೆ. ಪುಣ್ಯಕ್ಕೆ ಯಾರ ಗಮನವೂ ಇತ್ತ ಇದ್ದಿಲ್ಲ. ಹೊರನುಸುಳಿ ರಣ ಬಿಸಿಲಲ್ಲಿ ಪೇಟೆಯತ್ತ ಸಾಗಿದೆ. ಹೊಟ್ಟೆಯಲ್ಲಿ ಮಹಾಭಾರತ ಮಸಗುತ್ತಿತ್ತು. ಗಂಟೆ ಮೂರಕ್ಕೆ ಹತ್ತಿರವಾಗಿತ್ತು. ಯಾವ ಖಾನಾವಳಿಯಲ್ಲಿಯೂ ಗ್ರಾಸ ಸಿಗುವಹಾಗಿಲ್ಲ. ಎದುರಿಗೆ ಚಹದಂಗಡಿ ಬಂತು. ಜೇಬಿನಲ್ಲಿ ಕೈ ತುರುಕಿದರೆ ಅಲ್ಲಿ ವಾಡಿಕೆಯಂತೆ ವಿಜಯವಿಠ್ಠಲನ ಗುಡಿ.

ನನ್ನ ಚಹಾಮೃಗಗಳಾರಾದರೂ ಭೆಟ್ಟಿಯಾದಾರೇ ಎಂದು ಆಸೆಗಣ್ಣುಗಳನ್ನು ಸುತ್ತಲೂ ಹಾಯಿಸಿದೆ, ಬೀದಿ ನಿರ್ಜನ. ಬೆಳಿಗ್ಗೆ ಎದ್ದು ಯಾರ ಅವಲಕ್ಷಣ ಮುಖ ನೋಡಿದ್ದೆನೋ. ಆದರೂ ಆಶೆ ಬಿಡದೆ ನಾಲ್ಕು ಹೆಜ್ಜೆ ಮುಂದೆ ಹೋದರೆ ಯಾವುದಾದರೂ ಬೇಟೆ ಸಿಗಬಹುದೆಂದು ಮುಂದಡಿಯಿಟ್ಟೆ. ನಾಲ್ಕು ಬಿಟ್ಟು ನೂರಾನಾಲ್ವತ್ತು ಹೆಜ್ಜೆ ಹೋದರೂ ನರ-ಕೀಟವಿಲ್ಲ. ಹಸಿವೆಯಿಲ್ಲದಾಗ ಚಹಾ ಕುಡಿಯುತ್ತೀಯಾ ಎಂದು ಕೇಳುವ ಈ ಜನ ಇವೊತ್ತು ಯಾವ ಹಾಳು ಭಾವಿಯಲ್ಲಿ ಬಿದ್ದಿದ್ದಾರೋ? ಆದರೂ ನಾನು ಅದಮ್ಯ ಆಶಾವಾದಿ. ಮೆಲ್ಲನೆ ಮುಂದೆ ಸಾಗಿದೆ. ನನ್ನ ಕಾಲುಗಳು ತಾವಾಗಿಯೇ ಮನೆಯ ಕಡೆ ಹೊರಳಿದ್ದವೆಂದು ನನಗೆ ಮನೆಯ ಬಾಗಿಲ ಮುಂದೆ ನಿಂತಾಗಲೇ ಗೊತ್ತು.

ಒಳ್ಳೇದೇ ಆಯಿತು. ಒಳಹೊಕ್ಕು ಇದ್ದ ಬಿದ್ದ ಹಿಟ್ಟು ಬೆಲ್ಲ ಕಲಸಿ ಹೊಟ್ಟೆಯ ದೆವ್ವವನ್ನು ಸಮಾಧಾನಪಡಿಸುವೆನೆಂದುಕೊಳ್ಳುವಷ್ಟರಲ್ಲಿ ನನ್ನ ಕೈಯಲ್ಲಿ ಕೀಲಿಕೈ ಇದ್ದಿಲ್ಲ ಎಂಬ ಅಪ್ರಿಯ ಸತ್ಯ ನನ್ನ ಲಕ್ಷ್ಯಕ್ಕೆಬಂತು. ಹೊರಡುವಾಗ ಕೀಲಿ ಹಾಕಿದವಳು ನನ್ನ ಶ್ರೀಮತಿ. ಅದು ಅವಳ ಚೀಲದಲ್ಲೇ ಮಲಗಿತ್ತು.

ಒಮ್ಮೆಲೇ ನನಗೆ ರಣರುದ್ರ ಕೋಪ ಉಕ್ಕೇರಿತು. ಬಾಗಿಲನ್ನು ಒದ್ದು ಒಡೆದುಬಿಡಲೇ ಅನಿಸಿತು. ಭಂಡ ಮದ್ದೂರಾಯ! ಮೂರ್ಖ ಹೆಂಡತಿ! ಸಮಯಕ್ಕೆ ಬಾರದ ಚಹಾಮೃಗಗಳು! ನನ್ನ ಆಫೀಸಿನ ಮಿತ್ರರೆಲ್ಲ ಇಷ್ಟು ಹೊತ್ತಿನಲ್ಲಿ ಊಟ ಹೊಡೆದು ಆದಿತ್ಯವಾರದ ಸುಖ ನಿದ್ರೆಯಲ್ಲಿದ್ದಾರೆಂದು ನೆನೆದುಕೊಂಡಾಗಂತೂ ನನ್ನ ಕ್ರೋಧಕ್ಕೆ ಎಲ್ಲೆಯೇ ಉಳಿಯಲಿಲ್ಲ. ಆಮಂತ್ರಣವನ್ನು ಸರಿಯಾಗಿ ಕೇಳಿಕೊಳ್ಳದಿದ್ದ ಹೆಂಡತಿಯ ಅಪರಾಧ ಅಕ್ಷಮ್ಯವಾಗಿ ತೋರಿತು. ಅವಳಿಗೇನು? ಇಷ್ಟು ಹೊತ್ತಿಗೆ ಊಟ ಹೊಡೆಯುತ್ತಿರಬೇಕು! ಯಾರಿಗೆ ಯಾರಿಲ್ಲ ಎರವಿನ ಸಂಸಾರ! ಹೆಂಡತಿಯ ಕಾಟಕ್ಕೆ ಪುರಂದರದಾಸರು ತಾಳ ತಂಬೂರಿ ಹಿಡಿದರಂತೆ. ನಾನೂ ಹಾಗೆ ಮಾಡಿಬಿಡಲೇ! ಹಾಳು ಸಂಸಾರ! ಬರಲಿ ಅವಳು! ಮೂರು ದಿನ ಊಟ ಬಿಟ್ಟುಬಿಡುವೆ .....

ಅಷ್ಟರಲ್ಲಿ ನೆರೆಮನೆಯವರು ಹೊರಗೆ ಬಂದು, "ಯಾಕ್ರೀ ಊಟ ಮಾಡಿ ಬಂದಿರೇನು? ಒಬ್ಬರೇ ಬಂದಿರಲ್ಲ" ಎಂದಾಗ ನನಗೆ ಉದರವೈರಾಗ್ಯ ಚಿಂತನೆಯಿಂದ ಎಚ್ಚರವಾಯಿತು.

"ಹಿ ಹಿ ಹಿ" ಎಂದು ಒಣ ನಗೆ ನಕ್ಕು ಹೌದೆಂದು ಸೂಚಿಸಿದೆ. ಅವರೂ ಹೆಚ್ಚು ಕೆದಕದೆ, "ಹೆಣ್ಣು ಮಕ್ಕಳ ಊಟ ಇನ್ನೂ ಆಗಿಲ್ಲೇನು? ಇರಲಿ ಬಿಡ್ರಿ. ಇಲ್ಲೆ ಅನಕಾ ಕೂತೀರಂತೆ" ಎಂದು ಕರೆದರು.

ಊಟವಿಲ್ಲದಿದ್ದರೆ ಇಲ್ಲ, ನೆರಳಾದರೂ ಸಿಕ್ಕಿತಲ್ಲ ಎಂದು ನಾನು ಒಳಹೊಕ್ಕೆ. ಅವರ ಪ್ರಶ್ನೆಗಳಿಗೆ ಏನೇನು ಉತ್ತರ ಕೊಟ್ಟೆನೋ ದೇವರಿಗೇ ಗೊತ್ತು. ಹೊಟ್ಟೆಯಲ್ಲಿ ಒಂದೇ ಸವನೆ ತಾಂಡವ ನಡೆದಿತ್ತು. ನಾಲ್ಕು ಗಂಟೆಯ ಹೊತ್ತಿಗೆ ಅವರ ಯಜಮಾನರು ಎದ್ದರು. ಸ್ಟೌ ಹೊತ್ತಿಸಿ ಚಹಾ ಆಯಿತು. ಅಂದಿನಷ್ಟು ನನಗೆ ಎಂದೂ ಚಹಾ ರುಚಿಸಿರಲಿಲ್ಲ.

ಪುಸ್ತಕ ವಿಭಾಗ




# ಎಮ್ಮೆದೊಡ್ಡಿಯ ನರಭಕ್ಷಕ

ಮೂಲ:
ಕೆನೆತ್ ಆಂಡರ್ಸನ್

*

ಅನುವಾದ:
ಎಂ. ಎಸ್. ನಾಗರಾಜ್

ಕೆನೆತ್ ಆಂಡರ್‌ಸನ್ನರು ಕೆಲ ವರ್ಷಗಳ ಹಿಂದೆ ಕರ್ನಾಟಕ ಮತ್ತು ಸುತ್ತುಮುತ್ತಲ ಪ್ರದೇಶಗಳಲ್ಲಿ ಬೇಟೆಯಾಡಿದರು. ಅವರು ಒಂಭತ್ತು ನರಭಕ್ಷಕ ಹುಲಿ ಚಿರತೆಗಳನ್ನೂ ಒಂದು ಮದ್ದಾನೆಯನ್ನೂ ಹೊಡೆದಿದ್ದಾರೆ. ಇದರ ಮನೋರಂಜಕ ವರ್ಣನೆಯನ್ನು Nine Man Eaters and One Rogue ಎಂಬ ಅವರ ಪುಸ್ತಕದಲ್ಲಿ ಕಾಣಬಹುದು. ಇಲ್ಲಿ ಅದರ ಒಂದು ಅಧ್ಯಾಯದ ಅನುವಾದವಿದೆ.

ಮೂಲ ಪ್ರಕಾಶಕರು : ಜಾರ್ಜ್ ಅಲೆನ್ ಮತ್ತು ಅನ್‌ವಿನ್, ಲಂಡನ್

# ಎಮ್ಮೆದೊಡ್ಡಿಯ ನರಭಕ್ಷಕ

ಮೈಸೂರು ರಾಜ್ಯದ ಚಿಕ್ಕಮಗಳೂರು ಜಿಲ್ಲೆಯಲ್ಲಿ ಎಮ್ಮೆದೊಡ್ಡಿ ಒಂದು ಅಡವಿ ಪ್ರದೇಶ. ಬಾಬಾಬುಡನಗಿರಿಯ ಪರ್ವತ ಶ್ರೇಣಿಯ ಗುಡ್ಡಗಳು ಈ ಪ್ರದೇಶವನ್ನು ಸುತ್ತುವರಿದಿವೆ. ಈ ಪ್ರದೇಶದ ದಕ್ಷಿಣ ದಿಕ್ಕಿನ ಗಡಿಯಲ್ಲಿ 'ಮಡಕ' ಎಂಬ ಭವ್ಯ ಸರೋವರವಿದೆ. ಇದರಿಂದ ಹೊರಟ ಸಣ್ಣ ಪ್ರವಾಹವೊಂದು ಈಶಾನ್ಯ ದಿಕ್ಕಿನಲ್ಲಿ ಹತ್ತು ಮೈಲು ದೂರ ಸಾಗಿ ಬೀರೂರಿನ ಉತ್ತರಕ್ಕೆ ಮೂರು ಮೈಲು ದೂರದಲ್ಲಿರುವ ಒಂದು ಕೆರೆಯನ್ನು ಸೇರುತ್ತದೆ. ಈ ಪ್ರವಾಹಕ್ಕೆ ಸಮಾಂತರವಾಗಿ ಒಂದು ಇಕ್ಕಟ್ಟಾದ ಕಾಡು ದಾರಿಯಿದೆ.

ಮೃಗಬೇಟೆಗೆ ಇದೊಂದು ಅತ್ಯುತ್ತಮ ಸ್ಥಳ. ಬೀರೂರಿನಿಂದ ಅಸಂಖ್ಯಾತ ದನಕರುಗಳನ್ನು ಮೇಯಲು ಈ ಅಡವಿಗೇ ತರುತ್ತಾರೆ.

ಆದ್ದರಿಂದ ಇಲ್ಲಿ ಹುಲಿಗಳ ಸಂಖ್ಯೆ ಹೆಚ್ಚಿಗಿದೆ. ಅಡವಿಯಲ್ಲಿರುವ ಚಿಗರಿ, ಸಾರಂಗ, ಹಂದಿ ಮುಂತಾದ ಪ್ರಾಣಿಗಳ ಬೇಟೆಯನ್ನಾಡುವ ಉದ್ದೇಶದಿಂದ ಇಲ್ಲಿ ವಾಸಕ್ಕೆ ಬರುವ ಹುಲಿಗಳು ಮುಂದೆ ದನಕರುಗಳ ಬೇಟೆಯನ್ನಾರಂಭಿಸುವವು. ಏಕೆಂದರೆ ಅಡವಿಯ ಮೃಗಗಳನ್ನು ಕೊಲ್ಲುವದಕ್ಕಿಂತಲೂ ಈ ಸಾಧು ಪ್ರಾಣಿಗಳನ್ನು ಕೊಲ್ಲುವದು ಸುಲಭ. ದನಗಾಹಿಗಳು ಬಹು ನಿರ್ಲಕ್ಷ್ಯದಿಂದ ದನಗಳನ್ನು ಮೇಯಿಸುತ್ತಿರುವದೂ ಹುಲಿಗಳಿಗೆ ಅನುಕೂಲವೇ ಆಗಿದೆ. ಒಂದು ಒಳ್ಳೆಯ ಆಕಳು ಅಥವಾ ಎತ್ತನ್ನೊ, ಎಮ್ಮೆ ಅಥವಾ ಕೋಣವನ್ನೊ ಹುಲಿ ಮುರಿಯದ ದಿನವೇ ಇಲ್ಲವೆನ್ನಬಹುದು. ಚಿರತೆಗಳ ಬಾಯಿಗೆ ತುತ್ತಾಗುವ ಆಡುಗಳು, ಕರುಗಳು ಮತ್ತು ನಾಯಿಗಳಿಗೂ ಕಡಿಮೆಯಿಲ್ಲ. ಬೀರೂರಿನ ಸುತ್ತುಮುತ್ತು ಇದೊಂದು ಸಾಮಾನ್ಯ ವಿಷಯವೆನ್ನಿಸಿಬಿಟ್ಟಿದೆ.

ಆದರೆ ಹುಲಿಗಳಿಗಿಂತ ಚಿರತೆಗಳ ಸಂಖ್ಯೆ ಕಡಿಮೆಯಾಗಿದ್ದು ಅವು ನಗರದ ಹೊರವಲಯಕ್ಕೆ ಸಮೀಪವಾಗಿಯೆ ತಮ್ಮ ವಾಸಸ್ಥಾನವನ್ನು ಆರಿಸಿಕೊಳ್ಳುತ್ತವೆ. ಅಡವಿಯಲ್ಲಿ ಒಳ ಪ್ರದೇಶಕ್ಕೆ ಹೋದರೆ ತಾವೇ ಹುಲಿಗಳ ಬಾಯಿಗೆ ತುತ್ತಾಗುವ ಅಂಜಿಕೆಯಿರುವದರಿಂದ, ಚಿರತೆಗಳು ಅವಕ್ಕೆ ದೂರವಾಗಿಯೆ ಇರುತ್ತವೆ.

೧೯೪೬ ರ ಪ್ರಾರಂಭದಲ್ಲಿ ಪುಟ್ಟ ಗಂಡು ಹುಲಿಯೊಂದು ಈ ಪ್ರದೇಶದಲ್ಲಿ ಕಾಣಿಸಿಕೊಂಡಿತು. ಈ ಹುಲಿಗೆ ಅದರದೇ ಆದ ಕೆಲ ವಿಶಿಷ್ಟ ರೀತಿಗಳಿದ್ದವು. ಮೇಯಲು ಹೋದ ಹಿಂಡುಗಳು ಸಂಜೆ ತಿರುಗಿ ಬರುತ್ತಿದ್ದಾಗ ಬೀರೂರಿನ ಹೊರವಲಯದಲ್ಲಿ ಕಾದಿದ್ದು ಒಂದು ಕರುವನ್ನೊ ಆಡನ್ನೊ ಕೊಲ್ಲುವದರಿಂದ ಇದು ತನ್ನ ಕಾಯಕವನ್ನಾರಂಭಿಸಿತು. ಇದಾವುದೋ ಚಿರತೆಯ ಆಟವಿರಬೇಕು ಎಂದು ಜನ ಮೊದಲು ಭಾವಿಸಿದರು. ಆದರೆ ದೊಡ್ಡ ಕರುಗಳನ್ನು ಹಿಡಿದಾಗ ಅವುಗಳ ಕುತ್ತಿಗೆ ಮುರಿದಿರುವದು ಕಂಡುಬರುತ್ತಿದ್ದುದರಿಂದ ಜನರಿಗೆ ಸಂದೇಹವುಂಟಾಗಿತ್ತು. ಕುತ್ತಿಗೆ ಮುರಿದು ಕೊಲ್ಲುವದು ಹುಲಿಗಳ ವೈಶಿಷ್ಟ್ಯ. ಕೊನೆಗೆ ಒಬ್ಬ ದನಗಾಹಿ ಈ ಹುಲಿ ಒಂದು ಆಕಳನ್ನು ಮುರಿದು ಕೊಲ್ಲುವಾಗ ಪ್ರತ್ಯಕ್ಷ ಕಂಡಿದ್ದರಿಂದ ಈ ಸಂದೇಹನಿವಾರಣೆಯಾಯಿತು.

ಸ್ಥಳಿಕ ಹಾಗೂ ವಿದೇಶೀ ಶಿಕಾರಿಗಳ ಗುಂಡುಗಳಿಂದ ಅದು ಹೇಗೊ ತಪ್ಪಿಸಿಕೊಂಡು ಈ ಹುಲಿ ಬೆಳೆಯಿತು. ಅದರ ಚಾತುರ್ಯ, ಧೈರ್ಯಗಳೂ ದ್ವಿಗುಣಿತವಾದವು. ಹದಿನೆಂಟು ತಿಂಗಳ ಕಾಲದಲ್ಲಿ ಇದು ದನಗಾಹಿಗಳಿಗೆ ಯಮಸ್ವರೂಪವಾಗಿಬಿಟ್ಟಿತು. ವಾರಕ್ಕೆ ಎರಡು ಸಲ, ಕೆಲ ವೇಳೆ ಮೂರು ಸಲ ಈ ಹುಲಿ ದನವೊಂದನ್ನು ಕೊಲ್ಲುತ್ತಿತ್ತು. ಅದು ತನ್ನ ಭಕ್ಷ್ಯವನ್ನಾಗಿ ಆರಿಸಿ

ಕೊಳ್ಳುತ್ತಿದ್ದ ದನವೂ ಉತ್ತಮ ಜಾತಿಯದೇ ಇರುತ್ತಿತ್ತು.

೧೯೪೮ರ ಕೊನೆಯ-ಸುಮಾರಿಗೆ ನಾನು ನನ್ನ ಕೆಲ ಮಿತ್ರರೊಂದಿಗೆ ಎಮ್ಮೆದೊಡ್ಡಿಗೆ ಹೋದೆ. ಇಂಗ್ಲಂಡಿಗೆ ಸದ್ಯದಲ್ಲೆ ಮರಳಲಿದ್ದ ನನ್ನ ಗೆಳೆಯ ಆಲ್ಫಿ ರಾಬರ್ಟಸನ್ನನಿಗಾಗಿ ಒಂದು ದಿವ್ಯ ಬೇಟೆಯನ್ನು ಸಂಪಾದಿಸಿಕೊಡಬೇಕೆಂದು ನನ್ನ ಇಚ್ಛೆಯಿದ್ದಿತು. ಎಮ್ಮೆದೊಡ್ಡಿಯ ಈ ಹೊಸ ಪರಾಕ್ರಮಿ ಹುಲಿಯ ವಿಚಾರವನ್ನು ಹಲವಾರು ಸಲ ನಾನು ಕೇಳಿದ್ದೆ. ಬೀರೂರಿನಲ್ಲಿ ಈ ಹುಲಿ ಯಾವುದಾದರೂ ಬೇಟೆಯನ್ನು ಹಿಡಿಯುವ ವರೆಗೆ ನಾವು ತಳವೂರಿದರೆ ಅದನ್ನು ಬೇಟೆಯಾಡುವದೇನೂ ಕಠಿಣವಾಗದು ಎಂದು ನಾನು ಅಂದುಕೊಂಡಿದ್ದೆ.

ನಾವು ಬೆಂಗಳೂರಿನಿಂದ ಕಾರಿನಲ್ಲಿ ಹೊರಟೆವು. ಕಚೇರಿಯಿಂದ ಹೊರಬೀಳಲಿಕ್ಕೇ ತಡವಾದ್ದರಿಂದ ನಾವು ಕತ್ತಲಾದ ಮೇಲೆಯೆ ಹೊರಡುವಂತಾಯಿತು. ೧೩೪ ಮೈಲಿನ ದಾರಿಯಿತ್ತು. ರಸ್ತೆಗಳು ಚೆನ್ನಾಗಿರಲಿಲ್ಲ. ತಿಪಟೂರಿನ ಬಳಿ ನಮ್ಮ ಕಾರು ಅಪಘಾತಕ್ಕೀಡಾಯಿತು. ನಾವು ನಮ್ಮ ಮಿತ್ರನ ಕಾರಿನಲ್ಲಿ ಹೊರಟಿದ್ದೆವು. ಹಿಂದಿನ ಗಾಲಿ ಒಂದು ಕಲ್ಲಿನ ಮೇಲೇರಿ ಹೋದದ್ದರಿಂದ ಪೆಟ್ರೋಲ್ ಟ್ಯಾಂಕಿಗೆ ಒಂಬತ್ತು ಇಂಚುದ್ದದ ತೂತು ಬಿತ್ತು. ಪೆಟ್ರೋಲೆಲ್ಲ ಸೋರಿ ಹೋಗಿ ಕಾರು ನಿಂತಿತು.

ನಮ್ಮಲ್ಲಿ ಹೆಚ್ಚಿಗೆ ಪೆಟ್ರೋಲಿರಲಿಲ್ಲ. ನಮ್ಮಲ್ಲಿನ ಪ್ಯಾರಾಫಿನ್ ಎಣ್ಣೆಯ ಸಹಾಯದಿಂದ ಹಾಗೂಹೀಗೂ ತಿಪಟೂರು ಸೇರಿದೆವು. ಅಲ್ಲಿ ಪೆಟ್ರೋಲ್ ಟ್ಯಾಂಕನ್ನು ದುರಸ್ತಿ ಮಾಡಿಸಿಕೊಂಡೆವು. ನಮ್ಮ ದುರ್ದೈವದಿಂದ ಅಲ್ಲಿಯ ಪೆಟ್ರೋಲ್ ಅಂಗಡಿಯಲ್ಲಿ ಪೆಟ್ರೋಲು ಸಿಲ್ಕು ಇದ್ದಿಲ್ಲ. ಊರಲ್ಲಿದ್ದ ಲಾರಿಗಳ ಡ್ರೈವರರನ್ನೆಲ್ಲ ಎಬ್ಬಿಸಿದರೂ ಪ್ರಯೋಜನವಾಗಲಿಲ್ಲ. ಅವರೂ ತಮ್ಮಲ್ಲಿ ಪೆಟ್ರೋಲಿಲ್ಲವೆಂದರು.

ಆಗಲೇ ರಾತ್ರಿ ೩॥ ಗಂಟೆಯಾಗಿತ್ತು. ಜನರೆಲ್ಲ ನಿದ್ದೆ ಹೋಗಿದ್ದರು. ನಮಗೊದಗಿದ ಅನಿವಾರ್ಯ ಪರಿಸ್ಥಿತಿಯಿಂದಾಗಿ ನಮ್ಮ ವಿವೇಕವೂ ನಿದ್ದೆ ಮಾಡಿತು. ನಾವು ಬೀದಿಗಳನ್ನು ಸುತ್ತತೊಡಗಿದೆವು. ಒಂದು ಓಣಿಯಲ್ಲಿ ಒಂದು ಫೋರ್ಡ್ ಗಾಡಿ ನಿಂತಿತ್ತು. ಆಲ್ಫಿಯನ್ನು ಕಾವಲು ನಿಲ್ಲಲು ಹೇಳಿ ನಾನು ಸದ್ದು ಮಾಡದೆ ಕಾರಿನ ಬಾನೆಟ್ ತೆರೆದು ಇಂಜನ್ನಿನ ಹಿಂದಿದ್ದ ಪೆಟ್ರೋಲ ಟಾಕಿಯಲ್ಲಿ ಒಂದು ರಬ್ಬರ ನಳಿಕೆಯನ್ನು ಹಾಕಿ ಪೆಟ್ರೋಲನ್ನು ಎಳೆದುಕೊಂಡು ನನ್ನ ಹತ್ತಿರವಿದ್ದ ಚಿಕ್ಕ ಟಿನ್ನಿನ ಡಬ್ಬಿಗೆ ತುಂಬಿಕೊಂಡೆ. ಅದನ್ನು ನಮ್ಮಲ್ಲಿದ್ದ ಪ್ಯಾರಾಫಿನ್ ಎಣ್ಣೆಯಲ್ಲಿ ಕೂಡಿಸಿ ಅರಸೀಕೆರೆಯ ವರೆಗೆ ನಮ್ಮ ಕಾರು ಸಾಗುವಂತೆ ಮಾಡಿದೆವು. ಅರಸೀಕೆರೆಯಲ್ಲಿ ಪೆಟ್ರೋಲು ಸಿಕ್ಕಿತು.

ಈ ಗದ್ದಲದಿಂದ ನಾವು ಬೀರೂರನ್ನು ಮುಟ್ಟುವಾಗ ಬೆಳಗಾಗಿಹೋಗಿತ್ತು. ನಾವು ಊರಿನಲ್ಲಿ ಹಾಯ್ದು ಅಡವಿಯ ದಿಕ್ಕಿನಲ್ಲಿ ಎರಡು ಮೈಲು ದೂರ ಹೋದಾಗ ಒಂದು ಹೊಲದಲ್ಲಿ ನೂರಾರು ಹದ್ದುಗಳು ನೆರೆದಿರುವದನ್ನು ಕಂಡೆವು. ನನ್ನ ಮಿತ್ರ ಅವುಗಳ ಫೋಟೊ ತೆಗೆದ. ಹದ್ದುಗಳು ನೆರೆದ ಕಾರಣವನ್ನು ಶೋಧಿಸಲೆಂದು ನಾನು ಕೆಳಗಿಳಿದಾಗ ಚಿರತೆ ಕೊಂದುಹಾಕಿದ್ದ ಹೋರಿಯೊಂದು ನನ್ನ ಕಣ್ಣಿಗೆ ಬಿದ್ದಿತು.

ಹೋರಿಯನ್ನು ಕೊಂದ ರೀತಿಯನ್ನು ಗಮನಿಸಿದಾಗ ಅದು ಚಿರತೆಯದೇ ಆಟ ಎಂದು ನನಗೆ ಖಾತ್ರಿಯಾಯಿತು.

ಪ್ರಾರಂಭದಲ್ಲೆ ನಮ್ಮ ಅದೃಷ್ಟ ತೆರೆದದ್ದಕ್ಕಾಗಿ ನಮಗೆ ಆನಂದವಾಯಿತು. ಸುತ್ತಲಿನ ಪೊದೆಗಳಿಂದ ಎಲೆ-ಟೊಂಗೆಗಳನ್ನು ಮುರಿದು ತಂದು ಸತ್ತಿದ್ದ ಹೋರಿಯನ್ನು ಅದು ಹದ್ದುಗಳ ಕಣ್ಣಿಗೆ ಬೀಳದಂತೆ ಮುಚ್ಚಿದೆ. ಹೋರಿ ನಮಗೆ ಕಾಣಿಸುವಂತೆ, ಆದರೆ ನಾವು ಹೊರಗಿನವರಿಗೆ ಕಾಣದ ರೀತಿಯಲ್ಲಿ ಪೊದೆಯಲ್ಲೊಂದು ಸ್ಥಾನ ಮಾಡಿದೆ. ಬೇಟೆಯೊಂದು ಕೈಗೆ ಬೀಳುತ್ತದೆಂಬ ಆನಂದದ ಭರದಲ್ಲಿ ನಮಗೆ ಹಿಂದಿನ ರಾತ್ರಿ ಪಟ್ಟ ಪಾಡು ಮರೆತುಹೋಯಿತು. ಚಿರತೆ ಹೋರಿಯನ್ನು ತಿನ್ನಲು ಸಂಜೆ ಮತ್ತೆ ಮರಳಿದಾಗ

ಅದನ್ನು ಕೊಲ್ಲುತ್ತೇವೆ ಎನ್ನುವ ವಿಶ್ವಾಸ ನಮಗಿದ್ದಿತು.

ಬಳಿಕ ನಾವು ತುಸು ಮುಂದಕ್ಕೆ ಹೋಗಿ ಊಟಮಾಡಿ ನಿದ್ದೆ ಮಾಡಿದೆವು. ಸಂಜೆ ೫ ಗಂಟೆಯ ಸುಮಾರಿಗೆ ನಾವು ಮತ್ತೆ ಸತ್ತ ಹೋರಿಯಿದ್ದಲ್ಲಿಗೆ ಬಂದೆವು. ಎಲೆಗಳನ್ನು ಮುಚ್ಚಿದ್ದರಿಂದ ಹೋರಿ ಹದ್ದುಗಳ ಬಾಯಿಗೆ ಬೀಳದೆ ಸುರಕ್ಷಿತವಾಗಿ ಉಳಿದಿತ್ತು. ಬಂದೂಕು, ನೀರಿನ ಬಾಟ್ಲಿ, ಟಾರ್ಚು, ಕಂಬಳಿಗಳ ಸಹಿತ ಆಲ್ಫಿ ಪೊದೆಯಲ್ಲಿ ಅಡಗಿ ಕುಳಿತನು. ನಾನು ಕಾರನ್ನುಬೀರೂರಿಗೆ ತೆಗೆದುಕೊಂಡು ಹೋಗಬೇಕೆಂದು ಅದನ್ನು ಚಾಲೂ ಮಾಡುವಷ್ಟರಲ್ಲಿ ಒಬ್ಬ ದನಗಾಹಿ ತೇಕುತ್ತ ಓಡಿಬಂದು ಕೇವಲ ಅರ್ಧ ತಾಸಿನ ಹಿಂದೆ ಒಂದೇ ಒಂದು ಮೈಲಿಗಿಂತಲೂ ಕಡಿಮೆ ದೂರದಲ್ಲಿ ತನ್ನ ಹಿಂಡುವ ಆಕಳೊಂದನ್ನು ಹುಲಿ ಹಿಡಿಯಿತು ಎಂದು ಹೇಳಿದ.

ನಾನು ಆಲ್ಫಿಯನ್ನೇ ಕೇಳಿದೆ: ಖಂಡಿತವಾಗಿಯೂ ಕೈಗೆ ಸಿಗುವ ಚಿರತೆಯ ಬೇಟೆಯಾಡಲು ಅವನು ಬಯಸುತ್ತಾನೊ ಅಥವಾ ಸಿಗಬಹುದಾದ ಹುಲಿಯ ಬೇಟೆಯನ್ನಾಡಬಯಸುತ್ತಾನೊ ಎಂದು? ನನ್ನ ಮನಸ್ಸಿನಲ್ಲಿದ್ದದ್ದನ್ನೇ ಆತ ಹೇಳಿ ಹುಲಿಯ ಬೇಟೆಯೇ ಇರಲಿ ಎಂದ. ನಾವು ಮತ್ತೆ ನಮ್ಮ ಸಾಮಾನನ್ನೆಲ್ಲ ಕಾರಿನಲ್ಲಿ ಹೇರಿಕೊಂಡು ಹೊರಟೆವು. ಅರ್ಧ ಮೈಲು ದೂರ ಹೋದೊಡನೆ ದನಗಾಹಿ ಕಾರು ನಿಲ್ಲಿಸಲು ಹೇಳಿದ. ಸಾಮಾನನ್ನಿಳಿಸಿಕೊಂಡು ಅವನ ಹಿಂದೆಯೆ ಅಡವಿಯನ್ನು ಹೊಕ್ಕೆವು.

ನಾವೇನೂ ಬಹಳ ನಡೆಯಬೇಕಾಗಲಿಲ್ಲ. ಮೂರು ಫರ್ಲಾಂಗು ಹೋಗಿದ್ದೆವೊ ಇಲ್ಲವೋ ಅಷ್ಟರಲ್ಲಿ ಸತ್ತು ಬಿದ್ದಿದ್ದ ಕರಿ ಆಕಳೊಂದು ಕಣ್ಣಿಗೆ ಬಿತ್ತು. ಆಕಳಿನ ಕುತ್ತಿಗೆ ಮುರಿದು ಹೋಗಿತ್ತು ಅದರ ಮೂಗಿನಿಂದ ಇನ್ನೂ ನೊರೆಯ ಗುಳ್ಳೆಗಳು ಹೊರಬೀಳುತ್ತಿದ್ದವು. ಆದರೆ ಹುಲಿ ಒಂದೇ ಒಂದು ತುತ್ತನ್ನು ಕೂಡ ತಿಂದಿರಲಿಲ್ಲ. ದನಗಾಹಿಯ ಕೂಗಿನಿಂದ ಗಾಬರಿಗೊಂಡೋ ಇಲ್ಲವೆ ಉಳಿದ ದನಗಳ ಕೂಗಿನಿಂದ ಗಡಿಬಿಡಿಗೊಂಡೋ ಹುಲಿ ಆಕಳನ್ನು ಬಿಟ್ಟು ಹೋಗಿತ್ತು.

ಸಂಜೆ ಆರು ಹೊಡೆದಿತ್ತು. ಕತ್ತಲೆ ನುಗ್ಗಿ ಬರತೊಡಗಿತ್ತು. ದುರ್ದೈವದಿಂದ ಇಲ್ಲಿ ಸಮೀಪದಲ್ಲಿ ಒಂದು ಗಿಡವೂ ಇರಲಿಲ್ಲ. ನಾವು ಅಡಗಿ ಕುಳಿತುಕೊಳ್ಳಲು ಒಂದು ಸ್ಥಳಕ್ಕಾಗಿ ಹುಡುಕಾಡಿದೆವು. ಅಂಥ ಸ್ಥಳವೇ ಗೋಚರಿಸಲಿಲ್ಲ. ಒಂದೇ, ಬೇಟೆಯ ಆಶೆ ಬಿಟ್ಟು ಹೊರಡಬೇಕು ಇಲ್ಲವೆ, ನೆಲದ ಮೇಲಿಂದಲೇ ಹುಲಿಗೆ ಗುಂಡು ಹಾಕಬೇಕು ಎನ್ನುವ ಪರಿಸ್ಥಿತಿ ಇತ್ತು.

ಈ ಬೇಟೆಯ ಸಂಧಿಯನ್ನು ಕಳೆದುಕೊಳ್ಳಲು ಆಲ್ಫಿ ಸಿದ್ಧನಿರಲಿಲ್ಲ. ಹೋಗುವ ವಿಚಾರವನ್ನು ಆತ ಕಿವಿಯಲ್ಲಿ ಹಾಕಿಕೊಳ್ಳಲಿಲ್ಲ. ಸುತ್ತಲಿನ ಗಿಡಗಂಟಿಗಳ ಟೊಂಗೆಗಳನ್ನು ನಾನು ದನಗಾಹಿಯ ಸಹಾಯದಿಂದ ಮುರಿದು ಒಂದು ಹೊಂಚನ್ನು ಮಾಡಿದೆ. ಆರೂವರೆ ಗಂಟೆಗೆ ನಾವೆಲ್ಲ ಆ ಮರೆಯ ಹಿಂದೆ ಕುಳಿತೆವು.

ಈಗ ಪೂರ್ಣ ಕತ್ತಲೆಯಾದಂತಾಗಿತ್ತು. ಮತ್ತೆ ೧೫ ನಿಮಿಷ ಕಳೆದಾಗ ಕೇವಲ ೨೫ ಗಜ ದೂರದಲ್ಲಿದ್ದ ಸತ್ತ ಆಕಳು ಕೂಡ ಕಣ್ಣಿಗೆ ಕಾಣದಂತಾಯಿತು. ಚಂದ್ರನಿಲ್ಲದಿದ್ದರೂ ಮಿನುಗುತ್ತಿದ್ದ ನಕ್ಷತ್ರಗಳ ಪ್ರಕಾಶದಲ್ಲಿ ನಮ್ಮ ಕಣ್ಣ ಮುಂದಿನ ವಸ್ತು ಕಾಣಿಸುತ್ತಿದ್ದರೂ ಆಕಳು ಸತ್ತುಬಿದ್ದಿದ್ದ ಸ್ಥಳ ದೃಷ್ಟಿಗೆ ಹೊರಗಾಗಿತ್ತು.

ಒಂದು ತಾಸು ಕಳೆಯಿತು. ಸುಮಾರು ಅರ್ಧ ಮೈಲಿನ ಮೇಲೆ ಒಂಟಿನರಿಯೊಂದು ಕೂಗಿದ್ದು ಕೇಳಿಸಿತು. ಒಂಟಿನರಿ ಹಾಗು ಅದರ ಕೂಗಿನ ವಿಚಾರವಾಗಿ ನಾನಾ ಬಗೆಯ ವ್ಯಾಖ್ಯೆಗಳನ್ನು ಹೇಳುತ್ತಾರೆ; ಬರೆದಿದ್ದಾರೆ. ಹಳ್ಳಿ-ನಗರಗಳ ಹೊರವಲಯದಲ್ಲಿ ನರಿಗಳು ಸಾಮಾನ್ಯವಾಗಿ ಹಿಂಡುಗಟ್ಟಿಕೊಂಡು ಅಡ್ಡಾಡುತ್ತವೆ. ರಾತ್ರಿಕಾಲದಲ್ಲಿ ಆಹಾರ ಸಂಪಾದನೆಗಾಗಿ ಅವು ಊರುಗಳನ್ನು ಪ್ರವೇಶಿಸುತ್ತವೆ. ಈ ಹಿಂಡಿನ ಕೂಗಿಗೂ ಒಂಟಿ ನರಿಯ ಕೂಗಿಗೂ ತುಂಬ

ವ್ಯತ್ಯಾಸವುಂಟು. ಒಂಟಿ ನರಿಯ ಬಗ್ಗೆ ಎರಡು ವಿಚಾರ ಹೇಳುತ್ತಾರೆ. ಒಂಟಿ ನರಿ ಒಂದು ಹುಲಿಯ ಅಥವಾ ಚಿರತೆಯ (ವಿಶೇಷತಃ ಹುಲಿಯ) ಜೊತೆಯಲ್ಲಿ ಅಡ್ಡಾಡುತ್ತ ತನ್ನ "ಬಾ-ಲೂ-ಆ! ಬಾ-ಪೋ‌ೀ-ಆ!" ಎಂಬ ಕೂಗಿನಿಂದ ಅದಕ್ಕೆ ಬೇಟೆಯಿರುವ ಸ್ಥಳವನ್ನು ಸೂಚಿಸುತ್ತದೆ; ಈ ಸೇವೆಗೆ ಪ್ರತಿಫಲವಾಗಿ ಹುಲಿರಾಯ ಬೇಟೆಯಾಡಿ ತಿಂದು ಮಿಕ್ಕಿದ್ದು ನರಿಯ ಪಾಲಿಗೆ ಬರುತ್ತದೆ ಎಂದು ಕೆಲವರ ಹೇಳಿಕೆ. ಇನ್ನೊಂದೆಂದರೆ ಈ ನರಿ ಯಾವುದಾದರೊಂದು ಮಾಂಸಾಹಾರಿ ಪ್ರಾಣಿಯ ಹಿಂದೆ ತಾನು ಸುರಕ್ಷಿತವಾಗಿರುವಷ್ಟು ದೂರದಲ್ಲಿದ್ದು ಹಿಂಬಾಲಿಸಿ ಆ ಪ್ರಾಣಿ ಕೊಂದು ತಿಂದು ಉಳಿಸಿದ್ದನ್ನು ತಿನ್ನುತ್ತದೆ. ಇದರಲ್ಲಿ ನಿಜವಾದದ್ದು ಯಾವದೇ ಆಗಿರಲಿ, ಒಂಟಿ ನರಿಯ ಕೂಗು ಸಮೀಪದಲ್ಲಿ ಹುಲಿಯಿದೆ ಎಂಬುದರ ಸೂಚನೆ ಎಂದು ನಾನು ಬಲ್ಲೆ. ಭಾರತದ ಅನೇಕ ಅಡವಿಗಳಲ್ಲಿ ಇದು ನನ್ನ ಅನುಭವಕ್ಕೆ ಬಂದಿದೆ.

ಈ ಒಂಟಿನರಿಯ ಕೂಗು ಆಕಳನ್ನು ಕೊಂದ ಹುಲಿ ಬರುತ್ತಿದೆಂದು ಪ್ರತ್ಯಕ್ಷ ಕಂಡಷ್ಟೇ ಖಂಡಿತವಾಗಿ ನಮಗೆ ತಿಳಿಸಿತು. ಹತ್ತು ಮಿನಿಟುಗಳು ಕಳೆದಿರಬಹುದು, ಅಷ್ಟರಲ್ಲಿ ಸತ್ತ ಹಸು ವಿನಾಚೆ ಹುಲಿಯ ಗರ್ಜನೆ ಕೇಳಿಸಿತು. ಹುಲಿ ಬಂದಿತ್ತು. ನಾನು ಮೆಲ್ಲನೆ ಆಲ್ಫಿಯ ಕಾಲನ್ನು ತಿವಿದೆ. ಆತ ಎಚ್ಚರವಾಗಿಯೆ ಇದ್ದ. ಸಮಯ ಕಳೆಯಿತು. ಏನನ್ನೊ ಎತ್ತಿಹಾಕಿ ದರ ದರ ಎಳೆದ ಸಪ್ಪಳ ಕೇಳಿಸಿತು.

ಆಲ್ಫಿ ಟಾರ್ಚಿನ ಗುಂಡಿ ಒತ್ತಿದ. ಪ್ರಖರ ಪ್ರಕಾಶ ಕಿರಣವೊಂದು ಬೆಳಗಿತು. ಆದರೆ ಆತ ಟಾರ್ಚು ಹಿಡಿದದಿಕ್ಕು ಸರಿಯಾಗಿರಲಿಲ್ಲ. ಬೆಳಕು ಹಸು ಬಿದ್ದಿದ್ದ ಸ್ಥಳಕ್ಕೆ ಬೀಳದೆ ತುಸು ಎಡಗಡೆಗೆ ಬಿತ್ತು. ಹುಲಿಗೆ ಇಷ್ಟೇ ಮುನ್ನೆಚ್ಚರಿಕೆ ಸಾಕಾಯಿತು. ಅದು ಗುರ್ ಗುರ್ ಎನ್ನುತ್ತ ಹಿಂದೆ ಮೊದೆಗಳ ಮರೆಗೆ ಜಿಗಿಯಿತು.

ನಾವು ಮತ್ತೂ ಒಂದು ತಾಸು ಅಲ್ಲಿಯೇ ಕುಳಿತೆವು. ಹುಲಿ ಇನ್ನು ಮರಳುವದಿಲ್ಲ ಎಂದು ಖಂಡಿತವಾಗಿದ್ದ ನನಗೆ ಇದು ವ್ಯರ್ಥ ಸಮಯಹರಣ ಎಂದು ಗೊತ್ತಿತ್ತು. ಒಂದು ಮೈಲಿಗಿಂತಲೂ ದೂರದಲ್ಲಿ ಕೂಗುತ್ತಿದ್ದ ಹುಲಿಯ ಗರ್ಜನೆ ನಮಗೆ ಮಂದವಾಗಿ ಕೇಳಿಬಂದು ಹುಲಿ ಪಾರಾಗಿ ಹೋದುದನ್ನು ತಿಳಿಸಿತು.

ಭಾರವಾದ ಹೃದಯದಿಂದ ನಾವು ಕಾರಿಗೆ ಹಿಂತಿರುಗಿದೆವು. ಆಲ್ಫಿ ಸ್ವಿಚ್‌ಕೀಯನ್ನು ಎಲ್ಲೋ ಇಟ್ಟಿದ್ದರಿಂದ ಅದನ್ನು ಹುಡುಕಲು ಶ್ರಮಪಡಬೇಕಾಯಿತು. ಅಷ್ಟರಲ್ಲಿ ಒಂದು ಬಸ್ಸು ಬಂತು. ಅದರ ಬೆಳಕಿನಲ್ಲಿ ಸ್ವಿಚ್‌ಕೀ ಸಿಕ್ಕಿತು. ನಾವು ಅದನ್ನು ಹಿಂಬಾಲಿಸಿ ಹೊರಟೆವು. ಚಿರತೆಯ ಬೇಟೆಗಾಗಿ ನಾವು ಮಾಡಿಕೊಂಡಿದ್ದ ಮರೆಯ ತಾಣವನ್ನು ಮುಟ್ಟಿದಾಗ ಲಾರಿಯ ದೀಪಗಳ ಬೆಳಕಿನಲ್ಲಿ ಹೋರಿಯನ್ನು ಹರಿದು ತಿನ್ನುತ್ತಿದ್ದ ಚಿರತೆಯ ಕಣ್ಣುಗಳು ಹೊಳೆಯುತ್ತಿರುವದನ್ನು ಕಂಡೆವು. ಬಸ್ಸಿನ ಡ್ರೈವರನೂ ಅವುಗಳನ್ನು ಕಂಡು ಲಾರಿಯನ್ನು ನಿಲ್ಲಿಸಿದನು. ಎದ್ದ ಧೂಳು ನಮ್ಮ ಮುಂದೆ ಮುಸುಕಿ ಏನೂ ಕಾಣದಂತೆ ಮಾಡಿತು.

ಆಲ್ಫಿ ಮತ್ತು ನಾನು ಕಾರಿನಿಂದ ಕೆಳಗಿಳಿದು ಬಸ್ಸನ್ನು ದಾಟಿ ಮುಂಬರಿದೆವು. ಚಿರತೆ ಓಡತೊಡಗಿತ್ತು. ಆಲ್ಫಿ ಅದಕ್ಕೆ ಗುರಿಯಿಟ್ಟು ಬಂದೂಕು ಹಾರಿಸಿದನು. ಚಿರತೆ "ಅರ್ರ್‌ಪರ್ರ್" ಎಂದು ಕೂಗುತ್ತ ಮೇಲಕ್ಕೊಮ್ಮೆ ಜಿಗಿದು ಮಿಂಚಿನ ವೇಗದಲ್ಲಿ ಪಲಾಯನ ಮಾಡಿತು.

ನಾವು ಮಾಡಿದ್ದು ತಪ್ಪು ಎಂದು ನಮಗೀಗ ಅರಿವಾಯಿತು. ಆಲ್ಫಿ ಮೊದಲು ತಯಾರಿಸಿದ್ದ ಮರೆಯ ಸ್ಥಳದಲ್ಲಿ ಕೂಡ್ರಬೇಕಾಗಿತ್ತು, ನಾನು ಕಾರಿನಲ್ಲಿ ಮುಂದಕ್ಕೆ ಹೋಗಬೇಕಾಗಿತ್ತು ಎಲ್ಲ ಶಾಂತವಾದ ಬಳಿಕ ತನ್ನ ಊಟ ಮುಗಿಸಲು ಚಿರತೆ ಖಂಡಿತವಾಗಿಯೂ ತಿರುಗಿ ಬಂದು ಆಲ್ಫಿಯ ಗುಂಡಿಗೆ ಸುಲಭ ತುತ್ತಾಗುತ್ತಿತ್ತು. ಈಗಲೋ, ಒಂದು ಚಿರತೆಯನ್ನು ಗಾಯಗೊಳಿಸಿ

ಅದು ಉಪದ್ರವಕಾರಿಯಾಗುವಂತೆ ಮಾಡಿದ್ದಷ್ಟೇ ನಮ್ಮ ಸಾಹಸಕ್ಕೆ ಪ್ರತಿಫಲವಾಗಿತ್ತು.

ಆದರೆ ಮಿಂಚಿದ ಮಾತಿಗೆ ಚಿಂತಿಸಿ ಫಲವೇನು? ನಾವು ಬೀರೂರಿಗೆ ಬಂದು ಟ್ರಾವಲರ್ಸ್ ಬಂಗ್ಲೆಯಲ್ಲಿ ತಂಗಿದೆವು. ಮರುದಿನ ಮುಂಜಾನೆ ಎದ್ದೊಡನೆಯೆ ನಾವು ಚಿರತೆಗೆ ಗುಂಡು ಹೊಡೆದ ಸ್ಥಳಕ್ಕೆ ಬಂದೆವು. ತುಸು ಹುಡುಕಿದಾಗ ರಕ್ತದ ಕಲೆಗಳು ಕಾಣಿಸಿದವು.

ಚಿರತೆಗೆ ಗುಂಡು ಬಡಿದಿತ್ತು ಎಂಬಲ್ಲಿ ಸಂಶಯವುಳಿಯಲಿಲ್ಲ. ರಕ್ತದ ಕಲೆ ಗದ್ದೆಯ ಆಚೆ ಕಂಡುಬಂದದ್ದಕ್ಕೊಂದು ಕಾರಣವಿತ್ತು. ಚಿರತೆಯ ಟೊಂಕಕ್ಕೆ ಗುಂಡು ಬಡಿದಿರಬೇಕು, ರಕ್ತ ಚರ್ಮದ ಮೇಲಿಂದ ಹರಿದು ನೆಲಕ್ಕೆ ಬೀಳಲು ತುಸು ಸಮಯ ಹಿಡಿದಿರಬೇಕು. ಆದ್ದರಿಂದಲೇ ರಕ್ತದ ಕಲೆ ನಮಗೆ ದೂರದಲ್ಲಿ ಕಾಣಿಸಿದ್ದು. ಅಲ್ಲಿಂದ ಮುಂದೆ ರಕ್ತ ಧಾರಾಳವಾಗಿ ಸೋರಿತ್ತು. ಚಿರತೆ ದಟ್ಟವಾದ ಕಂಟಿಗಳಲ್ಲಿ ಹಾಯ್ದು ಹೋಗಿತ್ತು. ನಾವು ಅಲ್ಲಿ ಮುಂಬರಿಯಬೇಕಾದರೆ ಮೊಣಕಾಲೂರಿ ಹರಿದೇ ಹೋಗಬೇಕಾಗಿತ್ತು.

ನನ್ನ ಬಂದೂಕನ್ನು ಮುಂದಿಟ್ಟುಕೊಂಡು ನಾನು ಮೊಣಕಾಲೂರಿ ಹರಿಯತೊಡಗಿದೆ. ಹಿಂದಿನಿಂದ ನನ್ನ ರಕ್ಷಣೆಗಾಗಿ ಆಲ್ಫಿ ಅದೇ ರೀತಿಯಲ್ಲಿ ಬರತೊಡಗಿದ. ನಾವು ಸುಮಾರು ೭೫ ಗಜ ಹೋಗಿರಬೇಕು, ಅಷ್ಟರಲ್ಲಿ ಆ ಚಿರತೆ ಒಮ್ಮಿಂದೊಮ್ಮೆ 'ಆಕ್ರಮಣ ಮಾಡಲು ಎದ್ದದ್ದು ತೋರಿತು,ಗುಂಡು ತಪ್ಪುವ ಪ್ರಶ್ನೆಯೇ ಇರಲಿಲ್ಲ, ಚಿರತೆ ಅಷ್ಟು ಸಮೀಪದಲ್ಲಿತ್ತು. ಕಣ್ಣು ರೆಪ್ಪೆ ಮುಚ್ಚಿ ತೆರೆಯುವಷ್ಟರಲ್ಲಿ ಗುಂಡು ಹಾರಿಸಿದೆ, ಗುಂಡು ಚಿರತೆಯ ತಲೆಬುರುಡೆಯನ್ನು ಭೇದಿಸಿತು. ಅದು ನನ್ನ ಎದುರಿನಲ್ಲಿ ಒಂದು ನಿಮಿಷ ಒದ್ದಾಡಿ ಪ್ರಾಣಬಿಟ್ಟಿತು.

ನಾವು ಬೀರೂರಿನಲ್ಲಿ ೧೦ ದಿನ ವಾಸ್ತವ್ಯ ಮಾಡಿದೆವು. ಏಳನೆಯ ದಿನ ಮಾತ್ರ ಎಮ್ಮೆದೊಡ್ಡಿ ಕಾಲುವೆಯಿಂದ ಆರು ಮೈಲು ದೂರದಲ್ಲಿ ಹುಲಿ ಬೇಟೆಯಾಡಿದ ಸುದ್ದಿ ಬಂತು. ಆ ಸುದ್ದಿ ಕೇಳಿ ನಾವು ನಿಮಿಷವೂ ತಡಮಾಡದೆ ಅಲ್ಲಿಗೆ ಹೋದೆವು. ಆದರೆ ನಾವು ಅಲ್ಲಿಗೆ ಹೋಗುವಷ್ಟರಲ್ಲಿ ಸತ್ತ ಪ್ರಾಣಿಯ ಎಲುಬುಗಳೊಂದನ್ನು ಬಿಟ್ಟು ಉಳಿದದ್ದನ್ನೆಲ್ಲ ಹದ್ದುಗಳು ಧ್ವಂಸಮಾಡಿಬಿಟ್ಟಿದ್ದವು. ಪ್ರಾಣಿ ಸತ್ತ ಸ್ಥಳದಿಂದ ೪೦ ಗಜ ದೂರದಲ್ಲಿದ್ದ ಗಿಡದ ಮೇಲೆ ಆಲ್ಫಿ ಮಧ್ಯರಾತ್ರಿಯ ವರೆಗೂ ಕುಳಿತನು.

ಆದರೆ ಹುಲಿ ಮುಖ ತೋರಿಸಲಿಲ್ಲ.

ನಿರಾಶರಾಗಿ ನಾವು ಹನ್ನೊಂದನೆಯ ದಿನ ಬೆಂಗಳೂರಿಗೆ ಮರಳಿದೆವು.

ಸಮಯ ಕಳೆಯಿತು. ಅನಂತರ ಒಂದು ರಾತ್ರಿ ಒಂದು ಘಟನೆ ನಡೆಯಿತು. ಶಿಕಾರಿಗಳಲ್ಲಿ ಕಾರ್ ಶಿಕಾರಿಗಳು ಎಂಬ ವರ್ಗವೊಂದಿದೆ. ಬೇಟೆಯಾಡುವಾಗ ಇವರು ನೆಲದ ಮೇಲೆ ಕಾಲು ಕೂಡ ಇಡುವದಿಲ್ಲ. ಕಾರಿನಲ್ಲಿ ಕುಳಿತೇ ಬೇಟೆಯಾಡುತ್ತಾರೆ. ಅಡವಿ ಮಾರ್ಗಗಳಲ್ಲಿ ಹೋಗುವಾಗ ಅಕ್ಕಪಕ್ಕದ ಅಡವಿಗಳಲ್ಲಿ ಅತ್ಯಂತ ಪ್ರಖರವಾದ ಸ್ಪಾಟ್ ಲೈಟುಗಳನ್ನು ಹಾಯಿಸಿ ಆ ಪ್ರಕಾಶದಲ್ಲಿ ಹೊಳೆಯುವ ಕಣ್ಣುಗಳತ್ತ ಸಿಕ್ಕಾಬಟ್ಟೆ ಹತ್ತಾರು ಗುಂಡುಗಳನ್ನು ಹಾರಿಸುತ್ತಾರೆ. ತಾವು ಯಾವ ಪ್ರಾಣಿಯ ಮೇಲೆ ಗುಂಡು ಹಾರಿಸಿದೆವು, ಅದು ಹೆಣ್ಣೋ ಗಂಡೋ ಮರಿಯೋ ಯಾವದನ್ನೂ ಇವರು ನೋಡುವದಿಲ್ಲ. ಇವರಿಗೆ ಕೇವಲ ಕೊಲ್ಲುವ ಇಲ್ಲವೆ ಗಾಯಗೊಳಿಸುವ ಹುಚ್ಚು ಹಿಡಿದಿರುತ್ತದೆ. ಇಂಥ ಶಿಕಾರಿಗಳ ತಂಡವೊಂದು ನಾನು ಮೇಲೆ ಉಲ್ಲೇಖಿಸಿದ ರಾತ್ರಿ ಬೀರೂರು-ಲಿಂಗದಹಳ್ಳಿ ರಸ್ತೆಯಲ್ಲಿ ಹೊರಟಿತ್ತು.

ಬೀರೂರಿಗೆ ಸುಮಾರು ನಾಲ್ಕು ಮೈಲು ದೂರದಲ್ಲಿ ಈ ಶಿಕಾರಿಗಳಿಗೆ ಕೆಂಡ ಕಾರುವ ಹುಲಿಯ ಕಣ್ಣುಗಳು ಕಾರಿನ ಬೆಳಕಿನಲ್ಲಿ ಕಾಣಿಸಿದವು. ಒಡನೆಯೇ ಎರಡು ಗುಂಡುಗಳು ಹಾರಿದವು. ಹುಲಿ ಟಣ್ಣನೆ ಜಿಗಿದು ಓಡಿತು. ಒಂದು ಗುಂಡು ಅದರ ಕೆಳದವಡೆಗೆ ಬಡಿದು ಅದನ್ನು ಮುರಿಯಿತು. ಇನ್ನೊಂದು ಗುಂಡು ಅದಕ್ಕೆ ಬಡಿದಿರಲಿಲ್ಲ. ಕಾರ್ ಶಿಕಾರಿಗಳು ತಾವು ಯಾತರ

ಮೇಲೆ ಗುಂಡು ಹಾರಿಸಿದೆವು ಎಂದು ಒಂದಿಷ್ಟೂ ಯೋಚಿಸದೆ ಮುಂದಕ್ಕೆ ತೆರಳಿದರು. ಗಾಯಗೊಂಡ ಪ್ರಾಣಿಯನ್ನು ನೋವಿನ ಯಾತನೆಯಿಂದ ಮುಕ್ತ ಮಾಡಲು ಮರುದಿನ ಮುಂಜಾನೆ ಅವರು ತಿರುಗಿ ಬರಲೂ ಇಲ್ಲ. ಗುಂಡು ಹಾರಿಸಲು ಮತ್ತೆಲ್ಲಿಯಾದರೂ ಕಣ್ಣುಗಳು ಕಾಣುತ್ತವೆಯೊ ಎಂದು ಅರಸುತ್ತ ಅವರು ಮುಂದಕ್ಕೆ ಹೋಗಿ ಬಿಟ್ಟಿದ್ದರು.

ಮುಂದೆ ಎರಡು ತಿಂಗಳಾದರೂ ಗಾಯಗೊಂಡ ಈ ಹುಲಿ ಅತ್ಯಂತ ವೇದನೆಯನ್ನು ಅನುಭವಿಸಿರಬೇಕು. ಅದಕ್ಕೆ ಸರಿಯಾಗಿ ತಿನ್ನಲು ಕೂಡ ಬರುತ್ತಿರಲಿಲ್ಲ. ಕೆಳದವಡೆ ಮುರಿದದ್ದರಿಂದ ಅದಕ್ಕೆ ತನ್ನ ಬೇಟೆಯನ್ನು ಕುತ್ತಿಗೆ ಮುರಿದು ಕೊಲ್ಲುವದು ಕಠಿಣವಾಗಿ ತನ್ನ ಮುಂದಿನ ಆಹಾರವನ್ನು ಸಂಪಾದಿಸುವದು ಅಸಾಧ್ಯಪ್ರಾಯವಾಯಿತು.

ಗಾಯಗೊಂಡ ಮೂರು ತಿಂಗಳ ನಂತರ ಹುಲಿ ಅಡವಿಯಲ್ಲಿ ಮೇಯಲು ಬಂದ ಆಡೊಂದನ್ನು ಹಿಡಿಯಲು ಪ್ರಯತ್ನಿಸಿತು. ಅತ್ಯಂತ ಜಾಗರೂಕತೆಯಿಂದ ಅದು ಆಡುಗಳ ಹಿಂಡನ್ನು ಹಿಂಬಾಲಿಸಿ ಸಮಯ ಸಾಧಿಸಿ ಒಂದು ಪುಷ್ಟ ಆಡಿನ ಮೇಲೆ ಜಿಗಿದಿತ್ತು. ಅದು ಪದ್ಧತಿಯಂತೆ ಕುತ್ತಿಗೆ ಮುರಿಯುವ ಬದಲು ತನ್ನ ಮುಂಗಾಲಿನಿಂದ ಏಟುಹಾಕಿ ಆಡನ್ನು ಕೊಂದಿತು ಎನ್ನುವಾಗ ಹಿಂಡನ್ನು ಕಾಯುತ್ತಿದ್ದವನು ಧೈರ್ಯದಿಂದ ತನ್ನ ಬಡಿಗೆಯನ್ನು ಬೀಸಿದನು. ಏಟು ಬಲವಾಗಿಯೇ ತಗಲಿದ್ದರಿಂದ ಹುಲಿ ರೋಷಗೊಂಡು ಆಡನ್ನು ಬಿಟ್ಟು ಆತನ ಮೈಮೇಲೆ ನೆಗೆಯಿತು. ಹುಲಿಯ ಮುಂಗಾಲಿನ ಏಟಿನಿಂದ ಆ ಮನುಷ್ಯ ಹೆದರಿಕೆಯಿಂದಲೂ ನೋವಿನಿಂದಲೂ ಚೀರುತ್ತಲೇ, ಹುಲಿಯ ಇನ್ನೊಂದು ಏಟಿನಿಂದ ಅವನ ತಲೆ ಪುಡಿಯಾಗಿಹೋಯಿತು.

ಆಡನ್ನು ತಿನ್ನಬೇಕೇ, ಮನುಷ್ಯನನ್ನು ತಿನ್ನಬೇಕೇ ಎಂಬ ಉಭಯ ಸಂಕಟ ಆ ಹುಲಿಗಾಗಿರಬೇಕು. ಅದು ಆ ಮನುಷ್ಯನ ಹೆಣದ ಹತ್ತಿರ ನಿಂತು ಒಡೆದ ತಲೆಯಿಂದ ಸೋರುತ್ತಿದ್ದ ರಕ್ತವನ್ನು ನೆಕ್ಕಿತು. ಮತ್ತೆ ಪರೀಕ್ಷಿಸಿ ನೋಡಲೆಂಬಂತೆ ಸತ್ತ ಆಡಿನ ಬಳಿಗೆ ಹೋಗಿ ಅದರ ಕುತ್ತಿಗೆಯನ್ನು ಹಿಡಿದು ಅಡವಿಗೆ ಎಳದೊಯ್ಯತೊಡಗಿತು. ಆದರೆ ಕೆಲ ಹೆಜ್ಜೆ ಹೋಗುವಷ್ಟರಲ್ಲಿ, ಅದೇಕೋ ಅದು ನಿಂತು ಆಡನ್ನು ಬಿಟ್ಟು, ಸತ್ತವನ ಬಳಿ ಬಂದು ಹೆಣದ ಹೆಗಲನ್ನು ಕಚ್ಚಿ ಅಡವಿಯೊಳಕ್ಕೆ ಎಳೆದುಕೊಂಡು ಓಡಿತು.

ಹೀಗೆ ಎಮ್ಮೆದೊಡ್ಡಿ ನರಭಕ್ಷಕನ ಜನ್ಮವಾಯಿತು; ಆತನ ಕ್ರೂರ ಆಳಿಕೆ ಆರಂಭವಾಯಿತು. ಬೀರೂರು-ಲಿಂಗದಹಳ್ಳಿಯಿಂದ ಉತ್ತರಕ್ಕೆ ಭಾಗವತಕಟ್ಟೆಯ ವರೆಗೆ, ಪಶ್ಚಿಮದಲ್ಲಿ ಬಾಬಾ ಬುಡನ್ ಬೆಟ್ಟಗಳ ವರೆಗೆ, ದಕ್ಷಿಣಕ್ಕೆ ಸಕ್ಕರೆ ಪಟ್ಟಣದವರೆಗೆ ಸುಮಾರು ೨೫೦ ಚದರು ಮೈಲು ಪ್ರದೇಶದಲ್ಲಿ ಈ ನರಭಕ್ಷಕ ಹುಲಿಯು ಮನುಷ್ಯರ ಬೇಟೆಯನ್ನಾಡತೊಡಗಿತು.

ಮನುಷ್ಯರ ಬೇಟೆ ಹೆಚ್ಚುತ್ತ ನಡೆಯಿತು. ವಿಶೇಷವೆಂದರೆ ಅದೊಂದು ಕ್ರಮಬದ್ಧ ರೀತಿಯಲ್ಲಿ ನಡೆಯುತ್ತಿತ್ತು. ಹುಲಿ ಒಂದು ನಿರ್ದಿಷ್ಟ ಮಾರ್ಗವಾಗಿ ಪ್ರಯಾಣ ಬೆಳೆಸುತ್ತ ನಡನಡುವೆ ನರಬೇಟೆಯಾಡುತ್ತಿತ್ತು. ಹುಲಿಗಳ ಪದ್ಧತಿಯಂತೆ ಕುತ್ತಿಗೆ ಮುರಿದು ಕೊಲ್ಲುವ ಬದಲು ಮುಂಗಾಲಿನೇಟು ಹಾಕಿ ಕೊಲ್ಲುತ್ತಿತ್ತು. ಕೊಂದ ಮನುಷ್ಯನನ್ನು ತಿನ್ನಲು ಮತ್ತೊಮ್ಮೆ ಹುಲಿ ಎಂದೂ ಬರುತ್ತಿರಲಿಲ್ಲ. ಅನೇಕ ಹೆಣಗಳನ್ನು ಪರೀಕ್ಷಿಸಿದಾಗ ಹುಲಿಗೆ ಕೆಳದವಡೆಯನ್ನು ಪರಿಣಾಮಕಾರಿಯಾಗಿ ಉಪಯೋಗಿಸಲು ಬರುತ್ತಿರಲಿಲ್ಲ ಎಂದು ಸ್ಪಷ್ಟವಾಗಿ ಗೋಚರವಾಯಿತು. ಮೇಲಿನ ದವಡೆಯೊಂದರಿಂದಲೇ ಅದು ಮಾಂಸವನ್ನು ಕೆರೆದು ತೆಗೆದು ತಿನ್ನುತ್ತಿರುವಂತೆ ಕಾಣಿಸುತ್ತಿತ್ತು.

ನರಭಕ್ಷಕನ ಜನ್ಮವಾದೊಡನೆ ಬೀರೂರು-ಲಿಂಗದಹಳ್ಳಿ ಹಾದಿಯಲ್ಲಿ ದನಗಳನ್ನು ಕೊಲ್ಲುತ್ತಿದ್ದ ಹುಲಿ ಒಮ್ಮಿಂದೊಮ್ಮೆ ಮಾಯವಾಯಿತು. ಇದರಿಂದ ದನಗಳನ್ನು ಕೊಲ್ಲುತ್ತಿದ್ದ ಹುಲಿಯೇ ನರಭಕ್ಷಕ ಹುಲಿಯಾಗಿದೆ ಎನ್ನುವದು ಖಂಡಿತ

ವಾಗುವಂತಾಯಿತು. ಹುಲಿಯನ್ನು ಗಾಯಗೊಳಿಸಿದ ಕಾರ್ ಶಿಕಾರಿಗಳ ಪ್ರಕರಣ ಕೆಲ ದಿನಗಳ ವರೆಗೆ ಬಹಿರಂಗವಾಗಲಿಲ್ಲ. ಒಮ್ಮೆ ಅವರಲ್ಲೊಬ್ಬ ತನ್ನ ಪೌರುಷ ಕೊಚ್ಚಿಕೊಳ್ಳುತ್ತಿದ್ದಾಗ ಬೀರೂರು ಲಿಂಗದಹಳ್ಳಿ ರಸ್ತೆಯಲ್ಲಿ ತಾವೊಂದು ಹುಲಿಯನ್ನು ಗಾಯಗೊಳಿಸಿದ ವಿಷಯವನ್ನು ಹೇಳಿದನು. ಎಲ್ಲ ಸಂಗತಿಗಳನ್ನು ಸೇರಿಸಿ ಅಂದಾಜು ಕಟ್ಟಿದಾಗ ನರಭಕ್ಷಕನ ಜನ್ಮದ ಕಥೆಯನ್ನು ನಾವು ಮೇಲಿನ ರೀತಿಯಲ್ಲಿ ಹೊಂದಿಸಿಕೊಳ್ಳಲು ಸಾಧ್ಯವಾಯಿತು.

ಈ ನರಭಕ್ಷಕ ಹುಲಿ ತನ್ನ ನಿರ್ದಿಷ್ಟ ಮಾರ್ಗದಲ್ಲಿ ಪ್ರಯಾಣ ಬೆಳೆಸಿ ಹಳ್ಳಿ ಊರುಗಳ ಹೊರವಲಯದಲ್ಲಿ ನರಬೇಟೆಯಾಡುತ್ತಿತ್ತು. ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದ ಸುದ್ದಿಗಳನ್ನೋದಿ ಮತ್ತು ನನ್ನ ಬಳಿ ಇದ್ದ ಅಡವಿ ನಕಾಶೆಯಲ್ಲಿ ಜನರು ಸತ್ತ ಊರುಗಳನ್ನು ಗುರುತುಹಾಕಿಕೊಂಡು ನಾನು ಈ ಹುಲಿಯ ಕಾರಭಾರದ ಅಂದಾಜನ್ನು ಸರಿಯಾಗಿ ಮಾಡಿಕೊಂಡೆ.

ಬಾಬಾಬುಡನಗಿರಿ ಸಾಲಿನಲ್ಲಿಯ ೪,೫೦೦ ಅಡಿ ಎತ್ತರದ ಹೊಗಾರಕಾನ ಎಂಬ ಗುಡ್ಡದ ಓರೆಯಲ್ಲಿಯ ದಟ್ಟವಾದ ಅಡವಿ ಪ್ರದೇಶ ಈ ಹುಲಿಯ ಕೇಂದ್ರ ಠಾಣ್ಯವಾಗಿತ್ತು. ಹೆಚ್ಚುಕಡಿಮೆ ನಿರ್ಜನವಾದ ಈ ಪ್ರದೇಶವು ಹುಲಿಗೆ ಆಶ್ರಯ ಸ್ಥಾನವಾಗಿತ್ತು. ಇಲ್ಲಿಂದಲೇ ಹುಲಿ ಹೆಚ್ಚುಕಡಿಮೆ ನಿಯಮಿತ ಅವಧಿಯಲ್ಲಿ ಸಂಚಾರ ಹೊರಡುತ್ತಿತ್ತು. ಒಂದು ಊರಲ್ಲಿ ಒಮ್ಮೆ ಬೇಟೆಯಾಡಿದನಂತರ ಮತ್ತೆ ಹುಲಿ ಅಲ್ಲಿಗೆ ಬರುವದು ಪ್ರತಿ ಮೂರು ಅಥವಾ ನಾಲ್ಕು ತಿಂಗಳಿಗೊಮ್ಮೆ ಎಂದು ಅದು ಮಾಡಿದ ನರಬೇಟೆಗಳ ಮೂಲಕ ಖಚಿತವಾಗುವಂತಿತ್ತು. ಇಷ್ಟೆಲ್ಲ ಗೊತ್ತಾಗುವದರೊಳಗಾಗಿ ಹುಲಿ ೩೭ ಜನರನ್ನು ತಿಂದು ತೇಗಿತ್ತು.

ಈ ನರಭಕ್ಷಕನ ಬೇಟೆಯಾಡಲು ನಿಶ್ಚಯಿಸಿದ ನಾನು ಬೀರೂರು-ಲಿಂಗದಹಳ್ಳಿಗೆ ಸುಮಾರು ಮಧ್ಯವರ್ತಿ ಹಳ್ಳಿಯಾದ ಹೊಗರೆಹಳ್ಳಿಯಲ್ಲಿ ಬಿಡಾರಹೂಡಿದೆ. ಈ ಹಳ್ಳಿ ಹೊಗಾರಕಾನ ಗುಡ್ಡದಿಂದ ಕೇವಲ ೩॥ಮೈಲು ದೂರದಲ್ಲಿತ್ತು. ನನಗೆ ಈ ಪ್ರದೇಶದ ಮಾಹಿತಿ ಚೆನ್ನಾಗಿದ್ದುದರಿಂದಲೂ ಇಲ್ಲಿಯ ಜನರ ಪರಿಚಯ ಸಾಕಷ್ಟಿದ್ದು ಅವರ ಸಹಕಾರ ದೊರೆಯುವ ಭರವಸೆ ಇದ್ದುದರಿಂದಲೂ ನಾನು ಹೊಗರೆಹಳ್ಳಿಯನ್ನು ಆರಿಸಿಕೊಂಡೆ. ಹುಲಿಯ ಪ್ರತಿಯೊಂದು ಸುತ್ತಿನಲ್ಲಿಯೂ ಹೊಗರೆಹಳ್ಳಿಯ ಒಬ್ಬ ಅದಕ್ಕೆ ಆಹುತಿಯಾಗುತ್ತಿದ್ದ.

ಹೊಗರೆಹಳ್ಳಿಗೆ ಹುಲಿ ತನ್ನ ಸರತಿಯ ಪ್ರಕಾರ ಬರುವ ಅಂದಾಜಿನ ದಿನಕ್ಕೆ ೧೫ ದಿನ ಮುಂಚಿತವಾಗಿಯೇ ನಾನು ಅಲ್ಲಿಗೆ ಬಂದೆ. ಹುಲಿಯ ಬೇಟೆಯ ವಿಷಯದಲ್ಲಿ ಸಾಕಷ್ಟು ಮಾಹಿತಿಸಂಗ್ರಹಿಸಿ ಅದರ ಬೇಟೆಗಾಗಿ ಸಕಲ ಸಿದ್ಧತೆ ಮಾಡಿಕೊಳ್ಳಲು ಬೇಕಷ್ಟು ಅವಧಿ ನನಗಿತ್ತು.

ಹೊಗರೆಹಳ್ಳಿ ದೊಡ್ಡ ಹಳ್ಳಿಯೇ ಎನ್ನಬೇಕು. ದಟ್ಟವಾದ ಜನವಸತಿ ಇಲ್ಲವಾದರೂ ಮನೆಗಳೆಲ್ಲ ಕಲ್ಲಿನಿಂದ ಕಟ್ಟಿದ ಪಕ್ಕಾ ಮನೆಗಳು. ಹೊಗರೆಹಳ್ಳಿ ಪುರಾತನ ಹಳ್ಳಿ. ಅಲ್ಲಿ ಕಲ್ಲಿನಿಂದ ಕಟ್ಟಿದ ಎರಡು ಪ್ರಾಚೀನ ದೇವಾಲಯಗಳಿವೆ.

ನರಬೇಟೆ ಆರಂಭವಾದಂದಿನಿಂದ ಜನರು ಕತ್ತಲಾಗುತ್ತಲೇ ಮನೆ ಸೇರುತ್ತಿದ್ದುದರಿಂದ ಹುಲಿ ಇಳಿಹೊತ್ತಿನಲ್ಲಿ ಜನರನ್ನು ಕೊಲ್ಲತೊಡಗಿತ್ತು. ನಸುಕಿನಲ್ಲಿಯೆ ಅದು ಹಳ್ಳಿಯನ್ನು ಹೊಕ್ಕ ದಾಖಲೆಯೂ ಇತ್ತು. ಆದರೆ ಭದ್ರವಾದ ಮನೆಗಳ ಮೂಲಕ ಆಗ ಅದೇನೂ ಮಾಡಲು ಸಮರ್ಥವಾಗಿರಲಿಲ್ಲ.

ಇಂಥ ಪರಿಸ್ಥಿತಿಯಲ್ಲಿ ಬೇಟೆಯ ನಿಶ್ಚಿತ ರೂಪವನ್ನು ನಿರ್ಧರಿಸುವದು ಬಹು ಕಠಿಣವಾಗಿತ್ತು. ಒಮ್ಮೆ ಬೇಟೆಯಾಡಿದ ನಂತರ ಹುಲಿ ಮತ್ತೆ ಮೂರು ನಾಲ್ಕು ತಿಂಗಳ ಕಾಲ ಹೊಗರೆಹಳ್ಳಿಗೆ ಬರುವದಿಲ್ಲವೆನ್ನುವದು ನನಗೆ ಗೊತ್ತಿತ್ತು. ಮತ್ತೆ ಮುಂದಿನ ಬೇಟೆಯನ್ನು ಹುಲಿ ಎಲ್ಲಿ ಆಡುವದೆಂದು ಹೇಳುವದು ಮನುಷ್ಯಮಾತ್ರನಾದ ನನಗೆ ಅಸಾಧ್ಯವಾಗಿತ್ತು. ಆದ್ದರಿಂದ ನಾನೇ ಅದರ ಬಲಿಪಶುವಾಗಿ ಅದನ್ನು ನನ್ನತ್ತ ಆಕರ್ಷಿಸುವದೊಂದೇ—ಆ ಮಾರ್ಗವನ್ನನುಸರಿಸಲು ನನಗೆ

ಎಳ್ಳಷ್ಟು ಮನಸ್ಸಿರದಿದ್ದರೂ-ನನ್ನ ಮುಂದಿರುವ ಹಾದಿಯಾಗಿತ್ತು.

ಹೊಗರೆಹಳ್ಳಿಗೆ ಬಂದು ಎಲ್ಲ ಸಮಾಚಾರಗಳನ್ನರಿತುಕೊಂಡು ಇಷ್ಟನ್ನೆಲ್ಲ ಯೋಚಿಸುವ ಹೊತ್ತಿಗೆ ಒಂದು ವಾರ ಕಳೆದುಹೋಗಿತ್ತು. ಹುಲಿ ಬರುವ ದಿನ ಸಮೀಪವಾಗುತ್ತಲಿತ್ತು.

ಪಶ್ಚಿಮ ದಿಕ್ಕಿನ ಪ್ರದೇಶದಲ್ಲಿ ಹುಲಿಯ ಬಾಯಿಗೆ ಬೀಳುತ್ತಿದ್ದವರು ಕಟ್ಟಿಗೆ ಕಡಿಯುವವರೊ ದನಗಾಹಿಗಳೊ ಆಗಿರುತ್ತಿದ್ದರು. ಯಾವ ಸಂದರ್ಭದಲ್ಲಿಯೂ ಹುಲಿ ಒಂದೇ ಒಂದು ದನದ ಮೇಲೆ ಕೂಡ ಆಕ್ರಮಣ ಮಾಡಿರಲಿಲ್ಲ. ನನಗೊಂದು ವಿಚಾರ ಹೊಳೆಯಿತು. ಇದು ದಿವ್ಯ ಉಪಾಯ ಎಂದು ನನ್ನ ಬೆನ್ನನ್ನು ನಾನೇ ಚಪ್ಪರಿಸಿಕೊಂಡೆ.

ಅಡವಿ ಪ್ರದೇಶದೊಳಗೆ ಅರ್ಧ ಮೈಲು ದೂರದಲ್ಲಿ ಒಂದು ಗಿಡವನ್ನಾರಿಸಿ ನೆಲದಿಂದ ೧೫ ಅಡಿ ಎತ್ತರದಲ್ಲಿ ಒಂದು ಟೊಂಗೆಗೆ ಒಂದು ಕುರ್ಚಿಯನ್ನು ಕಟ್ಟಿಸಿದೆ. ಹುಲಿ ಇಷ್ಟೆತ್ತರಕ್ಕೆ ಜಿಗಿಯುವದು ಶಕ್ಯವಿರಲಿಲ್ಲ. ಆರಡಿ ಉದ್ದ, ಮೂರಿಂಚು ದಪ್ಪದ ಕಟ್ಟಿಗೆಯ ಬಡಿಗೆಯೊಂದನ್ನು ಒಂದು ಟೊಂಗೆಗೆ, ಅದು ಕುರ್ಚಿಯ ಕೆಳಗಿದ್ದ ಇನ್ನೊಂದು ಟೊಂಗೆಗೆ ಸಮೀಪದಲ್ಲಿರುವಂತೆ, ಹಗ್ಗದಿಂದ ಕಟ್ಟಿ ತೂಗಹಾಕಿದೆ. ಈ ತುದಿಗೆ ಇನ್ನೊಂದು ಹಗ್ಗವನ್ನು ಕಟ್ಟಿ ಅದರ ಕುಣಿಕೆಯನ್ನು ನನ್ನ ಕಾಲಿಗೆ ಸಿಗಿಸಿಕೊಂಡೆ. ನಾನು ಕುರ್ಚಿಯಲ್ಲಿ ಶಸ್ತ್ರಧಾರಿಯಾಗಿ ಆರಾಮಾಗಿ ಕುಳಿತುಕೊಂಡೇ ಈ ಹಗ್ಗವನ್ನು ಜಗ್ಗಬಹುದಿತ್ತು. ಹಗ್ಗ ಜಗ್ಗಿದೊಡನೆ ಬಡಿಗ ಟೊಂಗೆಗೆ ಬಡಿದು ಯಾರೊ ಕಟ್ಟಿಗೆ ಕಡಿಯುತ್ತಿರುವಂತೆ ಸಪ್ಪಳವಾಗುತ್ತಿತ್ತು. ನಾನು ಹುಲಿಯ ಬರವನ್ನು ಕಾಯುತ್ತಿದ್ದಾಗ ತಿನ್ನುವದು, ಸಿಗರೇಟು ಸೇದುವದು, ಕುಡಿಯುವದು, ಕೆಮ್ಮುವದು ಎಲ್ಲವನ್ನೂ ಮಾಡುವದು ಸಾಧ್ಯವಿದ್ದುದರಿಂದ ಯಾವ ವಿಧದ ಶಾರೀರಿಕ ಕಷ್ಟವನ್ನೂ ಅನುಭವಿಸಬೇಕಾಗಿರಲಿಲ್ಲ. ಯಾವನೋ ಕಟ್ಟಿಗೆ ಕಡಿಯುತ್ತಿದ್ದಾನೆಂಬ ಭ್ರಮೆಯಿಂದ ಹುಲಿ ಬಂದೇ ಬರುವದು ಎಂದು ನಾನು ತಿಳಿದಿದ್ದೆ.

ಹೊಗರೆಹಳ್ಳಿಯ ಪಟೇಲ ಮೂಡಲಗಿರಿ ಗೌಡರು ನನಗೆ ತುಂಬ ಸಹಕಾರ ನೀಡಿದರು. ನಾನು ಗಿಡವೇರಿ ಕುರ್ಚಿಯಲ್ಲಿ ಕುಳಿತೊಡನೆ ಅಡವಿಯೊಳಕ್ಕೆ ಯಾರನ್ನೂ ಬಿಡಲಾಗದು, ಹುಲಿಗೆ ನನ್ನ ಹೊರತು ಇನ್ನಾವ ಮನುಷ್ಯನ ಗಾಳಿಯೂ ಹತ್ತಬಾರದು, ಎಂದು ನೋಡಿಕೊಳ್ಳುವ ಹೊಣೆಯನ್ನು ಆತನ ಮೇಲೆ ಹೊರಿಸಿದೆ. ಆತ ಈ ಮಾತನ್ನು ಊರಲ್ಲಿ ಮತ್ತು ಸುತ್ತಮುತ್ತಲಿನ ಪ್ರದೇಶಗಳಲ್ಲಿ ಸಾರಿ ಯಾರೂ ಮಧ್ಯಾಹ್ನದ ನಂತರ ನಾನಿರುವ ಪ್ರದೇಶದಲ್ಲಿ ಕಾಲಿಡಲಾಗದು ಎಂದು ತಾಕೀತು ಮಾಡಿದರು. ಯಾರಾದರೂ ಹೋದದ್ದೇ ಆದರೆ ಪರಿಣಾಮ ನೆಟ್ಟಗಾಗದು ಎಂಬ ಅಂಜಿಕೆಯನ್ನೂ ಹಾಕಿದೆ. ಹಳ್ಳಿಯ ಬಯಲುಗಳಲ್ಲಿ ದನಗಳಿಗೆ ೧೫-೨೦ ದಿನ ಸಾಲುವಷ್ಟು ಒಣ ಹುಲ್ಲಿದ್ದಿತು. ಆ ಅವಧಿಯಲ್ಲಿ ಹುಲಿ ಬರುವದು ಎಂದು ನಾನೆಣಿಸಿದ್ದೆ. ನರಭಕ್ಷಕ ಹುಲಿಗೆ ತುತ್ತಾಗಲು ಯಾರೂ ಬಯಸುತ್ತಿರಲಿಲ್ಲವಾದ್ದರಿಂದ ಮತ್ತು ಅದು ಸತ್ತರೆ ಸಾಕು ಎಂದು ಎಲ್ಲರಿಗೂ ಅನಿಸುತ್ತಿದ್ದುದರಿಂದ ಹಳ್ಳಿಗರೆಲ್ಲ ಪಟೇಲರ ಮಾತನ್ನು ಸ್ವಾಗತಿಸಿದರು. ಇನ್ನು ಎರಡುಮೂರು ವಾರ ಯಾವ ಕೆಲಸವಿಲ್ಲದೆ ನಿರುದ್ಯೋಗಿಗಳಾಗಿ ಬಿದ್ದುಕೊಂಡಿರಬಹುದಲ್ಲ ಎಂಬ ಮಾತೂ ಹಳ್ಳಿಗರಿಗೆ ಆನಂದವನ್ನುಂಟುಮಾಡಿರಬೇಕು.

ಹೊಗರೆಹಳ್ಳಿಗೆ ನಾನು ಬಂದು ತಳವೂರಿದಂದಿನಿಂದ ಸರಿಯಾಗಿ ಹತ್ತನೆಯ ದಿನ ನಾನು ನನ್ನ ಯೋಜನೆಯನ್ನು ಒರೆಗೆ ಹಚ್ಚಿದೆ. ಬೇಗನೆ ಊಟ ಮಾಡಿ ಮುಂಜಾನೆ ೧೧ ಗಂಟೆಯ ಸುಮಾರಿಗೆ ನೀರು, ತಿಂಡಿ, ಚಿಲುಮೆ ಮತ್ತು ನನ್ನ. ೪೦೫ ರಾಯಫಲ್‌ಗಳನ್ನೂ ತೆಗೆದುಕೊಂಡು ಬಂದು ಗಿಡವನ್ನೇರಿ ಕುರ್ಚಿಯಲ್ಲಿ ಕುಳಿತೆ. ನನ್ನ ಮೊದಲನೆಯ ದಿನದ ಕಾವಲು ಆರಂಭವಾಯಿತು. ಕಟ್ಟಿಗೆ ಕಡಿಯುವ ಸಪ್ಪಳ ಮಾಡುವದಕ್ಕಾಗಿ ಕಾಲಿನಿಂದ ಹಗ್ಗ ಜಗ್ಗುವದು ತ್ರಾಸದಾಯಕವೂ ನೀರಸವೂ ಆದ ಕೆಲಸವೆಂದು ಬೇಗನೆ ಕಂಡುಕೊಂಡೆ. ಅಲ್ಲದೆ ಸೂರ್ಯಕಿರಣಗಳು ನನ್ನ ಕಣ್ಣು

ಗಳನ್ನು ಕೋರೈಸುತ್ತಿದ್ದವು. ಸೂರ್ಯಾಸ್ತದ ವರೆಗೂ ಹೇಗೋ ಕುರ್ಚಿಯಲ್ಲಿ ಕುಳಿತು ಕಾವಲು ಮಾಡಿದೆ.

ಮುಂದೆ ಒಂದಿಡೀ ವಾರ ಈ ಕಾವಲನ್ನು ಹಗಲು ಹೊತ್ತಿನಲ್ಲಿ ಮುಂದುವರಿಸಿದೆ. ಆದರೆ ಹುಲಿ ಬರುವ ಗಾಳಿಕೂಡ ಸೋಕಲಿಲ್ಲ. ಇಷ್ಟು ಹೊತ್ತಿಗೆ ಗಿಡದಮೇಲಿನ ನನ್ನ ಹೊಂಚಿನಿಂದ ಕಣ್ಣಿಗೆ ಬೀಳಬಹುದಾದ ಪ್ರತಿಯೊಂದು ದೊಡ್ಡ ಪೊದೆಯ, ಗಿಡದ, ತಗ್ಗುದಿನ್ನೆಯ ಪೂರ್ಣ ಪರಿಚಯ ನನಗಾಗಿ ಹೋಗಿತ್ತು. ಹುಲಿ ಬಂದರೆ, ನನಗೆ ಕಾಣದಂತೆ ಯಾವ ಯಾವ ಮಾರ್ಗದಿಂದ, ಹೇಗೆ ಹೇಗೆ ಬರಬಹುದು ಎನ್ನುವ ಚಿತ್ರ ಕೂಡ ನನ್ನ ಮನಸ್ಸಿನಲ್ಲಿ ಅಚ್ಚಾಗಿಹೋಗಿತ್ತು.

ನಿರಾಶೆಯ ಈ ಮೊದಲನೆಯ ವಾರ ಕಳೆದ ಬಳಿಕ ಹೊತ್ತು ಕಳೆಯಲು ಅನುಕೂಲವಾಗಲೆಂದು ಬೀರೂರು ರೇಲ್ವೆ ನಿಲ್ದಾಣದ ಪುಸ್ತಕದಂಗಡಿಯಿಂದ ಎರಡು ಅಗ್ಗದ ಕಾದಂಬರಿಗಳನ್ನು ಕೊಂಡೆ. ಗಿಡವೇರಿ ಕುರ್ಚಿಯ ಮೇಲೆ ಕುಳಿತಾಗ ಅವನ್ನೋದುತ್ತಿದ್ದೆ. ಕಾಲು ತನ್ನಷ್ಟಕ್ಕೆ ಹಗ್ಗವನ್ನು ಜಗ್ಗುತ್ತ ಕಟ್ಟಿಗೆ ಕಡಿಯುವ ಸಪ್ಪಳವನ್ನು ಮಾಡಿಸುತ್ತಿತ್ತು. ಓದುತ್ತಿರುವಾಗ ಏನಾದರೂ ವಿಶೇಷ ಸಂಭವಿಸಿದರೆ ಅದರ ಸುಳಿವನ್ನು ನನ್ನ ಕಿವಿ ಕೊಟ್ಟೇ ಕೊಡುವದೆಂದು ನನಗೆ ಭರವಸೆಯಿತ್ತು. ಹೀಗೆ ಎರಡನೆಯ ವಾರವೂ ಮುಗಿಯುತ್ತ ಬಂತು. ಆದರೆ ಹುಲಿರಾಯನ ಸುಳಿವು ಮಾತ್ರ ಇನ್ನೂ ಇಲ್ಲ.

ಆಗಲೇ ನನ್ನ ತಾಳ್ಮೆ ಮೀರುತ್ತ ಬಂದಿತ್ತು ಎಂದರೆ ಯಾರೂ ತಪ್ಪೆನ್ನಲಾರರು. ನನ್ನ ಈ ಬಲವಂತದ ನಿಷ್ಕ್ರಿಯತೆಯಿಂದ ನನಗೆ ರೋಸಿ ಹೋಗಿತ್ತು. ಇನ್ನೂ ಉತ್ತಮವಾದೊಂದು ಉಪಾಯವನ್ನು ಶೋಧಿಸಲು ನನ್ನ ಮಿದುಳನ್ನು ದುಡಿಸಿದೆ, ಪ್ರಯೋಜನವಾಗಲಿಲ್ಲ. ಈಗಾಗಲೇ ಸೂಚಿಸಿರುವದಕ್ಕಿಂತ ಉತ್ತಮ ಉಪಾಯವನ್ನು ಹೇಳಲಾರೆ ಎಂದಿತು ಮಿದುಳು.

ಹುಲಿ ಬಂದು ಹೋಗಿ ಈಗ ನಾಲ್ಕನೆಯ ತಿಂಗಳು. ಅದು ಯಾವ ನಿಮಿಷದಲ್ಲಾದರೂ ಆಗಮಿಸಬಹುದಿತ್ತು. ಅದು ತನ್ನ ಎಂದಿನ ಕಾರ್ಯಕ್ರಮಕ್ಕನುಸರಿಸಿ ಹೊರಟಿದ್ದರೆ, ಎಲ್ಲಿಯೇ ಆಗಲಿ ಹುಲಿ ನರಬೇಟೆಯಾಡಿದ ಸುದ್ದಿ ಬಂದರೆ, ನನಗದನ್ನು ಕೂಡಲೆ ತಿಳಿಸುವ ವ್ಯವಸ್ಥೆ ಮಾಡಲು ಚಿಕ್ಕಮಗಳೂರಿನಲ್ಲಿರುವ ಡೆಪ್ಯುಟಿ ಕಮೀಶನರರಿಗೆ ಹೇಳಿಟ್ಟಿದ್ದೆ.

ಎರಡು ದಿನಗಳ ನಂತರ ಒಬ್ಬಾತ ಬಂದ. ಕಡೂರಿನ ಅಮಲ್ದಾರರು ಅವನನ್ನು ಕಳಿಸಿದ್ದರು. ನಾಲ್ಕು ದಿನಗಳ ಹಿಂದೆ ಚಿಕ್ಕಮಗಳೂರು ಸಕ್ಕರೆ ಪಟ್ಟಣ ರಸ್ತೆಯಲ್ಲಿರುವ ಒಂದು ಹಳ್ಳಿಯಲ್ಲಿ ಹುಲಿ ಒಬ್ಬನನ್ನು ಕೊಂದಿತು ಎಂಬ ಸಮಾಚಾರವನ್ನು ಆತ ತಿಳಿಸಿದ.

ಮಾರನೆಯ ದಿನ ಮತ್ತೆ ಈ ಸುದ್ದಿಗಾರ ಓಡಿ ಬಂದು ಈರನಕೆರೆಯ ಉತ್ತರ ದಂಡೆಯಲ್ಲಿ ಹುಲಿ ದನಗಾಹಿಯೊಬ್ಬನನ್ನು ಮುರಿದು ತಿಂದಿತು ಎಂದು ತಿಳಿಸಿದ. ಹೊಗರೆಹಳ್ಳಿಯಿಂದ ಒಂಬತ್ತು ಮೈಲು ದೂರದಲ್ಲಿರುವ ಮಡಕ ಕೆರೆಗೆ ಈರನಕೆರೆ ಐದು ಮೈಲು ದೂರದಲ್ಲಿತ್ತು.

ಈ ಸುದ್ದಿಗಳೆಲ್ಲ ಸಮಾಧಾನಕರವಿದ್ದವು. ಏಕೆಂದರೆ ಹುಲಿ ತನ್ನ ಕ್ರಮದಂತೆ ನಿಶ್ಚಿತ ಹಾದಿಯನ್ನು ಹಿಡಿದು ಬರುತ್ತಿತ್ತು. ನನಗೆ ಕೊನೆಯ ನರಬೇಟೆಯ ಸುದ್ದಿ ಬರುವದಕ್ಕೆ ಎರಡು ದಿನ ಮುಂಚಿತವಾಗಿ ಅದು ಹದಿನಾಲ್ಕೇ ಮೈಲು ಅಂತರದಲ್ಲಿತ್ತು. ಆದ್ದರಿಂದ ಇಷ್ಟರಲ್ಲಿ ಅದು ಬಹುಶಃ ಹೊಗರೆಹಳ್ಳಿಗೆ ಸಮೀಪದಲ್ಲಿ ಬಂದಿರಬೇಕು. ಅದು ಹೊಟ್ಟೆ ತುಂಬಿಸಿಕೊಂಡು ನಾಳೆಗೆ ಮೂರು ದಿನಗಳಾಗುವವಾದ್ದರಿಂದ ನಾಳೆ ಅದು ಬೇಟೆಯ ಶೋಧಕ್ಕಾಗಿ ಈ ಬಯಲಿಗೆ ಬರುವದು ಎಂಬ ಆಶೆಯನ್ನು ಹಿಡಿಯಲು ತುಂಬ ಆಧಾರವಿತ್ತು.

ನರಭಕ್ಷಕ ಸಮೀಪದಲ್ಲಿಯೆ ಇದೆ, ಆದ್ದರಿಂದ ಯಾರೂ ತೋಟ ಅಥವಾ ಅಡವಿ ಪ್ರದೇಶದಲ್ಲಿ ಕಾಲಿಡಲಾಗದು ಎಂದು ಹೊಗರೆಹಳ್ಳಿ, ಹಾಗೂ ಸುತ್ತಲಿನ ಜನಕ್ಕೆ ಎಚ್ಚರಿಕೆಯನ್ನೀಯಲು ನಾನು ಮೂಡಲಗಿರಿ ಗೌಡರಿಗೆ ತಿಳಿಸಿದೆ.

ಮರುದಿನ ಎಂದಿಗಿಂತಲೂ ಬೇಗನೆ ನನ್ನ

ಗಿಡದ ಕುರ್ಚಿಯನ್ನೇರಿ ಕುಳಿತೆ. ಈ ಸಲ ಕಾದಂಬರಿಯನ್ನು ತಂದಿರಲಿಲ್ಲ. ಆದಷ್ಟು ದೊಡ್ಡ ದಾಗಿ ಕಟ್ಟಿಗೆ ಕಡಿಯುವ ಸಪ್ಪಳ ಮಾಡುವದರಲ್ಲಿ ಮತ್ತು ನಾನು ಹುಲಿಗೆ ಸರಿಯಾಗಿ ಕಾಣಿಸುವಂತೆ ಟೊಂಗೆಯ ಮೇಲೆ ಅತ್ತಿತ್ತ ಸರಿದಾಡುವದರಲ್ಲಿ ತೊಡಗಿದೆ. ಅಂದು ಸಂಜೆ ತಿರುಗಿ ಬರುತ್ತಿದ್ದಾಗ ಹುಲಿ ಎಲ್ಲಿಯಾದರೂ ಅಕಸ್ಮಾತ್ತಾಗಿ ಆಕ್ರಮಣ ಮಾಡೀತೆಂದು ಬಹಳ ಜಾಗರೂಕತೆಯಿಂದ ಬಂದೆ. ಆದರೆ ಮತ್ತೆರಡು ದಿನ ಏನೂ ಸಂಭವಿ ಸಲಿಲ್ಲ. ಹೊಸ ಆಹುತಿಯ ಸುದ್ದಿಯೂ ಬರ ಲಿಲ್ಲ.

ಹುಲಿ ಹೊಗಾರಕಾನದಲ್ಲಿಯ ತನ್ನಬಿಡಾರಕ್ಕೆ ಹೋಗಿರಬಹುದು ಇಲ್ಲವೆ ಹೊಗರೆಹಳ್ಳಿಯನ್ನು ದಾಟಿ ಲಿಂಗದಹಳ್ಳಿಮತ್ತುಭಾಗವತಕಟ್ಟೆಯದಿಕ್ಕಿ ನಲ್ಲಿ ಅಥವಾ ಶಾಂತವೇರಿಯ ದಿಕ್ಕಿನಲ್ಲಿ ಹೋಗಿರ ಬಹುದು ಎಂದು ಈಗ ನನಗೆ ಸಂಶಯ ಬಂತು.

ಹವೆ ಚೆನ್ನಾಗಿದ್ದುದರಿಂದ ಮತ್ತು ಚಂದ್ರ ಪ್ರಕಾಶವೂ ಸಾಕಷ್ಟಿದ್ದುದರಿಂದ ನಾನು ಮುಂದಿ ನೆರಡು ದಿನಗಳಲ್ಲಿ ಮಧ್ಯಾಹ್ನ ಮತ್ತು ರಾತ್ರಿಗ ಳನ್ನು ಗಿಡದಲ್ಲಿಯೆ ಕಳೆಯುವ ನಿರ್ಧಾರ ಮಾಡಿದೆ. ರಾತ್ರಿ ಕಾಲದಲ್ಲಿಯೂ ಸಂಚರಿಸುವ ಹುಲಿಯನ್ನು ಆಕರ್ಷಿಸುವಲ್ಲಿ ನಾನು ಹೆಚ್ಚು ಯಶಸ್ವಿಯಾಗಬಹುದು ಎಂಬುದೇ ಈ ನಿರ್ಧಾ ರಕ್ಕೆ ಕಾರಣವಾಗಿತ್ತು. ಹದಿನೈದು ದಿನ ವ್ಯರ್ಥ ಕಾವಲು ಮಾಡಿ ದಣಿದಿದ್ದ ನನಗೆ ಇನ್ನಿಷ್ಟು ದಣಿವಾಗುವದು ಖಂಡಿತವಾಗಿದ್ದರೂ ಯಶಸ್ಸಂ ಪಾದನೆಯ ಹಟದಿಂದ ಈ ಕಷ್ಟವನ್ನು ಅನುಭವಿ ಸಲು ಸಿದ್ಧನಾದೆ.

ಮರುದಿನ ಮಧ್ಯಾಹ್ನ ಕಂಬಳಿ, ಚಹದ ಬಾಟ್ಲಿ, ಊಟದ ಡಬ್ಬಿ, ಟಾರ್ಚು ಮುಂತಾದವು ಗಳಿಂದ ಸಜ್ಜಿತನಾಗಿ ಗಿಡವೇರಿದೆ. ನನ್ನ ಅಳವು ಮೀರಿ ನಿದ್ದೆ ಬಾರದಿರಲೆಂದು ಮೂರು ಬೆಂಝೆ ಡ್ರಿನ್ ಗುಳಿಗೆಗಳನ್ನೂ ಕಿಸೆಯಲ್ಲಿಟ್ಟುಕೊಂಡಿದ್ದೆ.

ಹಗ್ಗ ಜಗ್ಗಿ ಕಟ್ಟಿಗೆ ಕಡಿಯುವ ಸಪ್ಪಳವನ್ನು ಹಗಲಿಡೀ ಮತ್ತು ರಾತ್ರಿ ಬಹಳ ಹೊತ್ತಿನ ತನ ಕವೂ ಮಾಡುತ್ತ ಕುಳಿತೆ. ಆಗಾಗ ಗೂಗೆಯ ಅಥವಾ ಕಾಡು ಕುರಿಯ ಕೂಗು ಕೇಳಿಬರುತ್ತಿ ದ್ದುದನ್ನು ಬಿಟ್ಟರೆ ಅಡವಿ ನಿಶ್ಶಬ್ದವಾಗಿತ್ತು. ರಾತ್ರಿ ೧॥ ಗಂಟೆಗೆ ಚಂದ್ರಾಸ್ತವಾಗಿ ಕತ್ತಲೆಯಾ ಯಿತು. ಚಳಿಯೂ ಬೀಳತೊಡಗಿತು. ಮೂರು ಗಂಟೆಯ ಹೊತ್ತಿಗೆ ಕಣ್ಣು ತೂಕಡಿಸತೊಡಗಲು ಎರಡು ಬೆಂಝೆಡ್ರಿನ್ ಗುಳಿಗೆಗಳನ್ನು ನುಂಗಿದೆ. ಅರ್ಧತಾಸಿನ ನಂತರ ನನಗೆ ಸರಪರ ಸಪ್ಪಳ ಕೇಳಿಸಿತು. ಸಂಗಡಲೆ ಕತ್ತೆಕಿರುಬವೊಂದು ಕಿರಿಚಿ ಕತ್ತಲೆಯಲ್ಲಿ ಅದೃಶ್ಯವಾಯಿತು.

ಮತ್ತೆ ಕತ್ತಲೆ, ಮೌನ. ಬೆಳಗಿನ ಝಾವದ ಪ್ರಕಾಶ ಬೆಳಗತೊಡಗಿತು. ಕಾಡುಕೋಳಿ ಉದ ಯಿಸುವ ಸೂರ್ಯನನ್ನು ಸ್ವಾಗತಿಸಲೆಂಬಂತೆ ಕೂಗಿತು. ನಾನು ಇಳಿಯಲಾರದೆ ಗಿಡವಿಳಿದು ಹೊಗರೆಹಳ್ಳಿಗೆ ಹೊರಟು ನಿಂತೆ. ತಿರುಗಿ ಬರುವ ವರೆಗಿನ ನಾಲ್ಕು ತಾಸುಗಳೂ ನನಗೆ ನಿದ್ರೆಗಾಗಿ ಅವಶ್ಯವಿದ್ದವು.

ಹನ್ನೊಂದು ಗಂಟೆಗೆ ಮತ್ತೆ ಗಿಡದ ಬಳಿಗೆ ಬಂದೆ. ಈ ಬಗೆಯ ಶ್ರಮವನ್ನು ಇನ್ನೂ ಹೆಚ್ಚಿಗೆ ವಹಿಸುವದು ಸಾಧ್ಯವಿಲ್ಲ ಎಂದು ನನಗೆ ಮನ ದಟ್ಟಾಗಿತ್ತು. ಪಕ್ಷಿಗಳ ಕಲಕಲಾಟದಲ್ಲಿ ಮಧ್ಯಾಹ್ನ ಕಳೆದು ಸಾಯಂಕಾಲ ಸಮೀಪಿಸಿತು. ಸಂಜೆ ಹಕ್ಕಿಗಳು ಕೂಗತೊಡಗಿದವು. ರಾತ್ರಿ ಯಾಯಿತು. ಹತ್ತು ಗಂಟೆಯ ಸುಮಾರಿಗೆ ಚಿಗ ರಿಗಳ ಹಿಂಡೊಂದು ಅಂಜಿ ಕೂಗಿಕೊಂಡಿದ್ದು ಕೇಳಿಸಿತು. ಎಚ್ಚರಿಕೆಯನ್ನೀಯುವಂತೆ ಅವು ಪುನಃ ಪುನಃ ಕೂಗಿದವು.

ಯಾವದೋ ಮಾಂಸಾಹಾರಿ ಪ್ರಾಣಿ ಸಂಚಾರ ಹೊರಟಿತ್ತು — ಇದರಲ್ಲಿ ಸಂದೇಹವಿರಲಿಲ್ಲ. ಸೂಕ್ಷ್ಮ ದೃಷ್ಟಿಯ ಚಿಗರಿಗಳು ಅದನ್ನು ನೋಡಿರ ಬೇಕು ಇಲ್ಲವೆ ಅದರ ವಾಸನೆ ಹಿಡಿದಿರಬೇಕು. ಆದರೆ ಆ ಪ್ರಾಣಿ ಚಿರತೆಯೊ ಹುಲಿಯೊ ಅಥವಾ ನಾನು ಹುಡುಕುತ್ತಿದ್ದ ನರಭಕ್ಷಕನೊ— ಯಾವದೂ ಹೇಳುವಂತಿರಲಿಲ್ಲ. ನಾನು ಹಗ್ಗ ವನ್ನು ಬಲವಾಗಿ ಜಗ್ಗಿ ಸಪ್ಪಳ ಹೆಚ್ಚುವಂತೆ ಮಾಡಿದೆ. ಈ ಅಪರಾತ್ರಿಯಲ್ಲಿ ಇದಾವ ಕಟ್ಟಿಗೆ ಕಡಿಯುವವ ಇಲ್ಲಿಗೆ ಬಂದ ಎಂದು ಹುಲಿ ಯೋಚಿಸಲಿಕ್ಕಿಲ್ಲ ಎಂದು ಆಶಿಸಿದೆ.

ಮಿನಿಟುಗಳು ತಾಸುಗಳಂತೆ ಕಳೆದವು. ಅರ್ಧ

ಮೈಲು ದೂರದಲ್ಲಿರಬೇಕು, ಸಾರಂಗವೊಂದು ಅಂಜಿಕೆಯಿಂದ ಕೂಗಿತು. ಆ ಕೂಗಿನಿಂದ ಅದು ಹೋಗಾರಕಾನದತ್ತ ಓಡುತ್ತಿರಬೇಕು ಅನಿಸಿತು.

ಮತ್ತೆ ಸ್ಮಶಾನಮೌನ ಆವರಿಸಿತು. ಹಗ್ಗ ಜಗ್ಗಿ ಸಪ್ಪಳಮಾಡುತ್ತಲೇ ನಾನು ಹುಲಿ ಬರಬಹುದಾದ ಮಾರ್ಗವನ್ನು ಮನಸ್ಸಿನಲ್ಲಿ ಯೋಚಿಸಿಕೊಳ್ಳುತ್ತ ಪ್ರತಿಯೊಂದು ಗಿಡಗಂಟಿ-ಪೊದೆಯನ್ನೂ ಮಂದ ಚಂದ್ರಪ್ರಕಾಶದಲ್ಲಿ ದಿಟ್ಟಿಸಿನೋಡಿದೆ. ಅವುಗಳಲ್ಲಿ ಅಥವಾ ಅವುಗಳ ಪಕ್ಕದಲ್ಲಿ ಏನೊಂದು ಚಲನವಲನವೂ ಕಂಡುಬರಲಿಲ್ಲ.

ಇನ್ನೇನು, ಯಾವ ನಿಮಿಷದಲ್ಲಿ ಏನಾಗಲಿದೆಯೋ ಎನ್ನುವ ವಿಚಿತ್ರ ಭಾವನೆಯೊಂದು ನನ್ನಲ್ಲಿ ಮೂಡಿತು. ಯಾರೊ ನನ್ನನ್ನು ನೋಡುತ್ತಿದ್ದಾರೆ ಎಂದು ನನಗನಿಸಿತು. ಆದರೆ ಒಂದೇ ಒಂದು ಚಿಕ್ಕಸಪ್ಪಳ ಕೂಡ ಮೌನವನ್ನು ಭಂಗಿಸಲಿಲ್ಲ. ಸಪ್ಪಳ ಮಾಡುತ್ತಲೇ ನಾನು ಕೆಮ್ಮಿದೆ, ಸರಿದಾಡಿದೆ, ಕೊನೆಗೆ ಸೆಟ್ಟಗೆ ಎದ್ದು ನಿಂತು ಪಕ್ಕಾ ಹಿಂದೀಮನುಷ್ಯನಂತೆ ಕೆಮ್ಮಿಉಗುಳಿದೆ. ಆದರೂ ಏನೂ ಸಪ್ಪಳವಾಗಲಿಲ್ಲ. ಮತ್ತೆ ನಾನು ಆಂ! ಅಂದುಕೊಳ್ಳುವಷ್ಟರಲ್ಲಿ ಬಂತು ನರಭಕ್ಷಕ ಹುಲಿ, ನೆಲದಿಂದ ಎದ್ದು ಬಂದಂತೆ.

ಹುಲಿ ಗರ್ಜಿಸಿತು. ಕೇವಲ ಹತ್ತುಗಜ ದೂರದಲ್ಲಿದ್ದ ಪೊದೆಯ ಹಿಂದಿನಿಂದ ದೊಡ್ಡ ಹುಲಿಯೊಂದು ಬಯಲಿಗೆ ಬಂತು — ಸಪ್ಪಳ ಬಂದ ಸ್ಥಳದಲ್ಲಿ ಆಕ್ರಮಣ ಮಾಡಲು.

ನಾನು ಕುಳಿತಿದ್ದ ತಾಣಕ್ಕೆ ನೇರವಾಗಿ ಕೇವಲ ಮೂರೇ ಗಜಗಳ ಕೆಳಗೆ ಹುಲಿಯ ದೊಡ್ಡ ತಲೆ ಕಾಣಿಸಿತು. ಟಾರ್ಚಿನ ಸ್ವಿಚ್ ಒತ್ತಿ ಹೊಳೆಯುವ ಕಣ್ಣುಗಳ ನಡುವೆ ಗುರಿಯಿಟ್ಟು ಗುಂಡು ಹಾರಿಸಿದೆ. ಗುಂಡು ಹಾರಿದ ಸಪ್ಪಳದ ಜೊತೆಯಲ್ಲಿ ಹುಲಿ ನೆಲಕ್ಕೆ ಬಿತ್ತು—ಕೇಳಿದವರ ಎದೆ ನಡುಗಿಸುವಂತೆ ಗರ್ಜಿಸಿ. ನಾನು ಎರಡನೆಯ ಗುಂಡು ಹಾರಿಸಿದೆ. ಹುಲಿ ಮತ್ತೊಮ್ಮೆ ಗರ್ಜಿಸಿ ಈ ಗುಂಡೂ ತನಗೇ ಬಡಿಯಿತು ಎಂದು ಒಪ್ಪಿಕೊಂಡಿತು. ಆದರೆ ಮರುಕ್ಷಣದಲ್ಲೆ ಅದು ಮಾಯವಾಯಿತು. ಸುಮಾರು ೧೦೦ ಗಜಗಳಾಚೆ ನನಗೆ ಕೊನೆಯ ಗರ್ಜನೆ ಕೇಳಿಸಿತು. ಮತ್ತೆ ಮೊದಲಿನಂತೆ ಮೌನ.

ನನ್ನ ಎರಡೂ ಗುಂಡುಗಳ ಗುರಿ ತಪ್ಪಿರಲಿಲ್ಲ, ನಿಜ. ಆದರೆ ಎರಡನೆಯ ಗುಂಡಿನಿಂದಲಾದರೂ ಹುಲಿಯನ್ನು ಮೇಲಕ್ಕೇಳದಂತೆ ಮಲಗಿಸಲಿಲ್ಲ-ವಲ್ಲ ಎಂದು ನನ್ನನ್ನು ನಾನೇ ಶಪಿಸಿಕೊಂಡೆ. ಹುಲಿಗೆ ಭಯಂಕರ ಗಾಯವಾಗಿತ್ತು. ಅದು ಬಹುದೂರ ಹೋಗಲಾರದೆಂಬಲ್ಲಿ ನನಗೆ ಸಂಶಯವಿರಲಿಲ್ಲ. ನಾನು ಶೇಷರಾತ್ರಿಯನ್ನು ತೂಕಡಿಸುತ್ತ ಕಳೆದು ಬೆಳಗಾಗುತ್ತಲೇ ಗಾಯಗೊಂಡ ಹುಲಿಯ ಬೆನ್ನುಹತ್ತಲು ಹಂಚಿಕೆ ಹೂಡುವದಕ್ಕಾಗಿ ಹೊಗರೆಹಳ್ಳಿಗೆ ಹಿಂತಿರುಗಿದೆ.

ಮೂಡಲಗಿರಿ ಗೌಡರು ಬಹು ಉತ್ಸಾಹದಿಂದ ನನ್ನ ಸಹಾಯಕ್ಕೆ ಬಂದರು. ನಾನು ತುಸು ವಿಶ್ರಾಂತಿ ಪಡೆದು ಬಿಸಿ ಬಿಸಿ ಚಹ ಕುಡಿದು ಸಿದ್ಧನಾದೆ. ಎಮ್ಮೆಗಳ ಹಿಂಡೊಂದನ್ನು ಗಾಯಗೊಂಡ ಹುಲಿ ಹೋಗಿರಬಹುದಾದ ಮಾರ್ಗದಲ್ಲಿ ಅಟ್ಟಿಕೊಂಡು ಹೋಗಲು ಅದರ ಮಾಲಕನನ್ನು ಒಪ್ಪಿಸಿದೆ. ಎಮ್ಮೆಗಳು ಸಮೀಪದಲ್ಲಿ ಬಂದಾಗ ಹುಲಿ ತನ್ನ ಇರವಿನ ಪತ್ತೆ ಹತ್ತಗೊಡಬಹುದು ಎಂದು ನಾನಾಶಿಸಿದ್ದೆ.

೯ ಗಂಟೆಯ ಹೊತ್ತಿಗೆ ಮೂಡಲಗಿರಿ ಗೌಡರು, ಇಬ್ಬರು ಆಳುಗಳು, ೧೧ ಎಮ್ಮೆಗಳು ಮತ್ತು ಅವುಗಳ ಮಾಲಕನ ಜೊತೆ ನಾನು ಗಿಡದ ಬಳಿ ಬಂದೆ. ಮೊದಲು ಗಿಡವೇರಿ ಹುಲಿಯೇನಾದರೂ ಕಾಣಿಸುವದೇ ಎಂದು ನೋಡಿದೆ. ಆದರೆ ಏನೂ ಕಾಣಿಸಲಿಲ್ಲ. ಗಿಡದಡಿ ನನ್ನ ಮೊದಲನೆಯ ಗುಂಡಿನ ಪೆಟ್ಟಿನಿಂದ ಸೋರಿದ ರಕ್ತದ ಕಲೆಗಳಿದ್ದವು. ಹುಲಿ ನಂತರ ಹಿಂದೆ ಸರಿದ ಪೊದೆಯ ಹಿಂಬದಿಯಲ್ಲಿ ಮತ್ತಿಷ್ಟು ರಕ್ತದ ಕಲೆಗಳು ನನ್ನ ಎರಡನೆಯ ಗುಂಡಿನ ಪ್ರತಾಪವನ್ನೂ ತೋರಿಸಿದವು.

ಅನಂತರ ಆ ರಕ್ತದ ಕಲೆಗಳ ಗುರುತಿನ ಆಧಾರದಿಂದ ಹುಲಿ ಹೋದ ಮಾರ್ಗದಲ್ಲಿ ನಾವು ಸಾವಕಾಶವಾಗಿ ಎಮ್ಮೆಗಳನ್ನು ಹೊಡೆದುಕೊಂಡು ಹೋದೆವು. ಎಮ್ಮೆಗಳು ಆದಷ್ಟು

ದೂರದೂರವಿರುವಂತೆ ಮಾಡಿದ್ದೆವು. ನಾನು ಎಮ್ಮೆಗಳ ಹಿಂದೆ, ನನ್ನ ಹಿಂದೆ ಇಬ್ಬರು ಆಳುಗಳು ಹೀಗೆ ಹೊರಟೆವು. ಮೂಡಲಗಿರಿ ಗೌಡರು ಮತ್ತು ಎಮ್ಮೆಗಳ ಮಾಲಕ ಗಿಡದ ಮೇಲೆಯೆ ಕುಳಿತರು. ಸುಮಾರು ೨೦೦ ಗಜ ದೂರ ಹೋಗುವಷ್ಟರಲ್ಲಿ ನಮಗೆ ಗುರ್ರ್ ಎಂಬ ಸಪ್ಪಳ ಕೇಳಿಸಿತು. ಅದನ್ನು ಕೇಳಿದೊಡನೆ ಎಮ್ಮೆಗಳು ತಲೆತಗ್ಗಿಸಿ ಇದಿರು ಬಂದದ್ದನ್ನು ಇರಿಯಲು ಕೋಡುಗಳನ್ನು ಗುರ್ರ್ ಸಪ್ಪಳ ಕೇಳಿ ಬಂದ ದಿಕ್ಕಿನಲ್ಲಿ ಮುಂದೆ ಮಾಡಿಕೊಂಡು ನಿಂತವು.

ನನ್ನ ಎಡಕ್ಕೊಂದು ಗಿಡವಿತ್ತು. ಒಬ್ಬ ಆಳಿಗೆ ಅದನ್ನೇರಿ ಹುಲಿಯೇನಾದರೂ ಕಣ್ಣಿಗೆ ಬೀಳುವದೋ ನೋಡೆಂದು ಪಿಸುಮಾತಿನಲ್ಲಿ ಹೇಳಿದೆ. ಆತ ಗಿಡವೇರಿ ಏನೂ ಕಾಣಿಸುವದಿಲ್ಲವೆಂದು ಸನ್ನೆ ಮಾಡಿದ. ಅಷ್ಟರಲ್ಲಿ ಎಮ್ಮೆಗಳು ಹಿಂದಕ್ಕೆ ಸರಿದಿದ್ದವು. ಅವು ಮುಂದಕ್ಕೆ ಹೆಜ್ಜೆಯಿಡಲು ಒಪ್ಪಲಿಲ್ಲ. ಅವನ್ನು ಅಲ್ಲಿಯೇ ಮತ್ತು ಗಿಡವೇರಿದ್ದವನನ್ನು ಗಿಡದ ಮೇಲೆಯೇ ಬಿಟ್ಟು ನಾನು ಮತ್ತು ಇನ್ನೊಬ್ಬ ಆಳು ಮೆಲ್ಲಗೆ ತಿರುಗಿ ಬಂದು ಮೂಡಲಗಿರಿ ಗೌಡರಿಗೆ ನಮ್ಮ ಸಹಾಯಕ್ಕಾಗಿ ಹಳ್ಳಿಯ ಕೆಲ ನಾಯಿಗಳನ್ನು ಕರೆತರಲು ಹೇಳಿದೆವು.

'ಹೂಂ' ಎಂದು ಅವರು ಹೋದವರು ಒಂದೂವರೆ ತಾಸಿನ ನಂತರ ಎರಡೇ ನಾಯಿಗಳ ಜೊತೆಗೆ ತಿರುಗಿ ಬಂದರು. ಎಷ್ಟು ಪ್ರಯತ್ನಪಟ್ಟರೂ ಹೆಚ್ಚಿಗೆ ನಾಯಿಗಳು ಸಿಗಲಿಲ್ಲವೆಂದು ತಿಳಿಸಿದರು. ಎಮ್ಮೆಗಳು ಮುಂದೆ ಹೋಗುವಂತೆ ಮಾಡಲು ನಾಯಿಗಳನ್ನು ಅವುಗಳ ಮೇಲೆ 'ಛೂ' ಬಿಟ್ಟೆವು. ಸುಮಾರು ೨೫ ಗಜ ಮುಂದುವರಿಯುವಷ್ಟರಲ್ಲಿ ಹುಲಿ ಜೋರಾಗಿ ಗುರುಗುಡತೊಡಗಿತು. ಎಮ್ಮೆಗಳು ನಿಂತವು. ನಾಯಿಗಳು ಜೋರಾಗಿ ಬೊಗಳತೊಡಗಿದವು.

ತೀರ ಮುಂದಿನ ಎಮ್ಮೆಗಳ ಮರೆಯಲ್ಲಿ ಆಶ್ರಯ ಪಡೆದು ನಾನು ಮೊಣಕಾಲಮೇಲೆ ಹರಿದು ಅವುಗಳ ಕಾಲ ಸಂದಿಯಿಂದ ಪೊದೆಯಲ್ಲಿರುವ ಹುಲಿಯೇನಾದರೂ ಕಾಣಿಸುವದೇ ಎಂದು ನೋಡಿದೆ. ಏನೂ ಕಾಣಿಸಲಿಲ್ಲ. ಎಮ್ಮೆಗಳನ್ನು ಮುಂದಕ್ಕೆ ಸಾಗಿಸಲು ನಾನು ಅವುಗಳನ್ನು ತಿವಿದೆ. ಆದರೆ ಒಂದು ಎಮ್ಮೆ ತಿರುಗಿ ನಿಂತು ನನ್ನನ್ನೇ ಹಾಯಲು ಯತ್ನಿಸಿತು. ಅದರ ಕೋಡಿನ ಇರಿತವು ಸುದೈವದಿಂದಲೇ ತಪ್ಪಿತು.

ನನ್ನ ಪರಿಸ್ಥಿತಿ ಬಲು ಗಂಭೀರವಾಗಿತ್ತು. ಗಾಯಗೊಂಡ ಕ್ರೂರ ಹುಲಿ ಎದುರಿನಲ್ಲಿ, ಹುಲಿಯಾಗಲಿ ನಾನಾಗಲಿ ಯಾರು ಮುಂಚಿತವಾಗಿ ತಮ್ಮನ್ನು ಕೆಣಕುವರೊ ಅವರಿಂದ ತಮ್ಮ ರಕ್ಷಣೆ ಮಾಡಿಕೊಳ್ಳಲು ಒಕ್ಕಟ್ಟಿನಿಂದ ಮುನ್ನುಗ್ಗಿ ಕೋಡುಗಳಿಂದ ಹಲ್ಲೆ ಮಾಡುವ ಮನೋಭಾವದಲ್ಲಿರುವ ಗಾಬರಿಗೊಂಡ ಎಮ್ಮೆಗಳು ಸುತ್ತಮುತ್ತ. ಕೆಲ ಹೆಜ್ಜೆ ಬಹು ಜಾಗ್ರತೆಯಿಂದ ಹಿಂದೆ ಸರಿದು ಇನ್ನೂ ಮರದ ಮೇಲಿದ್ದ ಆಳಿಗೆ ಕೆಳಗಿಳಿಯಲು ಸಂಜ್ಞೆ ಮಾಡಿದೆ. ಆತನ ಮತ್ತು ಇನ್ನೊಬ್ಬನ ಸಹಾಯದಿಂದ ಎಮ್ಮೆಗಳ ಮೇಲೆ ಹಾಯಿಸಿ ಗುರ್ರ್ ಸಪ್ಪಳ ಬಂದ ಪೊದೆಯ ಮೇಲೆ ಕಲ್ಲುಗಳನ್ನೆಸೆಯತೊಡಗಿದೆ. ಇದರಿಂದ ಹುಲಿಯ ಗುರುಗುಡುವಿಕೆ ಮತ್ತೆ ಪ್ರಾರಂಭವಾಗಿ ಹೆಚ್ಚಾಯಿತೇ ವಿನಾ ಇನ್ನೇನೂ ಆಗಲಿಲ್ಲ. ಹುಲಿಯೇನೂ ಹೊರಬೀಳಲಿಲ್ಲ. ಅದು ಅಲ್ಲಿಂದ ಓಡಲೂ ಯತ್ನಿಸಲಿಲ್ಲ. ಅದರ ಸ್ಥಿತಿ ಶೋಚನಿಯವಾಗಿತ್ತು ಎಂದು ಇದರಿಂದ ನಿಚ್ಚಳವಾಯಿತು.

ಕಲ್ಲೆಸೆತ ವ್ಯರ್ಥವಾಗಲು ನಾನು ಎಮ್ಮೆಗಳನ್ನು ಅಲ್ಲಿಯೆ ಬಿಟ್ಟು ಆಳುಗಳ ಸಹಾಯದಿಂದ ನಾಯಿಗಳ ಜೊತೆಯಲ್ಲಿ ಆ ಪ್ರದೇಶವನ್ನು ಸುತ್ತುವರಿದು ಹುಲಿಯ ಹಿಂಭಾಗದ ಪ್ರದೇಶಕ್ಕೆ ಬಂದೆ. ಪೊದೆಗೆ ೩೦೦ ಗಜವಿರುವಾಗ ನಾವು ಸಾವಧಾನದಿಂದ ಮುಂಬರಿದೆವು. ನಾನು ಹೇಳಿದಾಗಲೆಲ್ಲ ಆಳುಗಳು ಗಿಡವೇರಿ ಹುಲಿ ಕಾಣುವದೇ ಎಂದು ನೋಡುತ್ತಿದ್ದರು. ೨೦೦ ಗಜ ಹೋದಾಗ ಆಳೊಬ್ಬ ಗಿಡದ ಮೇಲಿಂದ ಏನೋ ಕಾಣಿಸುತ್ತಿದೆಯೆಂದು ಸಂಜ್ಞೆ ಮಾಡಿದ. ಕೆಳಗಿಳಿದು ಆತ ಪಿಸು ಮಾತಿನಲ್ಲಿ ಸುಮಾರು ೫೦ ಗಜಗಳಾಚೆ ಇದ್ದ ಪೊದೆಯಲ್ಲಿ ಬಿಳಿ–ಕಂದು ಬಣ್ಣದ ವಸ್ತುವೊಂದು ಕಾಣಿಸುತಿದೆ ಎಂದ.

ಆತನೊಡನೆ ನಾನು ಗಿಡವನ್ನೇರಿದೆ. ಆತ ತೋರಿಸಿದ ಸ್ಥಳವನ್ನು ದಿಟ್ಟಿಸಿ ನೋಡಿದೆ. ಮೊದಲು ಏನೂ ಗೋಚರವಾಗಲಿಲ್ಲ. ಬಳಿಕ ಬಿಳಿ ಕಂದುಬಣ್ಣದ ಗೆರೆಯೊಂದು ಕಣ್ಣಿಗೆ ಬಿತ್ತು. ಆ ಗೆರೆಗೆ ಗುರಿಯಿಟ್ಟು ಗುಂಡು ಹಾರಿಸಿದೆ. ಗುಂಡು ಬಂದ ದಿಕ್ಕನ್ನು ತಪ್ಪಾಗಿ ಗ್ರಹಿಸಿದ ಹುಲಿ ಗರ್ಜಿಸುತ್ತ ಎಮ್ಮೆಗಳ ಮೇಲೆ ಆಕ್ರಮಣ ಮಾಡಿತು. ಅಕಸ್ಮಾತ್ತಾಗಿ ಹುಲಿ ಮೈಮೇಲೆ ಹಾರಿದ್ದರಿಂದ ತೀರ ಮುಂದಿದ್ದ ಎಮ್ಮೆ ಗಾಬರಿಗೊಂಡಿತು. ಉಳಿದ ಎಮ್ಮೆಗಳು ಒಟ್ಟಾಗಿ ಹಾಯಲು ನುಗ್ಗಿದವು. ಹುಲಿಮೈಮೇಲೆ ಹಾರಿದ್ದ ಎಮ್ಮೆ ಅಂಜಿಕೆ-ನೋವುಗಳಿಂದ ಕೂಗಿಕೊಂಡು ಹುಲಿಯನ್ನು ಕೆಳಗೆ ಕೆಡವಲು ಯತ್ನಿಸಿತು. ಹುಲಿ ಎಮ್ಮೆಯ ಬೆನ್ನ ಮೇಲೆ ಕುಳಿತು ಗುರುಗುಡುತ್ತಿತ್ತು.

ಈ ದೃಶ್ಯ ನನ್ನ ಕಣ್ಣಿಗೆ ಸ್ಪಷ್ಟವಾಗಿ ಕಾಣಿಸುತ್ತಿದ್ದರೂ ಹುಲಿ ಸವಾರಿಮಾಡಿದ್ದ ಎಮ್ಮೆಯನ್ನಾಗಲಿ ಹುಲಿಯ ಮೇಲೇರಿ ಬರುತ್ತಿದ್ದ ಎಮ್ಮೆಗಳ-ಲ್ಲೊಂದನ್ನಾಗಲಿ ಕೊಂದೇನೆಂಬ ಭಯದಿಂದ ಗುಂಡು ಹಾರಿಸುವ ಧೈರ್ಯ ನನಗಾಗಲಿಲ್ಲ.

ಎಮ್ಮೆಗಳು ಹುಲಿಯ ಮೇಲೆ ಆಕ್ರಮಣ ಮಾಡಿದವು. ಕೋಡುಗಳ ಇರಿತವನ್ನೂ ಕಂದು ಬಣ್ಣದ ಎಮ್ಮೆಯ ದೇಹಗಳನ್ನೂ ಬಿಟ್ಟು ಇನ್ನೇನೂ ಕಾಣದಂತೆ ಕೋಲಾಹಲವೆದ್ದಿತು. ಗಂಡಾಂತರವನ್ನು ಗ್ರಹಿಸಿದ ಹುಲಿ ಎಮ್ಮೆಯ ಬೆನ್ನ ಮೇಲಿಂದ ಜಿಗಿದು ೨೫ ಗಜ ದೂರದಲ್ಲಿದ್ದ ಗಿಡಗಂಟಿಯ ಮರೆಗೆ ಧಾವಿಸಿತು. ಅದು ಅಲ್ಲಿ ಕುಳಿತು ಎಮ್ಮೆಗಳನ್ನು ನೋಡುತ್ತಿರುವದು ನನಗೆ ಸ್ಪಷ್ಟವಾಗಿ ಕಾಣಿಸಿತು. ಅದರ ಎಡ ಹೆಗಲಿನ ಹಿಂಬದಿಗೆ ಗುರಿಯಿಟ್ಟು ಹೊಡೆದ ಗುಂಡೊಂದು ಅದರ ಪ್ರಾಣ ಹೀರಿತು.

ಆ ಮೇಲೆ ಹುಲಿಯನ್ನು ಪರೀಕ್ಷಿಸಿದಾಗ ಮುನ್ನಾದಿನ ರಾತ್ರಿ ನಾನು ಹೊಡೆದ ಮೊದಲನೆಯ ಗುಂಡು ಅದರ ಬಲದವಡೆಗೆ ಕಣ್ಣಿನಿಂದ ಎರಡಿಂಚು ಕೆಳಗೆ ಬಡಿದು ಅದರ ದವಡೆ ಎಲುಬನ್ನು ಮುರಿದಿತ್ತೆನ್ನುವದು ಗೊತ್ತಾಯಿತು. ಎರಡನೆಯ ಗುಂಡು ಹೊಟ್ಟೆಯೊಳಗಿಂದ ಹಾಯ್ದು ಪಾರಾಗಿತ್ತು. ಆ ತೂತಿನಿಂದ ಕರುಳು ಹೊರಬಿದ್ದಿತ್ತು. ನನ್ನ ಇಂದಿನ ಕೊನೆಯ ಗುಂಡು ಅದರ ಹೃದಯವನ್ನು ಭೇದಿಸಿತು. ತಿಂಗಳುಗಳ ಹಿಂದೆ ಕಾರ್ ಶಿಕಾರಿಗಳ ಗುಂಡಿನಿಂದ ಮುರಿದ ಕೆಳದವಡೆ ಹೇಗೆ ಹೇಗೊ ಗುಣವಾಗಿತ್ತು.

ಹುಲಿ ಆಕ್ರಮಣ ಮಾಡಿದ ಎಮ್ಮೆಗೆ ಅದರ ಉಗುರುಗಳಿಂದ ಬಲವಾದ ಗಾಯಗಳಾಗಿದ್ದವು. ಆದರೆ ಹುಲಿ ಅದನ್ನು ಕಚ್ಚಿರಲಿಲ್ಲ. ದನಗಳಿಗಿಂತ ಎಮ್ಮೆಗಳು ಹೆಚ್ಚು ಗಟ್ಟಿಮುಟ್ಟಾಗಿರುವದರಿಂದ ಈ ಎಮ್ಮೆ ಮುಂದೆ ವಾಸಿಯಾಗಿರಬೇಕು ಎಂದು ನಂಬಿದ್ದೇನೆ.

ಹೀಗೆ 'ಎಮ್ಮೆ ದೊಡ್ಡಿ ನರಭಕ್ಷಕ'ನ ಜೀವನ ಯಾತ್ರೆ ಮುಗಿಯಿತು. ಆ ಪ್ರದೇಶ ಈ ಕ್ರೂರ ಮೃಗದ ಹಾವಳಿಯಿಂದ ಮುಕ್ತವಾಯಿತು. ಆದರೆ ಈ ಅನಾಹುತಕ್ಕೆಲ್ಲ ಹೊಣೆಗೆಟ್ಟ ಕಾರ್ ಶಿಕಾರಿಗಳೇ ಕಾರಣವಾಗಿದ್ದರೆಂದು ಮರೆಯಲಾಗದು. ಇಪ್ಪತ್ತೊಂಬತ್ತು ನಿಷ್ಪಾಪ ಮಾನವರ ಹತ್ಯೆಗೆ ಅವರೇ ಕಾರಣರಾದರೆಂದು ನಿಸ್ಸಂದೇಹವಾಗಿ ಹೇಳಬಹುದು.

---

## ಬೇಟೆ

ಕಾಡು ಪ್ರಾಣಿಗಳು ಎಂದೂ ಮೋಜಿಗಾಗಿ ಕೊಲ್ಲುವುದಿಲ್ಲ. ತನ್ನ ಜೀವಿ ಬಂಧುಗಳನ್ನು ಚಿತ್ರಹಿಂಸೆ ಮಾಡಿ ಕೊಲ್ಲುವುದರಲ್ಲಿ ಮೋಜನ್ನು ಅನುಭವಿಸುವ ಪ್ರಾಣಿಯೆಂದರೆ ಮನುಷ್ಯನೊಬ್ಬನೇ.

—ಜೆ. ಎ. ಫ್ರಾಡ್

ಮನುಷ್ಯನಿಗೆ ಹುಲಿಯ ಕೊಲೆ ಮಾಡಬೇಕೆನಿಸಿದರೆ ಅದನ್ನು ಬೇಟೆಯೆಂದು ಕರೆಯುತ್ತಾನೆ; ಹುಲಿಗೆ ಮನುಷ್ಯನನ್ನು ಕೊಲೆ ಮಾಡಬೇಕೆನಿಸಿದಾಗ ಅದನ್ನು ಹಿಂಸ್ರತ್ವ ಎಂದು ಕರೆಯುತ್ತಾನೆ.

—ಬರ್ನಾರ್ಡ್ ಶಾ

# ವಾರಗಳು ಹೇಗೆ ಹುಟ್ಟಿದವು?

**ಮೂರು, ನಾಲ್ಕು, ಐದು, ಎಂಟು, ಹತ್ತು ದಿನಗಳ ವಾರಗಳೂ ಇದ್ದವು ಗೊತ್ತೆ?**

ವಾರಗಳು ಮತ್ತು ಅದರ ಏಳು ದಿನಗಳು ನಮ್ಮ ಜೀವನದಲ್ಲಿ ಎಷ್ಟು ಸರಿಬೆರಿಕೆಯಾಗಿ ಬಿಟ್ಟಿವೆಯೆಂದರೆ ಅವು ನಮ್ಮ ನಾಡಿಯ ಬಡಿತಗಳಷ್ಟೇ ಸಹಜವೆನಿಸುತ್ತವೆ. ಇಂದು ಜಗತ್ತಿನಲ್ಲೆಲ್ಲ ಏಳು ದಿನಗಳ ವಾರ ಪ್ರಚಲಿತವಾಗಿರುವುದರಿಂದ ಇದು ಮಾನವ ಕುಲದಷ್ಟೇ ಪುರಾತನ ಮತ್ತು ಸರ್ವವ್ಯಾಪಿಯೆಂದು ತೋರುವುದು ಸಹಜ. ಆದರೂ ಏಳು ದಿನಗಳ ವಾರ ಮೊದಲು ಜಗತ್ತಿನ ಎಲ್ಲ ಕಡೆ ಇದ್ದಿಲ್ಲ.

ಜಗತ್ತಿಗೆ ಬಹುಮುಖ ವಿಜ್ಞಾನವನ್ನು ದಾನ ಮಾಡಿದ ಪ್ರಾಚೀನ ಗ್ರೀಸ್ ದೇಶದಲ್ಲಿ ಏಳು ದಿನಗಳ ವಾರದ ಬದಲು ತಿಂಗಳನ್ನು ಹತ್ತು ಹತ್ತು ದಿನಗಳ ಮೂರು ಭಾಗಗಳಾಗಿ ಮಾಡಿದ್ದರು. ರೋಂ ದೇಶದಲ್ಲಿ ಎಂಟು ದಿನಗಳ "ವಾರ"ಗಳಿದ್ದವು. ಭಾರತದಲ್ಲಿ ಕೂಡ ಹಳ್ಳಿಗರು ವಾರವನ್ನು "ಅಠವಾಡೆ" ಎಂದು ಕರೆಯುವುದರಿಂದ ಇಲ್ಲಿಯೂ ಎಂಟು ದಿನಗಳ ವಾರ ಪರಿಚಿತವಾಗಿದ್ದಿರಬೇಕು. ಚೀನದಲ್ಲಂತೂ ತಿಂಗಳುಗಳ ಕಲ್ಪನೆ ಕೂಡ ಇರಲಿಲ್ಲ. ವರ್ಷವನ್ನು ೬೦ ದಿನಗಳ ಭಾಗಗಳಾಗಿ ಮಾಡಿ ಈ ೬೦ ದಿನಗಳನ್ನು ಮತ್ತೆ ೧೦-೧೦ ಅಥವಾ ೧೨-೧೨ ದಿನಗಳ ಉಪಭಾಗಗಳಾಗಿ ವಿಂಗಡಿಸುತ್ತಿದ್ದರು. ಬೋಗೋಟಾದಲ್ಲಿ ಮೂರು-ಮೂರು, ಪಶ್ಚಿಮ ಆಫ್ರಿಕದಲ್ಲಿ ನಾಲ್ಕು-ನಾಲ್ಕು, ಮಧ್ಯ ಆಫ್ರಿಕ ಮತ್ತು ಅಸೀರಿಯದಲ್ಲಿ ಐದೈದು, ಅಮೇರಿಕದ ಪ್ರಸಿದ್ಧ ಪುರಾತನ ಇಂಕಾ ಸಂಸ್ಕೃತಿಯಲ್ಲಿ ಹತ್ತು ಹತ್ತು ದಿನಗಳು ಹೀಗೆ ಬಗೆಬಗೆಯಾಗಿ "ವಾರ"ಗಳ ವಿಂಗಡಣೆ ಇತ್ತು.

ಹಾಗಾದರೆ ಎಂದು ಯಾರಿಂದ ಈ ಏಳು ದಿನಗಳ "ವಾರ" ಅಥವಾ ಸಪ್ತಾಹ ಪ್ರಾರಂಭವಾಯಿತು? ಈ ವಿಷಯದಲ್ಲಿ ಪಂಡಿತರಲ್ಲಿ ಒಮ್ಮತವಿಲ್ಲ. ಅದು ಇಜಿಪ್ತ ಅಥವಾ ಭಾರತದಿಂದ ಹೊರಟಿರಬೇಕೆಂದು ಅವರ ಅನುಮಾನ. ಇದು ಭಾರತದ ಕೊಡುಗೆಯೇ ಎಂದು ಸಾಧಿಸುವವರಿದ್ದಾರೆ. ಆದರೆ ಪುರಾತನ ಭಾರತದಲ್ಲಿ ಈಗ ನಮಗೆ ಗೊತ್ತಿರುವಂತೆ ಸಪ್ತಾಹಗಳಿದ್ದವೆಂಬುದಕ್ಕೆ ನಿಶ್ಚಿತ ದಾಖಲೆಗಳಿಲ್ಲೆಂದು ಹೇಳಲಾಗುತ್ತದೆ. ಪ್ರಸಿದ್ಧ ಜ್ಯೋತಿಷ ಶಾಸ್ತ್ರಿಯಾದ ವರಾಹಮಿಹಿರಾಚಾರ್ಯನು ಯುಗಗಳಿಂದಾರಂಭಿಸಿ ಕ್ಷಣಗಳ ವರೆಗೆ ಅನೇಕ ದೊಡ್ಡ-ಸಣ್ಣ ಕಾಲವಿಭಾಗಗಳನ್ನು ಹೇಳಿದ್ದರೂ ವಾರ ಅಥವಾ ಸಪ್ತಾಹಗಳ ಸುದ್ದಿ ಎತ್ತಿಲ್ಲವೆಂಬುದರಿಂದ ಅವನ ಕಾಲದ ಭಾರತದಲ್ಲಿ (ಕ್ರಿ. ಶ. ೫-೬ ನೇ ಶತಮಾನ) ವಾರಗಳ ಪರಿಚಯ ಇರಲಾರದು. ನಮ್ಮ ಪ್ರಮುಖ ಕಾಲವಿಭಾಗ "ಪಕ್ಷ"ಗಳದು. ಪ್ರಾಚೀನ ಪಾಠಶಾಲೆಗಳಲ್ಲಿ ವಿದ್ಯಾರ್ಥಿಗಳಿಗೆ "ಅನಧ್ಯಾಯ" ಅಥವಾ ರಜಾ ದಿನಗಳು ಕೂಡ ವಾರಗಳ ಮೇಲಿಂದಲ್ಲ, ಪಕ್ಷದ ದಿನಗಳಾದ ತಿಥಿಗಳಿಂದ ನಿರ್ಧಾರವಾಗುತ್ತಿದ್ದವು. ಹೀಗಾಗಿ ವಾರಗಳು ನಮ್ಮಲ್ಲಿ ವಿದೇಶಿ ಸಂಪರ್ಕದಿಂದ ಏಳೆಂಟನೆಯ ಶತಮಾನದ ನಂತರ ಬಂದಿರಬಹುದು ಎನ್ನುವವರಿದ್ದಾರೆ.

ಏಳು ದಿನಗಳ ಕಾಲವಿಭಜನೆಗೆ ಇಜಿಪ್ತವೇ

ತಾಯಿಯೆಂದು ಭಾವಿಸಲಾಗಿದೆ. ೨೮ ದಿನಗಳ ಚಾಂದ್ರಮಾಸವನ್ನು ನಾಲ್ಕು ಭಾಗವಾಗಿ ಇಜಿಪ್ಶನ್ ಪುರೋಹಿತ ವರ್ಗವು ವಿಂಗಡಿಸಿತ್ತು. ಅವರಿಂದ ಅನೇಕ ಶಾಸ್ತ್ರಗಳನ್ನು ಕಲಿತ ಗ್ರೀಕರು ಸಪ್ತಾಹಗಳನ್ನೂ ದಿನಗಳ ಹೆಸರುಗಳನ್ನೂ ಎರವಲು ತೆಗೆದುಕೊಂಡು ಭಾರತವನ್ನೊಳಗೊಂಡು ನಾಗರಿಕ ಜಗತ್ತಿನಲ್ಲೆಲ್ಲ ಪಸರಿಸಿರಬೇಕೆಂದು ಬಹುಜನ ಪಂಡಿತರ ನಂಬಿಕೆ. ಆದರೆ ವಾರಗಳ ಹೆಸರುಗಳಿಲ್ಲದಿದ್ದರೂ ಏಳು ದಿನಗಳ ವರ್ಗೀಕರಣವು ವೇದದಲ್ಲಿದೆಯೆಂದು ಕೆಲ ವಿದ್ವಾಂಸರು ತೋರಿಸಿದ್ದಾರೆ.

ಯುರೋಪಿನಲ್ಲಿ ೫-೬ ನೇ ಶತಮಾನಗಳಲ್ಲಿ ಸಪ್ತಾಹಪದ್ಧತಿ ರೂಢವಾಯಿತು. ಅದು ಭಾರತದಿಂದ ಹೊರಗೆ ಹೋಗಿರಲಿ, ಇಜಿಪ್ತದಿಂದ ಗ್ರೀಕರ ಮೂಲಕ ಭಾರತಕ್ಕೆ ಬಂದಿರಲಿ, ವಾರಗಳ ಮೂಲ ಮಾತ್ರ ಒಂದೇ ಎಂಬಲ್ಲಿ ಮಾತ್ರ ಸಂಶಯವಿಲ್ಲ. ಯಾಕೆಂದರೆ, ಎರಡೂ ದೇಶಗಳಲ್ಲಿ ಅದೇ ವರಸೆಯಲ್ಲಿ ಅವೇ ಗ್ರಹಗಳ ಹೆಸರುಗಳು ವಾರಗಳಿಗಿವೆ. ನಾವು ರವಿವಾರ ಎನ್ನುವುದಕ್ಕೆ ಇಂಗ್ಲೀಷಿನಲ್ಲಿ **ಸನ್** (= ಸೂರ್ಯ) ಡೇ, ಸೋಮವಾರಕ್ಕೆ **ಮನ್** (= ಮೂನ್ = ಚಂದ್ರ) ಡೇ, ಮಂಗಳವಾರಕ್ಕೆ **ಟ್ಯೂಸ್** (= ಮಂಗಳ) ಡೇ ಇತ್ಯಾದಿ ಹೆಸರುಗಳು ಅಲ್ಲಿ ಇವೆ. ಅದೇ ರೀತಿ ಲ್ಯಾಟಿನ್ ಭಾಷೆಯಲ್ಲಿ ಆಯಾ ಗ್ರಹಗಳಿಗಿರುವ Solis, Lunae, Martis, Mercurii, Jovis, Venris ಮತ್ತು Saturnei ಎಂಬ ಹೆಸರುಗಳೇ ಆಯಾ ವಾರಗಳಿಗೆ ಬಳಕೆಯಲ್ಲಿವೆ.

ನಾವೀಗ ವಾರಗಳಿಗೆ ಉಪಯೋಗಿಸುವ ಗ್ರಹಗಳ ಹೆಸರುಗಳು ಹೇಗೆ ರೂಢವಾದವು? ಈ ಹೆಸರುಗಳನ್ನಿಟ್ಟವರು ಭಾರತೀಯರೇ ಇರಲಿ ಇಜಿಪ್ತದವರೇ ಇರಲಿ, ಅವರಿಗೆ ಗ್ರಹಗಳ ಚಲನವಲನಗಳ ಪರಿಚಯ ಸಾಕಷ್ಟಿತ್ತೆಂಬುದು ಖಂಡಿತ. ಸೂರ್ಯ, ಚಂದ್ರ ಇವರಿಬ್ಬರು ನಮಗೆ ಮುಖ್ಯ ಜ್ಯೋತಿಗಳು. ಆದ್ದರಿಂದ ಮೊದಲಿನ ಎರಡು ದಿನಗಳಿಗೆ ಪುರಾತನರು ಅವುಗಳ ಹೆಸರನ್ನಿಟ್ಟರು. ಅನಂತರದ ದಿನಗಳ ಹೆಸರುಗಳನ್ನಿಡುವಾಗ ಅವರು ಒಳ್ಳೇ ಕೌಶಲವನ್ನು ತೋರಿಸಿದ್ದಾರೆ.

ಪುರಾತನರಿಗೆ ಸೂರ್ಯಚಂದ್ರರಲ್ಲದೆ ಮಂಗಳ, ಬುಧ, ಗುರು, ಶುಕ್ರ, ಶನಿ ಈ ಐದು ಗ್ರಹಗಳ ಪರಿಚಯ ಮಾತ್ರ ಇತ್ತು. ಈ ಗ್ರಹಗಳು ಸೂರ್ಯನಿಂದ ಹಿಡಿದು ಎಣಿಸಿದರೆ ಈ ಕೆಳಗಿನ ವರಸೆಯಲ್ಲಿ ಇವೆ. ಸೂರ್ಯನ ಸಮೀಪ ಬುಧ, ಅನಂತರ ಶುಕ್ರ, ಆ ಮೇಲೆ ಮಂಗಳ, ಆ ಮೇಲೆ ಗುರು, ಕೊನೆಗೆ ಶನಿ. ಈ ಗ್ರಹಗಳನ್ನು ಈ ಕೆಳಗಿನ ವರಸೆಯಿಂದ ಅವರು ಐದು ವಾರಗಳಿಗೆ ಅಧಿಪತಿಯಾಗಿ ಗೊತ್ತುಮಾಡಿದರು. ರವಿಯಿಂದ ನಾಲ್ಕನೆಯಾತ ಮಂಗಳ, ಮೂರನೇ ವಾರದ ಅಧಿಪತಿ, ಮಂಗಳನಿಂದ (ರವಿಯನ್ನು ಬಿಟ್ಟು) ನಾಲ್ಕನೆಯಾತ ಬುಧ, ಬುಧನಿಂದ ನಾಲ್ಕನೆಯಾತ ಗುರು, ಅವನಿಂದ ನಾಲ್ಕನೆಯಾತ ಶುಕ್ರ, ಅವನಿಂದ ನಾಲ್ಕನೆಯವ ಶನಿ—ಹೀಗೆ ನಾಲ್ಕನೆಯ ವರಸೆಯಿಂದ ವಾರಗಳಿಗೆ ಹೆಸರುಗಳಾದವು.

ಆದರೆ ಎಲ್ಲ ದೇಶಗಳಲ್ಲಿಯೂ ವಾರಗಳಿಗೆ ಗ್ರಹಗಳ ಹೆಸರುಗಳಿಲ್ಲ. ಅರಬರೂ ಇರಾಣಿಗಳೂ ಏಳು ದಿನಗಳ ವಾರಗಳನ್ನೇ ಅನುಸರಿಸುತ್ತಿದ್ದರೂ ಅವರು ಗ್ರಹಗಳ ಗೊಡವೆಗೆ ಹೋಗದೇ ಒಂದನೇ ದಿನ, ಎರಡನೇ ದಿನ . . . . ಹೀಗೆಯೇ ಹೆಸರಿಟ್ಟಿದ್ದಾರೆ. ಈ ಪ್ರಕಾರ ಅರಬರು ರವಿವಾರವನ್ನು ಯೋಮ್ (ದಿನ) ಉಲ್ (ನೇ) ಅಹದ್ (= ಒಂದು) ಎಂದೂ ಸೋಮ ಮಂಗಳ ಬುಧ ಗುರುವಾರಗಳನ್ನು ಯೋಮುಲ್ ಇಸ್ನೈನ್ (= ಎರಡು), ಯೋಮುಸ್ಸಲಾಸಾ (ಸಲಾಸಾ = ಮೂರು), ಯೋಮುಲ್ ಅರಬಆ (= ನಾಲ್ಕು), ಯೋಮುಲ್ ಖಮೀಸ್ (= ಐದು) ಎಂದೂ ಕರೆಯುತ್ತಾರೆ. ಶುಕ್ರವಾರಕ್ಕೆ ಅವರು ಯೋಮುಲ್ ಜುಮಆ ಎನ್ನುತ್ತಾರೆ. ಜುಮಆ ಅಂದರೆ ಸೇರುವುದು. ಶುಕ್ರವಾರ ದಿನ ಮುಸ್ಲಿಮರು ಪ್ರಾರ್ಥನೆಗಾಗಿ ಒಂದೆಡೆ ಸೇರುವುದರಿಂದ ಈ ಹೆಸರು. ಇದರಿಂದಲೇ ಜುಮ್ಮಾ ಮಸೀದೆ ಇತ್ಯಾದಿ ಹೆಸರುಗಳು ಹುಟ್ಟಿವೆ. ಏಳನೇ ದಿನ ಅರಬರಿಗೆ ಜೋಮುಲ್ ಸಬ್ತ್. ಸಬ್ತ್ ಎಂದರೆ ವಿಶ್ರಾಂತಿ. ಇಂಗ್ಲೀಷಿ

ನಲ್ಲಿಯೂ ವಿಶ್ರಾಂತಿಯ ದಿನಕ್ಕೆ ಸಬ್ಬತ್ ಎಂಬ ಹೆಸರು ಸಿಗುತ್ತದೆ. ಕ್ರೈಸ್ತ, ಮುಸ್ಲಿಂ ಮತ್ತು ಇವೆರಡಕ್ಕೂ ಮೂಲವಾಗಿರುವ ಯಹೂದ್ಯ ನಂಬಿಕೆಯ ಪ್ರಕಾರ ದೇವರು ಆರು ದಿನಗಳಲ್ಲಿ ಜಗತ್ತನ್ನು ಸೃಷ್ಟಿಸಿ ಏಳನೇ ದಿನ ವಿಶ್ರಮಿಸಿದನು. ಆದ್ದರಿಂದಲೇ ಆ ದಿನಕ್ಕೆ ಈ ಹೆಸರು.

ಫಾರಸಿ ಭಾಷೆಯಲ್ಲಿ ದಿನಕ್ಕೆ ಶಂಬಾ ಎಂದು ಹೆಸರು. ಇರಾಣದವರು ವಾರಗಳಿಗೆ ಸರಳವಾಗಿ ಏಕ ಶಂಬಾ, ದೋ ಶಂಬಾ, ಸೇಹ ಶಂಬಾ, ಚಹಾರ ಶಂಬಾ, ಪಂಜ ಶಂಬಾ ಎಂದು ಹೇಳಿ, ಮುಸ್ಲಿಮರಾದುದರಿಂದ ಶುಕ್ರವಾರಕ್ಕೆ ಜುಮಾ ಎಂದರು. ಶನಿವಾರಕ್ಕೆ ಅವರು ಶಂಬಾ ಅಥವಾ ಅದರ ಪುರಾತನ ರೂಪವಾದ ಶಂಬಿದ ಎಂದಿಷ್ಟೇ ಹೆಸರಿತ್ತರು. ಇರಾಣದಲ್ಲಿ ಸೋಮವಾರಕ್ಕೆ ಪೀರ ಎಂದೂ ಹೆಸರಿದೆ. ಪೀರ ಎಂದರೆ ಅರಬ್ಬಿಯಲ್ಲಿ ಹಿರಿಯರು ಎಂದರ್ಥ. ಹಜರತ್ ಮುಹಮ್ಮದರ ಜನ್ಮ ಮತ್ತು ಮರಣದ ದಿನ ಸೋಮವಾರವಾದ್ದರಿಂದ ಈ ಹೆಸರು ಆ ವಾರಕ್ಕೆ ಬಿದ್ದಿರಬಹುದು.

ಚೀನದಲ್ಲಿಯೂ ವಾರದ ದಿನಗಳು ಸಂಖ್ಯಾವಾಚಕವಾಗಿಯೇ ಇವೆ. ಅವರು ವಾರಪದ್ಧತಿಯನ್ನು ಅರಬರಿಂದ ತೆಗೆದುಕೊಂಡಿರಬಹುದು. ಆದರೆ ಅವರು ರವಿವಾರಕ್ಕೆ ಲೀಪಾಯಿ ಜ ಅಥವಾ ಲೀಪಾಯಿ ರಿಹ್ ಎಂಬ ಹೆಸರಿಟ್ಟಿದ್ದಾರೆ. ಲೀಪಾಯಿ ಎಂದರೆ "ಪೂಜಾದಿನ" ಅಥವಾ ಬರೇ "ದಿನ" ಎಂದರ್ಥ. ಜ ಅಥವಾ ರಿಹ್ ಎಂದರೆ ಸೂರ್ಯನೆಂಬ ಅರ್ಥ ಹೊರಡುತ್ತದೆ. ಸೋಮವಾರದಿಂದ ಶನಿವಾರದ ವರೆಗೆ ಒಂದನೇ ದಿನ, ಎರಡನೇ ದಿನ....ಆರನೇ ದಿನ ಹೀಗೆ ಅರ್ಥ ಬರುವಂತೆ ಲೀಪಾಯಿ ಈ, ಲೀಪಾಯಿ ಅರ್ಹ, ಲೀಪಾಯಿ ಸಾನ್, ಲೀಪಾಯಿ ಸೂ, ಲೀಪಾಯಿ ಊ, ಲೀಪಾಯಿ ಲ್ಯೂ ಎಂದು ಚೀನೀಯರು ಹೆಸರುಗಳನ್ನಿಟ್ಟಿದ್ದಾರೆ.

---

## ಕಾವ್ಯ-ಬಿಂದು

**ಗಾಳಿ ಮಲಗಿದೆ ಉಷೆಯ ತೋಳಿನಲಿ ಮೈಮರೆತು ಇರುಳೆಲ್ಲ ಅತ್ತ ಹಸು-ಗೂಸಿನಂತೆ.**

— ಸರೋಜಿನಿ ನಾಯುಡು
("Coromandil Fishers"ನಿಂದ)

*

**— ಇಲ್ಲ, ಸತ್ತಿಲ್ಲಾತ,**
**ಎಚ್ಚರಂಗೊಂಡಿಹನು ಜೀವನ ಸ್ವಪ್ನದಿಂದ.**

— ಶೆಲ್ಲಿ
(Adonias ಕವನದಿಂದ)

*

**ಮೋಡ ಹೇಳಿತು : "ಸಾಗರವೇ, ನಿನ್ನ ಬಾಳ್ ಹಾಳು, ನೀರಡಿಸಿದವಗೆ ನೀಡುವೊಡಿಲ್ಲ ಹನಿ ನೀರು!" ಕಡಲು ಹೇಳಿತು : "ತಂದೆಯನ್ನೆ ನಿಂದಿಪ ಮೂಢ, ಇಲ್ಲಿ ಬಿದ್ದರೆ ಮತ್ತೆ ಕುಡಿವರೇ ನಿನ್ನನ್ನು ಕೂಡ?"**

— ರಜನೀಕಾಂತ ಸೇನ
(ಬಂಗಾಲಿಯಿಂದ)

*

**ಮನುಜರೆಸಗಿದ ಕೇಡು ಉಳಿಯುವುದು ಅವರ ನಂತರವೂ ಅವರ ಪುಣ್ಯಗಳಷ್ಟೆ. ಅವರ ಹೆಣಗಳ ಕೂಡ ಮಣ್ಣಾಗುವವು ಎಷ್ಟೊ ವೇಳೆ—**

— ಶೇಕ್‌ಸ್ಪಿಯರ್ (Julius Caesarನಿಂದ)

# ನಗೆ — ಮಲ್ಲಿಗೆ

### ಕಷ್ಟಪರಿಹಾರ

ರಾಮು, ಭೀಮು ಇಬ್ಬರೂ ಏಕಕಾಲಕ್ಕೆ ಎರಡು ಕುದುರೆಗಳನ್ನು ಕೊಂಡರು. ಯಾವ ಕುದುರೆ ಯಾರದು ಎಂದು ನಿಶ್ಚಿತವಾಗಿ ಹೇಳುವದು ಹೇಗೆ ಎಂದವರು ಯೋಚಿಸಿದರು. ರಾಮು ತನ್ನ ಕುದುರೆಯ ಆಯಾಲನ್ನು ಕತ್ತರಿಸಿದ. ಮೊದಲು ಈ ಉಪಾಯ ಸರಿಯೆನಿಸಿದರೂ ಆಯಾಲು ಮತ್ತೆ ಬೆಳೆದಾಗ ಮೊದಲಿನ ಪ್ರಶ್ನೆಯೆ ಉದ್ಭವಿಸಿತು. ಆಗ ಭೀಮು ತನ್ನ ಕುದುರೆಯ ಬಾಲದ ಕೂದಲು ಕತ್ತರಿಸಿದ. ಆ ಬಾಲದ ಕೂದಲು ಕೂಡ ಮತ್ತೆ ಬೆಳೆಯಲು ಮಿತ್ರರಿಬ್ಬರೂ ದೀರ್ಘ ವಿಚಾರಕ್ಕೆ ಬಿದ್ದರು.

ಕಡೆಗೆ ಅವರು ತಮ್ಮ ಕುದುರೆಗಳನ್ನು ನೋಡಿ ಯಾರದು ಎತ್ತರ, ಯಾರದು ಗಿಡ್ಡ ಎನ್ನುವದರ ನೆನಪಿಟ್ಟುಕೊಳ್ಳಲು ನಿರ್ಧರಿಸಿದರು. ಅಳೆದು ನೋಡಿದಾಗ ಅವರಿಗೆ ರಾಮುನ ಬಿಳಿ ಕುದುರೆ ಭೀಮುನ ಕರಿ ಕುದುರೆಗಿಂತ ಅರ್ಧ ಗೇಣು ಎತ್ತರವಾಗಿರುವದು ಗೊತ್ತಾಯಿತು.

### ಸಬಲ ಕಾರಣ

ತನ್ನ ಹೆಂಡತಿ ತನ್ನನ್ನು ತುಂಬ ಪೀಡಿಸುತ್ತಾಳಾದ್ದರಿಂದ ವಿವಾಹವಿಚ್ಛೇದನಕ್ಕೆ ಅಪ್ಪಣೆ ಕೊಡಬೇಕೆಂದು ಒಬ್ಬ ಅರ್ಜಿ ಹಾಕಿಕೊಂಡಿದ್ದ. ಮ್ಯಾಜಿಸ್ಟ್ರೇಟರು ಅವನ ಹೇಳಿಕೆ ಬರೆದುಕೊಳ್ಳತೊಡಗಿದಾಗ ಆ ಮನುಷ್ಯ ಹೇಳಿದ: "ಸ್ವಾಮಿ, ನನಗೆ ಸಾಕಾಗಿ ಹೋಗಿದೆ. ಹೋದ ವರ್ಷ ಲಾಟರಿಯಲ್ಲಿ ೫೦,೦೦೦ ರೂಪಾಯಿ ಸಿಕ್ಕಂತೆ ನನಗೆ ಕನಸು ಬಿತ್ತು. ನನಗೆ ಎಚ್ಚರಾಗುವ ಮೊದಲೇ ನಾನು ಆ ಹಣ ಯಾಕೆ ಬ್ಯಾಂಕಿನಲ್ಲಿಡಲಿಲ್ಲ ಎಂದು ನನ್ನ ಹೆಂಡತಿ ಹಗಲು ರಾತ್ರಿ ಒಂದೇ ಸಮನೆ ನನ್ನ ಜೀವ ಹಿಂಡುತ್ತಿದ್ದಾಳೆ. ನನ್ನ ತೂಕ ೧೫ ಪೌಂಡು ಕಡಿಮೆಯಾಗಿದೆ. ದಯವಿಟ್ಟು ವಿವಾಹವಿಚ್ಛೇದನಕ್ಕೆ ಅಪ್ಪಣೆ ದಯಪಾಲಿಸಬೇಕು."

### ಅದೃಷ್ಟದ ತಾಯಿತ

"ಓಹೊಹೋ! ಬಹಳ ದಿನಗಳ ನಂತರ ಭೆಟ್ಟಿಯಾಯಿತು! ಅಂಗಡಿ ಚೆನ್ನಾಗಿ ನಡೆದಿದೆ ತಾನೇ?"

"ಇಲ್ಲ. ಹೋದವರ್ಷ ಅಂಗಡಿ ಸುಟ್ಟು ಹೋಯಿತು."

"ಅಂ! ಪಾಪ! ಹೆಂಡತಿಮಕ್ಕಳು ಚೆನ್ನಾಗಿದ್ದಾರಷ್ಟೇ?"

"ಊಂ ಹುಂ. ಹೆಂಡತಿ ಸತ್ತು ಆರು ತಿಂಗಳಾಯಿತು. ಮಗ ಜೇಲಿಗೆ ಹೋಗಿ ಮೂರು ತಿಂಗಳಾಯಿತು."

"ಅಯ್ಯೊ! ಪಾಪ! ಬಹಳ ಕಷ್ಟ ಬಂತು ನಿಮಗೆ! ಕನಿಷ್ಠ ನಿಮ್ಮ ಆರೋಗ್ಯ ಮತ್ತು ಉದ್ಯೋಗವಾದರೂ ಚೆನ್ನಾಗಿದೆ ತಾನೇ?"

"ಓಹೊ! ನನ್ನ ಉದ್ಯೋಗ ಬಹಳ ಚೆನ್ನಾಗಿ ನಡೆದಿದೆ. ನಾನು ಅದೃಷ್ಟದ ತಾಯಿತಗಳನ್ನು ಮಾರುತ್ತಿದ್ದೇನೆ."






Edited, printed and published by H. R. Moharay at
the Samyukta Karnatak Press, Koppikar Road, Hubli.



Regd. No. B 7487

**KASTUF**

September 19

A comprehensive Kannada Monthly Digest which circula throughout the New Mysore State and commands the high number of readers wherever Kannada is spoken in India. It cat to all tastes and is appreciated by all alike.

**As. 12**
(75 nP)

# ಈ ಸಂಚಿಕೆಯಲ್ಲಿ

ಓದದೆ ಬಿಡಲಾರದ ಲೇಖಗಳಲ್ಲಿ ಕೆಲವು.......

ಜಿರಾಫೆಯ ವಿಚಿತ್ರ ಜೀವನ

ಮಯೂರ ಸಿಂಹಾಸನದ ದುರಂತ

ಗಂಡನಿಗೆ ಬಾಣಂತಿತನ

ನೀರ ಮೇಲೆ ನಡೆಯುವ ಯೋಗಿ

ನಾಲ್ಕು ಸುಂದರ ಕಥೆಗಳು

ಬುರುಡೆ ಬಿಂದಾಚಾರ್ಯರು

......ಇತ್ಯಾದಿ ಇತ

ಪುಸ್ತಕ ವಿಭಾಗ

## ಎಮ್ಮೆದೊಡ್ಡಿಯ ಹುಲಿ ಶಿಕಾರಿ

ಲೋಕಶಿಕ್ಷಣ ಟ್ರಸ್ಟಿನ ಪ್ರಕಾಶನ